# ದಾಸ ಸಾಹಿತ್ಯ

ಸಂಪಾದಕರು

ಡಾ॥ ಎ. ಸೀತಾರಾಮಯ್ಯ

ಪ್ರೊ. ಜಿ. ವೆಂಕಟಸುಬ್ಬಯ್ಯ

ಲೇಖಕರು

ಎನ್. ಕೆ. ಕುಲಕರ್ಣಿ

ಪ್ರೊ. ಎಸ್. ಕೆ. ರಾಮಚಂದ್ರರಾವ್

ಪ್ರೊ. ಕೆ. ಸಂಪದ್ಗಿರಿರಾವ್

ಕವಿ ಕಾವ್ಯ ಪರಂಪರೆ—೨೦

# ದಾಸ ಸಾಹಿತ್ಯ

ಎನ್. ಕೆ. ಕುಲಕರ್ಣಿ
ಪ್ರೊ. ಎಸ್. ಕೆ. ರಾಮಚಂದ್ರರಾವ್
ಪ್ರೊ. ಸಂಪದ್ಗಿರಿರಾವ್




ಐಬಿಎಚ್ ಪ್ರಕಾಶನ
ಗಾಂಧಿನಗರ, ಬೆಂಗಳೂರು 560 009

*



*

ಸಂಪಾದಕರು : ದಿ|| ವಿ. ಸೀತಾರಾಮಯ್ಯ
ಪ್ರೊ. ಜಿ. ವೆಂಕಟಸುಬ್ಬಯ್ಯ

*

ಮೊದಲನೆಯ ಮುದ್ರಣ : 1987. ಪ್ರಕಾಶಕರು : ಐಬಿಎಚ್ ಪ್ರಕಾಶನ ಇವರ ಪರವಾಗಿ ಜಿ.ಕೆ.ಅನಂತರಾಮ್ ಐದನೆಯ ಮುಖ್ಯ ರಸ್ತೆ ಗಾಂಧಿನಗರ ಬೆಂಗಳೂರು 560 009
ಮುದ್ರಕರು : ಎಂ. ಎಸ್. ರಾಮ ಮೋಹನ್ ಇಳಾ ಅಸೋಸಿಯೇಟ್ಸ್ 181/183 3ನೇ ಮುಖ್ಯ ರಸ್ತೆ ಚಾಮರಾಜಪೇಟೆ ಬೆಂಗಳೂರು 560 018

# ಮುನ್ನುಡಿ

ಐದು ಶತಮಾನಗಳಿಗೂ ಹೆಚ್ಚು ಕಾಲ ಕನ್ನಡನಾಡಿನ ಎಲ್ಲ ಜನಸಾಮಾನ್ಯರ ಮನವನ್ನು ಗೆದ್ದು, ನಾಡಿನ ಸಂಸ್ಕೃತಿಯ ಬಹುಮುಖ್ಯ ಭಾಗವಾಗಿರುವ 'ದಾಸ ಸಾಹಿತ್ಯ'ದ ಹಿರಿಮೆಯನ್ನು ತಿಳಿಸುವ ಈ ಗ್ರಂಥವನ್ನು ಕನ್ನಡಿಗರ ಮುಂದಿಡಲು ಸಂತೋಷವಾಗುತ್ತದೆ. ಇದು ದಾಸಸಾಹಿತ್ಯದ ಒಟ್ಟಾರೆಯಾದ ಒಂದು ಸಮಾ ಲೋಚನೆ. ಇದರಲ್ಲಿ ದಾಸಸಾಹಿತ್ಯದ ಉಗಮದಿಂದ ಹಿಡಿದು ಇಂದಿನ ದಾಸ ಸಂಪ್ರದಾಯದ ಬರಹಗಳ ತನಕ ವಿಮರ್ಶದೃಷ್ಟಿಯಿಂದ ರಚಿಸಿರುವ ಮೂರು ಲೇಖನಗಳು ಇವೆ. ಇವುಗಳಲ್ಲಿ ಆಯಾ ವಿಷಯಗಳಿಗೆ ಸಂಬಂಧಪಟ್ಟ ವಿವರಗಳನ್ನು ಆಯ್ಕೆಮಾಡಿ ಒಂದು ಒಟ್ಟಂದದ ಚಿತ್ರವನ್ನು ನಮ್ಮ ಮುಂದೆ ಇಟ್ಟಿದ್ದಾರೆ, ಲೇಖಕರು.

ಭಕ್ತಿಯ ಕಲ್ಪನೆ ಅತ್ಯಂತ ಪ್ರಾಚೀನವಾದುದು. ಅದು ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಸ್ವರೂಪವನ್ನು ಪಡೆದುಕೊಂಡು ಬೆಳೆದಿದೆ. ಇದರ ಚರಿತ್ರೆಯೇ ಒಂದು ದೊಡ್ಡ ಗ್ರಂಥಕ್ಕೆ ಸಾಮಗ್ರಿಯಾಗಬಲ್ಲದು. ಅದು ಕನ್ನಡನಾಡಿನಲ್ಲಿ ಮೂಡಿಬಂದುದು ಕೂಡ ಸಾಕಷ್ಟು ಹಿಂದೆಯೇ. ಭಕ್ತಿ ಮೂಲವಾದ ಸಾಹಿತ್ಯ ಕರ್ನಾಟಕದಲ್ಲಿ ಹನ್ನೆ ರಡನೆಯ ಶತಮಾನದಿಂದಲೇ ಮೊದಲಾಗಿರುವಂತೆ ಕಾಣುತ್ತದೆ. ಮಾತೃಭಾಷೆ ಯಾದ ಕನ್ನಡದಲ್ಲಿ ಭಕ್ತಿಯ ಅನೇಕ ಮುಖಗಳನ್ನು ಚಿತ್ರಿಸುವ ಕಾರ್ಯ ಶಿವಶರಣ ರಿಂದ ಮೊದಲಾಯಿತು. ಎರಡು ಶತಮಾನಗಳ ಬಳಿಕ ವಿಜಯನಗರ ಸಾಮ್ರಾಜ್ಯದ ಉಚ್ಛ್ರಾಯಕಾಲದಲ್ಲಿ ವೈದಿಕಮತಾನುಯಾಯಿಗಳಾಗಿದ್ದ ದ್ವೈತಸಂಪ್ರದಾಯ ದವರು ಈ ಕಾರ್ಯವನ್ನು ಮುಂದುವರಿಸಿದರು. ವ್ಯಾಸಕೂಟ, ದಾಸಕೂಟ ಎಂಬ ಎರಡು ಸಂಪ್ರದಾಯಗಳನ್ನು ಬೆಳೆಸಿರುವುದು ಈಗ ಸರ್ವವಿದಿತ. ವ್ಯಾಸಕೂಟವು ತತ್ತ್ವಪ್ರಧಾನವಾದ, ಸಂಸ್ಕೃತಕ್ಕೆ ಒಲಿದ, ವಿದ್ವತ್ಸಂಪ್ರದಾಯ. ದಾಸಕೂಟವೆಂಬುದು ಕನ್ನಡಕ್ಕೆ ಒಲಿದ, ಭಕ್ತಿಪ್ರಚಾರದಲ್ಲಿ ಅಧಿಕವಾದ ಆಸಕ್ತಿಯುಳ್ಳ, ಸಮಾಜಸುಧಾರಿತ ದೃಷ್ಟಿಯ, ಸಾಮಾನ್ಯರ ಸಂಪ್ರದಾಯ. ಇವೆರಡರ ಚರಿತ್ರೆ ಈಗ ಸಾಕಷ್ಟು ಖಚಿತ ವಾಗಿದೆ.

ಧರ್ಮಸ್ಥಾಪನೆಗೆಂದೇ ರೂಪುಗೊಂಡ ವಿಜಯನಗರದ ಸತ್ವವನ್ನು ದಾಸಪಂಥ ಮೈಗೂಡಿಸಿಕೊಂಡುದರ ಪರಿಣಾಮವಾಗಿ ದಾಸಸಾಹಿತ್ಯ ಸಮೃದ್ಧವಾಯಿತು.

ನರಹರಿತೀರ್ಥರಿಂದ ಹಿಡಿದು ಈಗ ಕೂಡ ಕೀರ್ತನೆ ಅಥವ ಪದಗಳನ್ನು ರಚಿಸುತ್ತಿರುವವರವರೆಗೆ ಒಂದು ಜೀವಮಾನದ ಅಭ್ಯಾಸಕ್ಕೆ ಸಾಕಾಗುವಷ್ಟು ಸಾಹಿತ್ಯರಾಶಿ ರಚನೆಯಾಗಿದೆ. ಆದರೆ ಎಲ್ಲವೂ ಕೈಗೆ ಎಟುಕದ ಸ್ಥಿತಿಯಲ್ಲಿ ಇರುವುದು ಕನ್ನಡಿಗರ ದುರ್ದೈವ. ಈಗೀಗ ಅಲ್ಲಲ್ಲಿ ನಡೆಯುತ್ತಿರುವ ಸಂಶೋಧನೆಯ ಪರಿಣಾಮವಾಗಿ ನಮ್ಮ ಹಿರಿಯ ದಾಸರುಗಳ ಸಾಹಿತ್ಯ ರಚನೆಯನ್ನು ಒಂದು ಕಡೆ ಸೇರಿಸಿ ಪ್ರಕಟ ಮಾಡುವ ಕಾರ್ಯ ನಡೆದಿದೆ. ಆದರೆ ಈಗ ಆಗಿರುವ ಕಾರ್ಯ ಒಂದು ಕೊಳದಷ್ಟಾಗಿದ್ದರೆ, ಆಗಬೇಕಾದದ್ದು ಸಮುದ್ರದಷ್ಟು ಇದೆ. ಹಸ್ತಪ್ರತಿ ಸ್ವರೂಪದಲ್ಲಿಯೇ ಕೊಳೆಯುತ್ತಿರುವ ಎಷ್ಟೋ ಸಾಹಿತ್ಯರಾಶಿಯನ್ನು ಸಂಗ್ರಹಿಸುವ ಕಾರ್ಯವೇ ಇನ್ನೂ ಪೂರೈಸಿಲ್ಲ. ಇಂಥ ಸಂದರ್ಭದಲ್ಲಿ ದಾಸಸಾಹಿತ್ಯದ ಪರಿಚಯವನ್ನು ನಮ್ಮ ಜನರಿಗೆ ಮಾಡಿಕೊಡುವ ಈ ಗ್ರಂಥ ಅನೇಕ ಕಾರಣಗಳಿಂದ ಮುಖ್ಯವಾಗಿದೆ.

ಸಂಗೀತ ಕ್ಷೇತ್ರಕ್ಕೆ ಪುರಂದರದಾಸರಂಥವರು ಸಲ್ಲಿಸಿರುವ ಸೇವೆಯನ್ನು ಕುರಿತು ವಿಸ್ತಾರವಾದ, ಪ್ರಮಾಣಭೂತವಾದ ಗ್ರಂಥ ರಚನೆಯಾಗಬೇಕು. ಹಿಂದಿನ ದಾಸರು ಈ ಪದಗಳನ್ನು ಹೇಗೆ ಹಾಡುತ್ತಿದ್ದರು ಎಂಬ ಬಗೆಯನ್ನು ನಿರ್ಧಾರಮಾಡಿ ತಿಳಿಸಬಲ್ಲ ಸಂಶೋಧನೆ ನಡೆಯಬೇಕು, ಸಂಗೀತ ಕ್ಷೇತ್ರದಲ್ಲಿ ರಾಗಗಳ ಸ್ವರೂಪ ನಿರ್ಧಾರದ ಜೊತೆಗೆ ದಾಸ ಸಾಹಿತ್ಯದ ಗ್ರಂಥ ಸಂಪಾದನೆ ಆಗಬೇಕು. ಒಂದೊಂದು ಕೃತಿಯ ನಿರ್ದಿಷ್ಟ ಸ್ವರೂಪ ಎಂಥದು, ಎಂದು ತೀರ್ಮಾನ ಮಾಡುವ ಕಾರ್ಯ ಸುಲಭವಾದುದಲ್ಲ. ಅನೇಕ ಹಸ್ತಪ್ರತಿಗಳ ಸಹಾಯದಿಂದ, ಸಂಗೀತಬಲ್ಲ ವಿದ್ವದ್ರಸಿಕರ ಮತ್ತು ಸಾಹಿತ್ಯಪರಿಣಿತರ ನೇತೃತ್ವದಲ್ಲಿ ಈ ಕಾರ್ಯ ಪೂರ್ತಿಗೊಳ್ಳಬೇಕು. ಆ ಬಳಿಕ ಅನೇಕ ದಾಸರ ಹೆಸರಿನಲ್ಲಿ ಪ್ರಚಾರದಲ್ಲಿರುವ ಒಂದೇ ಕೃತಿ ನಿಜವಾಗಿ ಯಾರದ್ದು ಎಂಬುದು ನಿರ್ಧಾರವಾಗಬೇಕು. ಪ್ರತಿಯೊಬ್ಬ ದಾಸರೂ ರಚಿಸಿದ ಪದಗಳ ಸಂಖ್ಯೆಯ ಬಗ್ಗೆ ಜನರಲ್ಲಿ ಪ್ರಚಾರದಲ್ಲಿರುವ ಉತ್ಪ್ರೇಕ್ಷೆಗಳನ್ನು ಭೇದಿಸಿ ಸತ್ಯನಿರೂಪಣೆಯಾಗಬೇಕು.

ಜನಜೀವನಕ್ಕೆ ದಾಸರ ಮಾರ್ಗದರ್ಶನವೇನು ? ಇಂದಿನ ಬಾಳಿಗೆ ಈ ತತ್ತ್ವಬೋಧೆ ಎಷ್ಟು ಪ್ರಯೋಜನಕಾರಿ ? ಎಲ್ಲಿಯವರೆಗೆ ಅದರ ಪ್ರಭಾವದ ವ್ಯಾಪ್ತಿಯಿರುತ್ತದೆ ? ಈ ಸಂಬಂಧದಲ್ಲಿ ಪುರುಷ ಪ್ರಯತ್ನಕ್ಕೆ ಯಾವ ಸ್ಥಾನ ? ಈ ಮುಂತಾದ ಸೂಕ್ಷ್ಮ ಪ್ರಶ್ನೆಗಳ ಆಳವಾದ ಚಿಂತನೆಗೆ ಗಮನ ಕೊಡಬೇಕು.

ಸಾಹಿತ್ಯವಾಗಿ ದಾಸರ ಪದಗಳ ಸ್ಥಾನ ಎಂಥದು ? ಕಾವ್ಯವೆನ್ನುವ ದಾಸ ಸಾಹಿತ್ಯ ಎಷ್ಟಿದೆ ? ಅದರ ಸಂಕಲನ ನಡೆಯಬೇಕು. ಹೊಸ ದೃಷ್ಟಿಯಿಂದ ಅವುಗಳ ವಿಮರ್ಶೆಯಾಗಬೇಕು. ಈ ಎಲ್ಲ ಸಾಹಿತ್ಯ ಸಂಗೀತ ಸಂಬಂಧಿಯಾದ ಕಾರ್ಯಗಳಿಗೆ

ಉತ್ತೇಜನ ಬರುತ್ತಿರುವ ಈ ಸಂದರ್ಭದಲ್ಲಿ ಈ ಗ್ರಂಥವನ್ನು ನಮ್ಮ ಜನ ಸ್ವಾಗತಿಸುತ್ತಾರೆಂಬ ಭರವಸೆ ನಮಗಿದೆ.

ಇಲ್ಲಿಯ ಮೂರು ಲೇಖನಗಳನ್ನು ಬರೆದುಕೊಟ್ಟಿರುವ ನಮ್ಮ ವಿದ್ವಾಂಸರಿಗೆ ನಾವು ಕೃತಜ್ಞರಾಗಿದ್ದೇವೆ.

ಈ ಲೇಖನಗಳು ಬಂದಾಗಲೇ ದಿ। ವಿ. ಸೀತರಾಮಯ್ಯನವರು ಅವುಗಳನ್ನು ಮುದ್ರಣಕ್ಕೆ ಸಿದ್ಧಮಾಡಿದ್ದರು. ಅವರು ನಮ್ಮ ದುರದೃಷ್ಟದಿಂದ ತೀರಿಕೊಂಡ ಬಳಿಕ, ಇಲ್ಲಿಯವರೆಗೆ ನಡೆದಿರುವ ಸಂಶೋಧನೆಗಳ ಬೆಳಕಿನಲ್ಲಿ ಅಗತ್ಯವೆಂದು ಕಂಡ ಕಡೆ ಸಂಪಾದನ ಕಾರ್ಯವನ್ನು ನೆರವೇರಿಸಲಾಗಿದೆ. ಮೂಲ ಲೇಖನಗಳಲ್ಲಿ ಹೆಚ್ಚು ವ್ಯತ್ಯಾಸವನ್ನು ಮಾಡಿಲ್ಲ. ಲೇಖನದ ಧೋರಣೆಗೆ ಯಾವ ಕುಂದೂ ಆಗದಂತೆ ನೋಡಿಕೊಳ್ಳಲಾಗಿದೆ.

'ಕವಿವಾಣಿ' ವಿಭಾಗದಲ್ಲಿ ಎಂಟು ಜನ ಪ್ರಮುಖ ದಾಸರ ಪ್ರಾತಿನಿಧಿಕ ಪದಗಳನ್ನು ಸಂಕಲನ ಮಾಡಿದೆ. ಅಲ್ಲಿ ಚಾರಿತ್ರಿಕ ಸಂಪ್ರದಾಯವನ್ನು ಅನುಸರಿಸಿದ್ದರೂ ಪುರಂದರದಾಸರಿಗೂ ಕನಕದಾಸರಿಗೂ ಸ್ವಾಭಾವಿಕವಾಗಿಯೇ ಹೆಚ್ಚು ಪ್ರಾಧಾನ್ಯವನ್ನು ನೀಡಲಾಗಿದೆ. ಈ ಸಂಕಲನ ವಿಭಾಗ ಓದುಗರಿಗೆ ಪ್ರಯೋಜನಕರವೆಂದು ಭಾವಿಸಲಾಗಿದೆ.

ಈ ಗ್ರಂಥದ ಪ್ರಕಟಣೆಗೆ ಆಸಕ್ತಿ ವಹಿಸಿದ ಶ್ರೀ ಜಿ. ಕೆ. ಅನಂತರಾಮ್ ಅವರಿಗೆ ನಮ್ಮ ಕೃತಜ್ಞತೆಗಳು ಸಲ್ಲಬೇಕು. ಮುದ್ರಕರಾದ 'ಇಳಾ ಅಸೋಸಿಯೇಟ್ಸ್' ನ ಶ್ರೀ ರಾಮ ಮೋಹನ್ ಅವರು ಆಸಕ್ತಿ ವಹಿಸಿ ಮಾಡಿರುವ ಈ ಕಾರ್ಯಕ್ಕೆ ನಮ್ಮ ವಂದನೆಗಳು.

ಬೆಂಗಳೂರು

23–8–1987

ಜಿ. ವೆಂಕಟಸುಬ್ಬಯ್ಯ

# ಪರಿವಿಡಿ

# ದಾಸ ಸಾಹಿತ್ಯ

ಭಾಗ : ಒಂದು

# ಪುರಂದರದಾಸರವರೆಗಿನ ಹರಿದಾಸ ಸಾಹಿತ್ಯ

ಎನ್. ಕೆ. ಕುಲಕರ್ಣಿ

# ಪುರಂದರದಾಸರವರೆಗಿನ ಹರಿದಾಸ ಸಾಹಿತ್ಯ

ಅನಂತಗುಣಪೂರ್ಣನಾದ ಭಗವಂತನಿಂದ ತಾನು ಭಿನ್ನನೆಂದು ಮಾನವನು ಬಗೆದಾಗಲೆ 'ಭಕ್ತ'. 'ಭಕ್ತಿ' ಎಂಬ ಶಬ್ದಗಳು ರೂಢಿಯಲ್ಲಿ ಬಂದಿರಬೇಕು. ಭಕ್ತ ಎಂದರೆ ವಿಭಕ್ತನಾದವನು ಎಂದೇ ಅರ್ಥವಾಗುತ್ತದೆ. ತಾನು ಬೇರೆ, ಪರಮಾತ್ಮನು ಬೇರೆ ಎಂಬ ದ್ವೈತ ಭಾವನೆಯೊಂದಿಗೆ ತನ್ನ ಉದ್ಧಾರಕ್ಕಾಗಿ ಭಗವಂತನಲ್ಲಿ ತನ್ನನ್ನೇ ತಾನು ಅರ್ಪಿಸುಕೊಳ್ಳುವುದೇ ಭಕ್ತಿಯ ಲಕ್ಷಣ.

'ಸಾತು ಅಸ್ಮಿನ್ ಪರಮಾ ಪ್ರೇಮರೂಪಾ ಅಮೃತ ಸ್ವರೂಪಾ ಚ' ಎಂದರೆ ಅಮೃತಮಯವಾದ ಉತ್ಕಟ ಪ್ರೇಮವೆ ಭಕ್ತಿ ಎಂದು ನಾರದಭಕ್ತಿಸೂತ್ರದಲ್ಲಿ ಹೇಳಿದೆ. ಶಾಂಡಿಲ್ಯ ಸೂತ್ರನಲ್ಲಿ ಈಶ್ವರನಲ್ಲಿ ನಾವು ಕೋರುವ ಪರಮಾನುರಕ್ತಿಯೆ ಭಕ್ತಿ ಎಂದು ಹೇಳಿದೆ. (ಸಾ ಪರಮಾನುರಕ್ತಿರೀಶ್ವರೆ ಭಕ್ತಿಃ). 'ಭಜನಂ ಭಕ್ತಿಃ' ; 'ಭಜ್ಯತೆ-ಅನಯಾ ಇತಿ ಭಕ್ತಿಃ' ; ಭಜಂತೆ ಅನಯಾ ಇತಿ ಭಕ್ತಿಃ' , ಎಂಬುದಾಗಿ ಭಕ್ತಿಯ ಬಗೆಬಗೆಯ ವ್ಯುತ್ಪತ್ತಿಯನ್ನು ಹೇಳಲಾಗಿದೆ. ಮುಖ್ಯವಾಗಿ ಭಗವಂತನಲ್ಲಿ ಮನಸ್ಸನ್ನು ಸ್ಥಿರೀಕರಿಸುವುದೆ ಭಕ್ತಿ ('ಭಗವತಿ ಮನಃಸ್ಥಿರೀಕರಣಂ ಭಕ್ತಿಃ') ಎಂದು ನಾರದ ಭಕ್ತಿ ಸೂತ್ರದಲ್ಲಿ ಉಲ್ಲೇಖಿಸಿದೆ.

ಭಾಗವತ ನಿರೂಪಿಸಿದ ನವವಿಧಭಕ್ತಿಯು ಭಕ್ತಿಯ ಬೆಳವಣಿಗೆಯ ಗುರುತಾಗಿದೆ. 'ಶ್ರವಣಂ, ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ । ಅರ್ಚನಂ, ವಂದನಂ, ದಾಸ್ಯಂ, ಸಖ್ಯಮಾತ್ಮನಿವೇದನಂ.' ಭಕ್ತನು ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ ಮತ್ತು ಆತ್ಮನಿವೇದನ ಎಂಬ ಶಾರೀರಿಕ, ವಾಚಿಕ, ಹಾಗೂ ಮಾನಸಿಕ ಕ್ರಿಯೆಗಳಿಂದ ಪರಮಾತ್ಮನನ್ನು ಸೇವಿಸುತ್ತಾನೆ. ಇವುಗಳಲ್ಲಿ ಮಧುರ ಅಥವಾ ಸಖ್ಯ ಭಕ್ತಿ ಹೆಚ್ಚು ಮೇಲ್ಮೆಯನ್ನು ಪಡೆಯಿತು. ದಾಸಭಾವಕ್ಕಿಂತ ಸಖ್ಯ ಅಥವಾ ಮಧುರಭಾವದಲ್ಲಿ ಭಕ್ತನು ಭಗವಂತನಲ್ಲಿ ಹೆಚ್ಚಿನ ಸಲುಗೆಯನ್ನು ತೋರುವಷ್ಟು ಭಕ್ತಿಯು ಒಂದು ವಿಶೇಷ ಮಟ್ಟವನ್ನು ಮುಟ್ಟಿರುತ್ತದೆ. ಆರ್ತನಾದ ಭಕ್ತನು ಈಶ್ವರನಲ್ಲಿ ದಾಸಭಾವವನ್ನು ತೋರುವನು. ಮುಂದೆ ಭಕ್ತಿ ಬೆಳೆದಂತೆಲ್ಲ ಸಖ್ಯಭಾವಕ್ಕೆ ಮೊದಲಾಗುವುದು. ಇದೇ ಸರ್ವ ಭಕ್ತಿಭಾವಗಳ ಸಮನ್ವಯ ರೂಪವೂ ಹೌದು, ಶಿಖರ ಪ್ರಾಯವೂ ಹೌದು.

ಭಗವಂತನ ಅವತಾರದ ಕಲ್ಪನೆಯಿಂದ ಭಕ್ತಿಸಾಹಿತ್ಯಕ್ಕೆ ಹೆಚ್ಚಿನ ಪುಷ್ಟಿ ದೊರೆಯಿತು. ಭಕ್ತನು ತನ್ನ ಬಂಧು ಬಳಗದ ಮೇಲೆ ತೋರುವ ಪ್ರೇಮವನ್ನು ಅಥವಾ ಅದಕ್ಕೂ ಹೆಚ್ಚಿನ ಮಟ್ಟದ ಪ್ರೇಮವನ್ನು ಭಗವಂತನ ಅವತಾರಗಳಲ್ಲಿ ತೋರಿದ್ದಾನೆ-ತೋರಿಸುತ್ತಾನೆ. ಯಾವುದೆ ಒಂದು ಅವತಾರವನ್ನು ಕುರಿತ ಏಕಾಂತ ಭಕ್ತಿಯು ಭಕ್ತಿ ಸಾಹಿತ್ಯಕ್ಕೆ ವಿಶೇಷ ಕಳೆ ತಂದಿದೆ.

ಭಾರತದಲ್ಲಿ ಭಕ್ತಿ ಮಾರ್ಗವು ಜನಸಾಮಾನ್ಯರ ಮನಸ್ಸನ್ನು ಸುಲಭವಾಗಿ ಸೆಳೆಯಿತು. ಭಕ್ತಿಮಾರ್ಗವು ಉಚ್ಚ, ನೀಚ ಎಂಬ ಭೇದಭಾವವಿಲ್ಲದೆ ಸರ್ವಪ್ರತೀಯರಿಂದಲೂ ಆಚರಿಸಲಿಕ್ಕೆ ಅತಿ ಸುಲಭವಾದ ಮಾರ್ಗ. ಭಕ್ತಿ ಮಾರ್ಗದಲ್ಲಿ ಕರ್ಮಗಳ ಕಾಠಿನ್ಯವಾಗಲಿ, ತಪಶ್ಚರ್ಯೆಯ ನಿಷ್ಠುರವಾಗಲಿ ಇಲ್ಲ. ಜಾತಿ, ಧರ್ಮ, ವಯಸ್ಸು, ಲಿಂಗ ಮೊದಲಾದ ಕಂಟಕಗಳೂ ಅಡ್ಡ ಬರಲಾರವು. ಪರಮಾತ್ಮನ ಮೇಲಿನ ಶುದ್ಧ ಪ್ರೇಮವೊಂದೇ ಭಕ್ತಿಗೆ ಬೇಕಾಗುವ ಮೂಲ ದ್ರವ್ಯ. ರತಿಪತಿ ಭಾವದ ಪ್ರೇಮವೇ ಪರಮಾತ್ಮನ ಪ್ರೇಮವಾಗಿ ಉದಾತ್ತಗೊಳ್ಳುವುದು, ಅಂತೆಯೇ ಭಕ್ತಿ ಮುಕ್ತಿಯ ಸುಲಭೋಪಾನ. ಮುಕ್ತಿ ಭಕ್ತಿಯ ದಾಸಿ ಎಂದೆಲ್ಲ ಹೇಳುತ್ತಾರೆ. 'ನಮೇ ಭಕ್ತಃ ಪ್ರಣಶ್ಯತಿಃ' ; 'ಯೋ ಮದ್ ಭಕ್ತಃ ಸ ಚ ಮೇ ಪ್ರಿಯಃ' ; 'ಮನ್ ಮನಾಭವ, ಮದ್ಭಕ್ತೋ ಮದ್ಯಾಜಿ ಮಾಂ ನಮಸ್ಕುರು ಅಹಂ ತೆ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ' ಎಂದು ಪರಮಾತ್ಮನು ಭಗವದ್ಗೀತೆಯಲ್ಲಿ ನೀಡಿದ ಆಶ್ವಾಸನೆ ಕಡಿಮೆಯದೆ ? ಭಗವದ್ಗೀತೆಯು ಭಕ್ತಿವಾಹಿನಿಯ ಗಂಗೋತ್ರಿಯಾಗಿದೆ. ಭಗವದ್ಗೀತೆಯ ಹನ್ನೆರಡನೆಯ ಅಧ್ಯಾಯವು ಭಕ್ತಿಯ ಸೌಲಭ್ಯವನ್ನು ಬಹು ಸುಂದರವಾಗಿ ನಿರೂಪಿಸುತ್ತದೆ. 'ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ'. ನನ್ನಲ್ಲಿಯೆ ಮನಸ್ಸನ್ನು ಇಡು, ನನ್ನಲ್ಲಿಯೆ ಬುದ್ಧಿಯನ್ನಿಡು ಎಂದರೆ ನನ್ನಲ್ಲಿಯೆ ನೀನು ನಿವಾಸ ಮಾಡಿಕೊಂಡು ಇರುತ್ತೀ ಎಂದು ಶ್ರೀಕೃಷ್ಣನು ಆಶ್ವಾಸನೆ ನೀಡುತ್ತಾನೆ. ಇದು ಸಾಧ್ಯವಾಗದಿದ್ದರೆ ಅಭ್ಯಾಸದಿಂದ ಅದನ್ನು ಸಾಧಿಸಲು ಉಪದೇಶಿಸುತ್ತಾನೆ. ಅಭ್ಯಾಸ ಯೋಗವೂ ಸಾಧ್ಯವಾಗದೆ ಹೋದರೆ ಭಗವದರ್ಥವಾಗಿ ಕಾರ್ಯ ಕರ್ಮಗಳನ್ನು ಮಾಡು ಎಂದು ಬೋಧಿಸಿ ಆ ರೀತಿಯಿಂದಲೂ ಸಿದ್ಧಿಯನ್ನು ಪಡೆಯಬಹುದು ಎನ್ನುತ್ತಾನೆ. ಅದೂ ಸಾಧ್ಯವಾಗದೆ ಹೋದರೆ 'ಸರ್ವ ಕರ್ಮ ಫಲ ತ್ಯಾಗಂ ತತಃ ಕುರು' ಎಂದು ಭಕ್ತಿಯನ್ನು ಇನ್ನಷ್ಟು ಸುಲಭಗೊಳಿಸಿ ಎಲ್ಲಕ್ಕಿಂತ ಇದು ಕಷ್ಟವೊ ಏನೋ ಬೋಧಿಸುತ್ತಾನೆ. ಮಹಾಭಾರತದಲ್ಲಿ ನಿರೂಪಿತವಾದ ಭಕ್ತಿಗೆ ಏಕಮೇವ ನಿದರ್ಶನ ಭಗವದ್ಗೀತೆ. ವಾಸುದೇವನು ಅರ್ಜುನನಿಗೆ ಗೀತೆಯನ್ನು ಬೋಧಿಸಿದಾಗ ಭಕ್ತಿ ಒಂದು ಘಟ್ಟವನ್ನು ಮುಟ್ಟಿತು. ವಿದುರನ ಭಕ್ತಿ, ಭೀಷ್ಮರ ಭಕ್ತಿ, ದ್ರೌಪದಿಯ

ಭಕ್ತಿ, ಧರ್ಮಾರ್ಜುನರ ಭಕ್ತಿಗಳು ಒಂದೊಂದು ಬಗೆಯ ನಿದರ್ಶನ. ಶ್ರೀಕೃಷ್ಣನು ತನ್ನ ಮೇಲೆ ಚಕ್ರವನ್ನೆತ್ತಿದಾಗ 'ನಾನು ನಿನ್ನ ದಾಸನಾಗಿದ್ದೇನೆ' ಎಂದು ಭೀಷ್ಮನು ಅವನಿಗೆ ಸಾಷ್ಟಾಂಗವೆರಗುವುದು ವೀರಭಕ್ತಿಯ ಉದಾಹರಣೆಯಾಗಿದೆ. ದ್ರೌಪದಿಯ ಶರಣಾಗತಿ ಅರ್ಜುನನ ಸಖ್ಯಭಕ್ತಿಗಳಿಗೆ ಉತ್ತರ ರೂಪವಾಗಿ ಭಗವಾನ್ ಶ್ರೀಕೃಷ್ಣನು 'ಮಮ ಪ್ರಾಣಾಹಿ ಪಾಂಡವಾಃ' ಎಂದು ಘೋಷಿಸಿ ಪಾಂಡವರಿಗೆ ವಿಜಯಶ್ರೀಯನ್ನು ತಂದುಕೊಡುತ್ತಾನೆ. 'ಶಿಷ್ಯಸ್ತೇಹಂ ಶಾಧಿಮಾಂ ತ್ವಾಂ ಪ್ರಪನ್ನಂ' ಎಂದು ಪಾರ್ಥನು ಮೊರೆಹೊಕ್ಕಾಗ ಶ್ರೀಕೃಷ್ಣನು ಅವನಿಗೆ ಯೋಗವನ್ನು ಬೋಧಿಸುತ್ತಾನೆ. ವಿಶ್ವರೂಪ ದರ್ಶನವನ್ನು ಮಾಡಿಸುತ್ತಾನೆ. 'ಯತ್ರಯೋಗೇಶ್ವರಃ ಕೃಷ್ಣೋ ಯತ್ರಪಾರ್ಥೋ ಧನುರ್ಧರಃ । ತತ್ರ ಶ್ರೀರ್ವಿಜಯೋಭೂತಿರ್ಧ್ರುವಾ ನೀತಿರ್ಮತಿರ್ಮಮ' ಇದು ಭಕ್ತಿಯ ಸಖ್ಯ ಭಾವದ ಶಿಖರ.

ರಾಮಾಯಣದಲ್ಲಿಯೂ ಭಕ್ತಿಯ ಬಹುವಿಧ ಪ್ರಕಾರಗಳನ್ನು ಕಾಣುತ್ತೇವೆ. ಹನುಮಂತನಂತೂ ದಾಸ್ಯ ಭಕ್ತಿಯ ಪರಮ ನಿದರ್ಶನ. ಅದರಲ್ಲಿಯೂ ಹನುಮಂತನು ಕರ್ನಾಟಕದ ಭಕ್ತ. ಶ್ರೀರಾಮಚಂದ್ರನ ಯಜ್ಞಶಾಲೆಯಲ್ಲಿ ಲವಕುಶರು ವೀಣೆಯೊಂದಿಗೆ ವಾಲ್ಮೀಕಿ ಮಹಾಮುನಿ ಪ್ರಣೀತವಾದ ಶ್ರೀಮದ್ ರಾಮಾಯಣವನ್ನು ಗೇಯ ರೂಪದಲ್ಲಿ ನಿವೇದಿಸಿದಾಗ ಭಕ್ತಿಯ ಒಂದು ಪ್ರಕಾರವಾದ ಭಗವನ್ನಾಮ ಸಂಕೀರ್ತನೆ ಪ್ರಕಟಗೊಂಡಿತ್ತು.

ಪದ್ಮಪುರಾಣದಲ್ಲಿ ಭಾಗವತ ಮಹಿಮೆಯು ನಿರೂಪಿತವಾದ ಸಂದರ್ಭದಲ್ಲಿ ಭಕ್ತಿಯ ಉಗಮ, ವೃದ್ಧಿ ಜರ್ಜರಿತಗಳನ್ನು ಕುರಿತು ಒಂದು ಸುಂದರ ರೂಪಕವೆ ಹೆಣೆದಿಟ್ಟಿದೆ. ನಾರದರು ಪೃಥ್ವೀ ಸಂಚಾರ ಮಾಡುತ್ತ ಭಾರತದ ಉತ್ತರದಲ್ಲಿ ಯಮುನಾ ತೀರಕ್ಕೆ ಬರುತ್ತಾರೆ. ಅಲ್ಲಿ ಖಿನ್ನ ಮಾನಸೆಯಾದ ಒಬ್ಬ ತರುಣಿ ಅವರ ಕಣ್ಣಿಗೆ ಬೀಳುತ್ತಾಳೆ. ಇಬ್ಬರು ವೃದ್ಧರು ಚೇತೋಹೀನರಾಗಿ ಉಸುರುಗರೆಯುತ್ತ ಆಕೆಯ ಬಳಿ ಬಿದ್ದುಕೊಂಡಿದ್ದರು. ಅವರನ್ನು ಶುಶ್ರೂಷೆ ಮಾಡುತ್ತ ಅವರ ಮುಂದೆ ಕಣ್ಣೀರು ಹಾಕುತ್ತ ಕುಳಿತ ತರುಣಿ ತನ್ನನ್ನು ರಕ್ಷಿಸುವವರು ಯಾರಾದರೂ ಇದ್ದಾರೆಯೇ? ಎಂದು ದಶದಿಕ್ಕುಗಳನ್ನು ನಿರೀಕ್ಷಿಸುತ್ತಿರುವಾಗ ಸಾಧು ಸ್ವರೂಪರಾದ ನಾರದರನ್ನು ನೋಡಿ 'ಭೋ ಭೋ ಸಾಧೊ ಕ್ಷಣಂ ತಿಷ್ಠ ಮಮ ಚಿಂತಾನಪಿ ನಾಶಯ। ದರ್ಶನಂ ತವ ಲೋಕಸ್ಯ ಸರ್ವಥಾಘಹರಂ ಪರಮ್' ಎಂದು ಮೊರೆಯಿಟ್ಟಾಗ ನಾರದರಿಗೆ ಅಚ್ಚರಿಯಾಗುತ್ತದೆ. 'ತಾಯಿ, ನೀನಾರು ? ಈ ವೃದ್ಧರಾರು ? ನಿನ್ನ ದುಃಖಕ್ಕೆ ಕಾರಣವೇನು ?' ಎನಲು ಆಕೆ ತನ್ನ ವ್ಯಥೆಯ ಕಥೆಯನ್ನು ಹೇಳುತ್ತಾಳೆ ; 'ನಾನು ಭಕ್ತಿ ಎಂದು ಖ್ಯಾತಳಾಗಿದ್ದೇನೆ. ಇವರಿಬ್ಬರೂ ನನ್ನ ಮಕ್ಕಳು. ಇವರ ಹೆಸರು ಜ್ಞಾನ ಮತ್ತು ವೈರಾಗ್ಯ. ಕಾಲಯೋಗದಿಂದ ಇವರು ಜರ್ಜರಿತರಾಗಿ

ದ್ದಾರೆ.' ಎಂದೆಲ್ಲ ತನ್ನ ವಾರ್ತೆಯನ್ನು ನಿವೇದಿಸುತ್ತ ದೇವತೆಗಳಿಂದ ಸೇವಿಸಲ್ಪಟ್ಟರೂ ತನಗೆ ಶ್ರೇಯಸ್ಸೆಂಬುದು ಉಂಟಾಗಲಿಲ್ಲ ಎಂದು ದುಃಖದಿಂದ ನುಡಿಯುತ್ತಾಳೆ. 'ಉತ್ಪನ್ನಾದ್ರಾವಿಡೆ ಸಾಹಂ ವೃದ್ಧಿಂ ಕರ್ನಾಟಕೇ ಗತಾ । ಕ್ವಚಿತ್ ಮಹಾರಾಷ್ಟ್ರೇ ಗೂರ್ಜರೇ ಜರ್ಜರಾಮ್ ಗತಾ' ಎಂದು ಹೇಳಿಕೊಳ್ಳುತ್ತಾಳೆ. ಅದಕ್ಕೆ ನಾರದರು ಇದೆಲ್ಲ ಕಲಿಯುಗದ ಮಹಿಮೆ. ಪುಂಡರೀಕಾಕ್ಷನೆ ಈ ಅವನತಿಯನ್ನೆಲ್ಲ ಸಹಿಸಿ ಆತನೇ ಇದನ್ನು ನಿವಾರಿಸುತ್ತಾನೆ ಎಂದು ಸಂತೈಸುತ್ತಾರೆ.

ಇದು ಭಕ್ತಿಯ ಕತೆ. ಆಳ್ವಾರರಿಂದ ಭಕ್ತಿಯು ದ್ರಾವಿಡ ದೇಶದಲ್ಲಿ ಜನ ತಾಳಿತು. ಆಳ್ವಾರರು ಎಂದರೆ ಭಕ್ತಿಯಲ್ಲಿ ಮುಳುಗಿದವರು ಎಂದರ್ಥ. ಆಳ್ವಾರರ ಕಥಾವಳಿ ಎಂದರೆ ದಕ್ಷಿಣದಲ್ಲಿ ವೈಷ್ಣವ ಮತದ ಉಚ್ಛ್ರಾಯದ ಕಥೆ. 'ನಾಲಾಯಿರ ಪ್ರಬಂಧಂ' ಎಂಬ ಗ್ರಂಥದಲ್ಲಿ ಆಳ್ವಾರರ ಚರಿತ್ರೆಯನ್ನು ನಿರೂಪಿಸಲಾಗಿದೆ.

[ವೈಷ್ಣವ ಭಕ್ತಿಯೊಂದಿಗೆ ದಕ್ಷಿಣದಲ್ಲಿ ಶೈವ ಭಕ್ತಿಯೂ ಬೆಳೆದುಕೊಂಡು ಬಂತು. ಶೈವ ಪುರಾತನದಿಂದಲೂ ವೀರಶೈವ ವಚನಕಾರರಿಂದಲೂ ಶೈವಭಕ್ತಿ ಅಭಿವೃದ್ಧಿ ಪಡೆಯಿತು. ಕರ್ನಾಟಕದಲ್ಲಿ ಬಸವೇಶ್ವರರಿಂದ ಪುರಸ್ಕೃತವಾದ ವಚನ ವಾಙ್ಮಯವು ಶೈವ ಭಕ್ತಿಯ ಮಹಾತ್ಮೆಯನ್ನು ಕೊಂಡಾಡಿದೆ. ಬಸವಣ್ಣ, ಅಕ್ಕ ಮಹಾದೇವಿ ಇವರ ವಚನಗಳಲ್ಲಿ ಭಕ್ತಿಯ ಅನುಭವ–ಅನುಭಾವಗಳು, ಅಂತರಂಗದ ಸಂವೇದನೆಗಳು ಭಕ್ತನ ಕಷ್ಟನಿಷ್ಠುರಗಳು ಹೃದಯಸ್ಪರ್ಶಿಯಾಗಿ ಪ್ರತಿಬಿಂಬಿತ ವಾಗಿವೆ. ಇವರ ಸಮಕಾಲೀನರಾಗಿಯೂ, ತರುವಾಯದವರಾಗಿಯೂ ಇನ್ನೂ ಅನೇಕಾನೇಕ ಶಿವಶರಣ ವಚನಕಾರರು ಆಗಿಹೋದರು. ಹರಿಹರನ ರಗಳೆಗಳಲ್ಲಿ ಶಿವಭಕ್ತರ ಚರಿತ್ರೆಗಳು ಚಿತ್ರಿತವಾಗಿದ್ದು ಒಂದೊಂದು ಚರಿತ್ರೆಯಾಗಿ ಭಕ್ತಿಯ ಪಾರಮ್ಯಕ್ಕೆ ಒಂದೊಂದು ತಕ್ಕ ಉದಾಹರಣೆ.]

ರಾಮಾನುಜಾಚಾರ್ಯರು ಮತ್ತು ಮಧ್ವಾಚಾರ್ಯರು ದಕ್ಷಿಣದಲ್ಲಿ ಇಬ್ಬಗೆಯ ವೈಷ್ಣವ ಪಂಥವನ್ನು ಸ್ಥಾಪಿಸಿದರು. ಉಭಯರ ಕಾರ್ಯಕ್ಷೇತ್ರವು ಕರ್ನಾಟಕವೇ. ರಾಮಾನುಜಾಚಾರ್ಯರು ಕಂಚಿ ಮತ್ತು ಶ್ರೀರಂಗಮ್‌ಗಳನ್ನು ಬಿಟ್ಟು ಕರ್ನಾಟಕಕ್ಕೆ ಬಂದು ಬೇಲೂರು, ಮೇಲುಕೋಟೆಗಳಲ್ಲಿ ತಮ್ಮ ಶ್ರೀ ವೈಷ್ಣವ ಧರ್ಮಕಾರ್ಯ ವನ್ನು ಮುಂದುವರಿಸಬೇಕಾಯಿತು. ರಾಮಾನುಜಾಚಾರ್ಯರ ಜಾತ್ಯತೀತವಾದ ವಿಶಾಲ ಮನೋಭಾವನೆ ಬಹು ಜನರನ್ನು ಅವರತ್ತ ಆಕರ್ಷಿಸಿತು. ಹೊಯ್ಸಳ ವಿಷ್ಣುವರ್ಧನನು ಬಿಟ್ಟಿದೇವನೆನಿಸಿ ಶ್ರೀ ವೈಷ್ಣವ ಮತವನ್ನು ಅಂಗೀಕರಿಸಿದುದು ಕನ್ನಡ ನಾಡಿನ ಇತಿಹಾಸದಲ್ಲಿ ಇತಿಹಾಸವಾಯಿತು. ಭಕ್ತಿ ಮತ್ತು ಪ್ರಪತ್ತಿಗಳು ಶ್ರೀ ವೈಷ್ಣವ ಧರ್ಮದ ಮುಖ್ಯ ಲಕ್ಷಣಗಳು. ಪ್ರಪತ್ತಿ ಅಥವಾ ಶರಣಾಗತಿ ಯಿಂದಲೆ ಭಕ್ತಿ, ಅದರಿಂದಲೆ ಮೋಕ್ಷ.

ರಾಮಾನುಜಾಚಾರ್ಯರ ತರುವಾಯ ಸುಮಾರು 100 ವರ್ಷಗಳ ನಂತರ ಶ್ರೀ ಮಧ್ವಾಚಾರ್ಯರು ವೈಷ್ಣವ ಭಕ್ತಿಯನ್ನೆ ಪ್ರತಿಪಾದಿಸುವ, ಆದರೆ ರಾಮಾನುಜರ ವಿಶಿಷ್ಟಾದ್ವೈತದಿಂದ ಭಿನ್ನವಾದ ದ್ವೈತ ಮತವನ್ನು ಸ್ಥಾಪಿಸಿದರು. ಇವರ ಕಾರ್ಯ ಕ್ಷೇತ್ರ ಉಡುಪಿ. ತಮ್ಮ ಪ್ರತಿಭೆ, ಪಾಂಡಿತ್ಯ, ಪವಾಡ ಶಕ್ತಿಗಳಿಂದ ಇವರು ಜನ ಸಾಮಾನ್ಯರಲ್ಲಿ ವಿಶೇಷ ಪ್ರಭಾವವನ್ನು ಬೀರಿದರು.

ಶ್ರೀಮನ್ ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ ತತ್ವತೋ ।
ಭೇಧೋ ಜೀವಗಣಾಃ ಹರೇರನುಚರಾಃ ನೀಚೋಚ್ಚ ಭಾವಂಗತಾಃ
ಮುಕ್ತಿರ್ನೈಜ ಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿ ತ್ರಿತಯಂ ಪ್ರಮಾಣಮಖಿಲಂ ಆಮ್ನೈಕ ವೇದ್ಯೋ ಹರಿಃ ॥

ಹರಿಸರ್ವೋತ್ತಮತ್ವವನ್ನು ಜೀವ ಜೀವರಲ್ಲಿ ಭೇದ, ದೇವ ದೇವತೆಗಳಲ್ಲಿ ತಾರತಮ್ಯ, ಭಕ್ತಿಮುಖ್ಯವಾದ ಸಾಧನೆ ಇವು ಮಧ್ವಾಚಾರ್ಯರ ದ್ವೈತ ಧರ್ಮದ ಮುಖ್ಯ ಲಕ್ಷಣಗಳು. ವೇದ, ಉಪನಿಷತ್, ಬ್ರಹ್ಮಸೂತ್ರಗಳ ತತ್ವಗಳನ್ನು ತಿಳಿ ಗೊಳಿಸಿ ಅವನ್ನು ಜನತೆಗೆ ಸುಲಭ ರೀತಿಯಲ್ಲಿ ಭೋಧಿಸಿದರು. 'ಭಕ್ತಿಶ್ಚ ತತ್ಸಾಧನಂ' ಎಂಬುದನ್ನು ಗಮನಿಸಿ ಹರಿಸರ್ವೋತ್ತಮತ್ವವನ್ನು ಹರಿಯ ಮಹಾತ್ಮೆಯನ್ನು ಜನತೆಗೆ ವಿದಿತಪಡಿಸುವುದಕ್ಕಾಗಿ ಉಡುಪಿಯಲ್ಲಿ ಕಡಗೋಲು ಕೃಷ್ಣನ ಪುಟ್ಟ ಮೂರ್ತಿಯನ್ನು ಪ್ರತಿಷ್ಠಾಪಿಸಿದರು. 'ನ ಹರೇಃ ಪರಮೋ ನ ಹರೇಃ ಸದೃಶಃ ಪರಮಃ ಸತು ಸರ್ವ ಚಿದಾತ್ಮ ಗುಣಾನ್' ಎಂದು ಹರಿಸರ್ವೋತ್ತಮತ್ವವನ್ನು ದ್ವಾದಶ ಸ್ತೋತ್ರದಲ್ಲಿ ವರ್ಣಿಸಿದ್ದಾರೆ.

ಶಂಕರಾಚಾರ್ಯರ ನಿರ್ಗುಣ ಬ್ರಹ್ಮವಾದವು ಜನಸಾಮಾನ್ಯರ ಬುದ್ಧಿಮಟ್ಟಕ್ಕೆ ಗ್ರಾಹ್ಯಾತೀತವೆನಿಸಿತು. ರಾಮಾನುಜಾಚಾರ್ಯರ ನಾರಾಯಣ ಮಹಿಮೆ, ದೈವೀ ಕೃಪೆ ಎಂಬ ವಿಚಾರಗಳು ಜನಸಾಮಾನ್ಯರ ಚಿತ್ತವನ್ನು ಸೆರೆ ಹಿಡಿದವು. ಮಧ್ವಾ ಚಾರ್ಯರು ಹರಿಸರ್ವೋತ್ತಮತ್ವವನ್ನು ಪ್ರತಿಪಾದಿಸಿ ಆ ತರುವಾಯದ ಸ್ಥಾನವನ್ನು ಲಕ್ಷ್ಮಿಗೆ ನೀಡಿದರು. ಬ್ರಹ್ಮಾದಿ ದೇವತೆಗಳು ಲಕ್ಷ್ಮಿಯ ನಿರ್ವಾಹಕ ಶಕ್ತಿಗೆ ಅಧೀನ ರಾದರು. ಇದು ಮಧ್ವಾಚಾರ್ಯರ ದೇವತಾ ತಾರತಮ್ಯ. ಜೀವಾತ್ಮ ಪರಮಾತ್ಮರ ಸಂಬಂಧವು ಮೋಕ್ಷದಲ್ಲಿ ಕೂಡ ಅದ್ವೈತವಾಗಿರದೆ ಪ್ರಭು ಮತ್ತು ದಾಸ ಎಂಬ ಸಂಬಂಧವನ್ನು ಹೊಂದಿರುತ್ತದೆ. ಮೋಕ್ಷ ಪದವಿಯಲ್ಲೂ ಭಕ್ತನು ಶ್ರೀ ಹರಿಯ ಪಾದಸಾನ್ನಿಧ್ಯವನ್ನು ಮಾತ್ರ ಪಡೆಯುತ್ತಾನೆ ಎಂದು ಮಧ್ವಾಚಾರ್ಯರು ಪ್ರತಿ ಪಾದಿಸಿದ ದ್ವೈತ ದರ್ಶನವು ಭಕ್ತಿಗೆ ಹೆಚ್ಚು ಅನುಕೂಲವಾಯಿತು. ಈ ಹೊಸ

ವಿಚಾರ ಪ್ರಚುರತೆಗೆ ಉಡುಪಿಯಲ್ಲಿ ಸ್ಥಾಪಿತವಾದ ಕೃಷ್ಣ ಮಠವು ಭಕ್ತರನ್ನು ಆಕರ್ಷಿಸುವ ಕೇಂದ್ರ ಸ್ಥಾನವಾಯಿತು.

ಶ್ರೀಕೃಷ್ಣ ಪೂಜೆ, ಭಕ್ತರಿಗೆ ಪ್ರಸಾದ ವಿತರಣೆ, ಭಕ್ತಿ ಪಂಥದ ಬೆಳವಣಿಗೆಗೆ ಪೋಷಕವಾದವು. ಭಕ್ತಿ ಸುಲಭನಾದ ಶ್ರೀಕೃಷ್ಣನ ಕಲ್ಪನೆಯು ಮಹಾಭಾರತದ ಕೃಷ್ಣನಿಗಿಂತ ಭಾಗವತ ಮತ್ತು ಹರಿವಂಶದ ಕೃಷ್ಣಮಹಿಮೆಗೆ ಸಮೀಪವಾಗಿದೆ. ಕವಿ ಕುಮಾರವ್ಯಾಸನು ಶುಕ ರೂಪನೆನಿಸಿ ವ್ಯಾಸಭಾರತವನ್ನು ಕೃಷ್ಣ ಕಥೆಯನ್ನಾಗಿಸಿ ಪುನ ರ್ರಚಿಸಿದನೆಂಬುದನ್ನು ಇಲ್ಲಿ ನೆನೆಯಬಹುದು. 'ತಿಳಿಯ ಹೇಳುವೆ ಕೃಷ್ಣ ಕಥೆಯನು ! ಇಳೆಯ ಜಾಣರು ಮೆಚ್ಚುವಂತಿರೆ । ನೆಲೆಗೆ' ಪಂಚಮಶ್ರುತಿಯನೊರೆವೆನು ಕೃಷ್ಣ ಮೆಚ್ಚಲಿಕೆ' ಎಂದು ಸಾರಿದ ಕವಿ ಕುಮಾರವ್ಯಾಸನ ಕಣ್ಣಿನಲ್ಲಿ ಗದುಗಿನ ಭಾರತವು ಕೃಷ್ಣ ಕಥೆಯಾಯಿತು. ಇದು ಕವಿಯ ಭಕ್ತಿಭಾವನೆಯನ್ನೂ, ಕೃಷ್ಣ ಪಾರಮ್ಯವನ್ನೂ ಎತ್ತಿ ತೋರಿಸುತ್ತದೆ. ಮಧ್ವಾಚಾರ್ಯರಿಂದ ಭಾಗವತ ಧರ್ಮವು ಲೋಕಪ್ರಿಯವಾಗಿ ಜನರ ಹೃದಯಗಳನ್ನು ಆಕರ್ಷಿಸಿದ ಬಗ್ಗೆ ಕುಮಾರವ್ಯಾಸನು ಎತ್ತಿ ಹಿಡಿದ ಭಾಗವತ ಸಂಪ್ರದಾಯವು ಆತನ ಭಾರತರಚನಾದೃಷ್ಟಿಯಲ್ಲಿ ಕಾಣಿಸಿಕೊಂಡಿದೆ. ಸ್ಮಾರ್ತ ಬ್ರಾಹ್ಮಣನಾಗಿದ್ದ ನಾರಣಪ್ಪನು ಪದುಮನಾಭನ ಮಹಿಮೆಯನ್ನು ಹೇಳಲು ಹೊರಟ ತನ್ನ ಕಾವ್ಯವು 'ಇದ ವಿಚಾರಿಸೆ ಬರಿಯ ತೊಳಸಿಯ । ವುದಕದಂತಿರೆ ಇಲ್ಲಿ ನೋಳ್ಪುದು । ಪದುಮನಾಭನ ಮಹಿಮೆ ಧರ್ಮವಿಚಾರ ಮಾತ್ರವನು' ಎಂದು ಹೇಳಿ ತನ್ನ ಕೃಷ್ಣ ಭಕ್ತಿಯನ್ನು ಮೆರೆದಿದ್ದಾನೆ. ಭಾರತ ಯುದ್ಧವು ಪಾಂಡವರ ಗೆಲವು ಎನಿಸದೆ ಕೃಷ್ಣನ ಗೆಲುವು ಅರ್ಥಾತ್ ಭಕ್ತಿಯ ಗೆಲವು ಎನಿಸಿದೆ. 'ಒಲಿದವರನು ಜ್ಜೀವಿಸುವ ಬಗೆ ಬಲಹು ಮುರಮಥನಂಗೆ' ಎಂದು 'ಶರಣದೇಹಿಕದೇಹ'ನೆಂದು 'ನಂಬಿದವರಿಗೆ ತನ್ನ ತೆತ್ತಿಹ' ಎಂದು ಕುಮಾರವ್ಯಾಸನು ಕೃಷ್ಣನಿಗೆ ಬಿರುದುಗಳನ್ನು ದಯಪಾಲಿಸಿದ್ದಾನೆ. ಶ್ರೀಕೃಷ್ಣನು ಯೋಗೀಶ್ವರನಾಗಿದ್ದರೂ 'ಭಂಟರಾವ್ ಭಕ್ತರ್ಗೆ' ಎಂದು ಹೇಳುತ್ತಾನೆ. ತನ್ನನ್ನು ಒಂದು ಮಡಿ ಮೆಚ್ಚಿದವರಿಗೆ ಎಂಟು ಮಡಿ ಮೆಚ್ಚುವುದಾಗಿಯೂ ಘೋಷಿಸುವ ಶ್ರೀಕೃಷ್ಣನು 'ಮಮ ಪ್ರಾಣಾಹಿ ಪಾಂಡವಾಃ.' ಎಂದು ಪಾಂಡವ ಪಕ್ಷಪಾತವನ್ನು ಹಿಂದೆ ಮುಂದೆ ನೋಡದೆ ಸಾರಿ ಹೇಳುತ್ತಾನೆ. ಕೌರವರಾಗಲಿ, ಪಾಂಡವರಾಗಲಿ, 'ಎಮಗೆ ಸರಿಯಿತ್ತಂಡ, ಬೇರೊಬ್ಬರಲಿ ಪಕ್ಷಭ್ರಮೆಯು ಮಾಡೆವು ಹಿತವ ಬಯಸವೆವೆರಡು ಸಂತತಿಗೆ' ಎಂದು ಸಾರಿ 'ಭಂಟರಾವ್ ಭಕ್ತರ್ಗೆ ನೆನೆವರು । ನಂಟರೆಮಗೆ' ಎನ್ನುತ್ತಾನೆ. ಆದರೆ ತರ್ಕ ಸಾಧಕರು ತನಗೆ ಬೇಡ, ಭಕ್ತಿಸಾಧಕರು ಬೇಕು ಎಂಬುದು ಆತನ ಮತ. 'ಕೊಂದು ಹಗೆಯಲ್ಲೀತ ಸಲಹಿದ । ನೆಂದು ಮೋಹಿತನಲ್ಲ' ಎಂಬುದು ಯೋಗೀಶ್ವರನಾದ ಶ್ರೀಕೃಷ್ಣನ ನಿಲುವು ಎಂದು ಭೀಷ್ಮನು ಹೇಳಿದ್ದರೂ ಭಕ್ತಿ ಸುಲಭನಾದ ಆ ಭಗವಂತನು

ಭಕ್ತೆಯಾದ ದ್ರೌಪದಿ 'ಲಕ್ಷ್ಮೀರಮಣ, ಲಕ್ಷ್ಮೀರಮಣ' ಎಂದು ಮೊರೆಯಿಟ್ಟಾಗ ನೊಂದು ಕರಗಿಹೋಗುತ್ತಾನೆ ಕೃಷ್ಣ.

ವೈದಿಕ ದೇವತೆಯಾದ ವಿಷ್ಣುವೆ ಹೆಚ್ಚಿನ ಮಹಾತ್ಮೆಯನ್ನು ಪಡೆದು ಬೆಳೆದು ಬಂದುದನ್ನು ಶತಪಥ ಬ್ರಾಹ್ಮಣ ಮತ್ತು ತೈತ್ತರೀಯ ಅರಣ್ಯಕದಲ್ಲಿ ಕಾಣುತ್ತೇವೆ, ದೇವಾಸುರರು ಯಜ್ಞಸ್ಥಳಕ್ಕಾಗಿ ಹೋರಾಟ ನಡೆಸಿದಾಗ ದೇವತೆಗಳಿಗೆ ಒಬ್ಬ ಕುಬ್ಜನು ವ್ಯಾಪಿಸುವಷ್ಟು ಸ್ಥಳವನ್ನು ಕೊಡಲು ಅಸುರರು ಒಪ್ಪುತ್ತಾರೆ. ಆ ಮೇರೆಗೆ ವಿಷ್ಣು ಅಡ್ಡ ಮಲಗುತ್ತಾನೆ. ಬೆಳೆಯುತ್ತ ಬೆಳೆಯುತ್ತ ಇಡಿಯ ಪೃಥ್ವಿಯನ್ನೆ ವ್ಯಾಪಿಸುತ್ತಾನೆ. ಇದು ವೇದಕಾಲದ ವಿಷ್ಣು ಮಹಾತ್ಮೆಯನ್ನು ವಿವರಿಸುವ ಒಂದು ಕಥೆ. ಬರಬರುತ್ತ ವಿಷ್ಣು ಮನೆತನದ ದೇವತೆಯಾದ. ವೈವಾಹಿಕ ಸಪ್ತಪದಿಯಲ್ಲಿ ವರನು ವಧುವಿಗೆ 'ವಿಷ್ಣು ನಿನ್ನನ್ನು ನಡೆಸಲಿ' ಎಂದು ಇಚ್ಛಿಸುತ್ತಾನೆ. ಮಹಾಭಾರತದ ಕಾಲಕ್ಕೆ ವಿಷ್ಣು ಪರಮಾತ್ಮನೆಂದೂ ವಾಸುದೇವನೆ ವಿಷ್ಣುವೆಂದೂ ಪರಿಗಣಿಸಲ್ಪಟ್ಟಿತ್ತು. ಭೀಷ್ಮಪರ್ವದಲ್ಲಿ ಪರಮಾತ್ಮನೆಂದರೆ ನಾರಾಯಣನೆಂದೂ, ವಿಷ್ಣುವೆಂದೂ, ವಾಸುದೇವನೆಂದೂ ವರ್ಣಿಸಲಾಗಿದೆ.

ವಾಸುದೇವ ಕೃಷ್ಣನೆ ಗೋಪಾಲಕೃಷ್ಣ ಎಂಬ ಬಗ್ಗೆ ಹರಿವಂಶ, ವಿಷ್ಣು ಪುರಾಣ, ಭಾಗವತ ಪುರಾಣಗಳಲ್ಲಿ ಕಥೆಗಳ ಮೂಲಕ ನಿರೂಪಿಸಲಾಗಿದೆ. ಕೃಷ್ಣಾವತಾರದಲ್ಲಿ ಕಂಸನೆ ಮೊದಲಾದ ಅಸಂಖ್ಯ ಅಸುರರನ್ನು ಸಂಹರಿಸಿದ ಕಥೆಗಳಿವೆ.

ಪಾಂಚರಾತ್ರ ಆಗಮವು ಭಕ್ತಿಯ ಮಹತ್ವವನ್ನೆ ತಿಳಿಯಪಡಿಸುತ್ತದೆ. ಈ ಆಗಮವು ಕ್ರಿ. ಪೂ. 3ನೆಯ ಶತಮಾನದಲ್ಲಿ ಬೆಳೆದು ಬಂದಿರಬೇಕೆಂದು ತಿಳಿಯಲಾಗಿದೆ. ವೈಷ್ಣವ ಧರ್ಮವು ಗುಪ್ತರ ಕಾಲಕ್ಕೆ ಎಂದರೆ 4ನೆಯ ಶತಮಾನದ ಪೂರ್ವಾರ್ಧದಲ್ಲಿ ಗುಪ್ತರ ಎರಡನೆಯ ಚಂದ್ರಗುಪ್ತ, ಕುಮಾರಗುಪ್ತ ಮತ್ತು ಸ್ಕಂದಗುಪ್ತ ಈ ರಾಜರು 'ಪರಮ ಭಾಗವತರು' ಎಂದು ಅವರ ನಾಣ್ಯಗಳ ಮೇಲೆ ಮುದ್ರಿಸಲಾಗಿದ್ದಿತು. ಬಾದಾಮಿಯ ಚಾಲುಕ್ಯರ ಕಾಲಕ್ಕೆ ವಿಷ್ಣು ಭಕ್ತಿಯು ಕರ್ನಾಟಕದಲ್ಲಿ ಊರ್ಜಿತ ಸ್ಥಿತಿಯಲ್ಲಿದ್ದಿತೆಂದು ಕಂಡುಬರುತ್ತದೆ.

ಬೇಲೂರಿನ ಚೆನ್ನಕೇಶವ ದೇವಸ್ಥಾನದಲ್ಲಿ ಇರುವ ಶಿಲಾಶಾಸನದ ಶ್ಲೋಕವೊಂದು ಧರ್ಮ ಸಮನ್ವಯ ದೃಷ್ಟಿಗೆ ಒಂದು ಸೂಕ್ತ ಉದಾಹರಣೆಯಾಗಿದೆ :

ಯಂ ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾನ್ತಿನೋ ।
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ ॥
ಅರ್ಹಶ್ಚೇತಿಹ ಜೈನ ಶಾಸನಮಿತಿ ಕರ್ಮೇತಿ ಮೀಮಾಂಸಕಾಃ

(ಅರ್ಹನ್ನಿತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ ।)
ಸೋಽಯಂ ವೋ ವಿಧದಾತು ವಾಂಛಿತಫಲಂ ಶ್ರೀ ಕೇಶವೇಶಸ್ಸದಾ ॥

ವಿಜಯನಗರದ ಬುಕ್ಕರಾಯನ ಕಾಲಕ್ಕೂ ಜೈನ ವೈಷ್ಣವ ಸ್ನೇಹ ಸಂವರ್ಧನವನ್ನು ಸೂಚಿಸುವ ಶಿಲಾಲೇಖವೊಂದು ದೊರಕುತ್ತದ. ಪರಧರ್ಮ ಸಹಿಷ್ಣುತೆ, ಪರಧರ್ಮ ರಕ್ಷಣೆ ಇವು ಸ್ವಧರ್ಮದ ಉನ್ನತಿಕೆಯ ಲಕ್ಷಣ. ಚಾಲುಕ್ಯ, ಯಾದವ, ಹೊಯ್ಸಳರ ಕಾಲಕ್ಕೆ ಶೈವ, ವೈಷ್ಣವ ಎರಡೂ ಧರ್ಮಗಳು ಊರ್ಜಿತಗೊಂಡವು.

ಹನ್ನೆರಡನೆಯ ಶತಮಾನದ ಮಧ್ಯಭಾಗದಲ್ಲಿ ಕಳಚೂರ್ಯರ ಕಾಲಕೆ ಬಸವೇಶ್ವರರಿಂದ ವೀರಶೈವ ಧರ್ಮವು ಪುರಸ್ಕೃತವಾಗಿ ವಚನ ವಾಙ್ಮಯವು ತಲೆ ಯೆತ್ತಿ ಭಕ್ತಿಪಂಥವು ಒಂದು ಉನ್ನತ ಶಿಖರವನ್ನು ಮುಟ್ಟಿತು. ಬಸವೇಶ್ವರರ, ಅಕ್ಕಮಹಾದೇವಿಯ ಹಾಗೂ ಇತರ ಪಲವಾರು ವಚನಕಾರರ ಸುಂದರ ವಚನಗಳಲ್ಲಿ ಭಕ್ತಿ ಎಂದರೇನು ? ಭಕ್ತನ ನಿಲುವು ಎಂತಹದು ? ಭಕ್ತಸ್ಥಲದಿಂದ, ಐಕ್ಯಸ್ಥಳದ ವರೆಗೆ ವಿಕಾಸಮಯವಾದ ಒಂದು ಸಾಧನ ಕ್ರಮವು ಹೇಗೆ ಪರ್ಯಟ್ಟಿದ್ದಿತು ಎಂಬುದಕ್ಕೆ ಶಿವಶರಣರ ವಚನಗಳು ಸುಂದರ ನಿದರ್ಶನಗಳಾಗಿವೆ. 'ನಂಬಿ ಕರೆದರೆ ಓ ಎನ್ನನೇ ಶಿವನು', 'ಭಕ್ತಿ ಎನ್ನೊಳು ನಾಸಿವೆಯ ಷಷ್ಟಾಗದನಿತಿಲ್ಲ', 'ನೀನೊಲಿದರೆ ಕೊರಡು ಕೊನರುವುದಯ್ಯಾ' 'ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವ' 'ನಿಮ್ಮ ಚರಣ ಕಮಲದೊಳಗೆ ಆನು ತುಂಬಿ' ಇದೇ ಮೊದಲಾದ ಭಾವೋತ್ಕಟತೆಯಿಂದ ಕೂಡಿದ ವಚನಗಳು ಬಸವೇಶ್ವರ ಭಕ್ತಿ ಪಾರಮ್ಯವನ್ನು ಘೋಷಿಸುತ್ತವೆ.

ರಾಮಾನುಜಚಾರ್ಯರು ತಮ್ಮ ವಿಶಿಷ್ಟಾದ್ವೈತ ದರ್ಶನದಲ್ಲಿ ಭಕ್ತಿ ಪ್ರಪತ್ತಿಗಳಿಗೆ ಅತ್ಯಂತ ಮೇಲ್ಮೆಯ ಸ್ಥಾನವನ್ನು ಕಲ್ಪಿಸಿದ್ದಾರೆ, ಈ ಪ್ರಪತ್ತಿ ಅಥವಾ ಶರಣಾಗತಿ ಮಾರ್ಗವನ್ನು ಮಧ್ವಾಚಾರ್ಯರು ತಮ್ಮ ದ್ವೈತ ದರ್ಶನದಲ್ಲಿ ಭಕ್ತಿಗೇ ಹೆಚ್ಚಿನ ಸ್ಥಾನವನ್ನು ಕೊಟ್ಟಿದ್ದಾರೆ, "ಮುಕ್ತಿರ್ನೈಜ ಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ" ಎಂದು ಮಧ್ವಾಚಾರ್ಯರ ದ್ವೈತದರ್ಶನ ಸಾರವನ್ನು ಹೇಳುವ ಈ ಶ್ಲೋಕದಲ್ಲಿ ಭಕ್ತಿಯೇ ಮೋಕ್ಷ ಸಾಧನವೆಂಬ ಮಾತನ್ನು ಘಂಟಾಘೋಷವಾಗಿ ಹೇಳಲಾಗಿದೆ. ಭಾಗವತ ಧರ್ಮವೆಂದರೆ ವಿಷ್ಣು ಸರ್ವೋತ್ತಮತ್ವವೆಂಬುದನ್ನು ವೇದಾಂತದ ತಳಹದಿಯ ಮೇಲೆ ಪ್ರತಿಷ್ಠಿಸಿದ ಶ್ರೇಯಸ್ಸು ಶ್ರೀ ಮಧ್ವಾಚಾರ್ಯರದು.

ರಾಮಾನುಜ, ಬಸವ, ಮಧ್ವರ ಭಕ್ತಿಬೋಧನೆಯಿಂದಾಗಿ ಭಕ್ತಿಪಂಥಕ್ಕೆ ಮೇಲ್ಮಟ್ಟದ ಅವಕಾಶವು ದೊರಕಿತು. ಹರಿಪಾರಮ್ಯ ಹರಪಾರಮ್ಯಗಳ ನಡುವೆ ಹರಿಹರ ಭಕ್ತಿಯು ಒಂದು ನಡುವಣ ಭಕ್ತಿಮಾರ್ಗವಾಗಿ ಉದಯಕ್ಕೆ ಬಂತು. ಶಿವೋ

ಪಾಸಕರಾದ ಸ್ಮಾರ್ತ ಬ್ರಾಹ್ಮಣರು ಭಾಗವತ ಸಂಪ್ರದಾಯಕ್ಕೆ ಬದ್ಧರಾಗಿ ಒಂದು ದೃಷ್ಟಿಯಿಂದ ಹರಿಪಾರಮ್ಯವನ್ನು ಎತ್ತಿ ಹಿಡಿದರು. ಹರಿಪಾರಮ್ಯವೇ ಇರಲಿ, ಹರ ಪಾರಮ್ಯವೇ ಇರಲಿ ಅದು ಭಾಗವತ ಧರ್ಮ ಭಕ್ತಿಯೇ ಅದರ ಅನುಷ್ಠಾನ ಎಂಬುದು ಮಹತ್ವದ ಮಾತು. ಶರಣರೆಲ್ಲರೂ ಭಾಗವತರೇ, ಅವರು ಶೈವರೇ ಇರಲಿ, ವೀರ ಶೈವರೇ ಇರಲಿ, ಶಕ್ತಿಪೂಜಕರೇ ಇರಲಿ. ಆದರೆ ಸ್ಮಾರ್ತರ ಭಾಗವತ ಸಂಪ್ರದಾಯ ಧರ್ಮವು ಭಕ್ತಿ ಪಂಥದ ವಿಶಿಷ್ಟ ಮತವಾಗಿ ನಮ್ಮಲ್ಲಿ ಬೆಳೆದುಕೊಂಡು ಬಂತು. ಕರ್ನಾಟಕ ಭಕ್ತಿಯ ಒಂದು ವೈಶಿಷ್ಟ್ಯವೆಂದರೆ ಹರಿಹರವೆಂದರೆ ಹರಿಹರ ಭಕ್ತಿ ಇಲ್ಲವೆ ಭಾಗವತ ಸಂಪ್ರದಾಯದ ಭಕ್ತಿ. ಜ್ಞಾನಕ್ಕಿಂತ ಭಕ್ತಿ ಕರ್ಮಗಳಿಗೆ ಪ್ರಥಮ ಪ್ರಾಶಸ್ತ್ಯ ಇಲ್ಲಿ ದೊರಕಿದ್ದು. ಭಕ್ತಿಯು ಸನ್ಯಾಸ ಮಾರ್ಗವಲ್ಲ. ಸಂಸಾರ ಶರಧಿಯಲ್ಲಿ ಈಸ ಬೇಕು ಇದ್ದು ಜಯಿಸಬೇಕು ಎಂಬ ತತ್ವ ಭಕ್ತಿಮಾರ್ಗದ್ದು. ವೈರಾಗ್ಯ ಅನಾಸಕ್ತಿ ಯೋಗಗಳನ್ನು ಭಕ್ತಿಯು ನಿರಾಕರಿಸದಿದ್ದರೂ ಸಾಮಾನ್ಯ ಸಂಸಾರಿಗನು ಅನುಸರಿಸ ಬಹುದಾದ ಸುಲಭಮಾರ್ಗ ಭಕ್ತಿಪಂಥ ಎಂದು ಗುರುತಿಸಲ್ಪಟ್ಟಿತು. ಭಕ್ತಿಮಾರ್ಗದ ಪ್ರಭಾವವು ಕರ್ನಾಟಕದಲ್ಲಿ ಎಷ್ಟಾಯಿತೆಂದರೆ ಕರ್ನಾಟಕಸ್ಥ ಜೈನಧರ್ಮವು ಕೂಡ ತನ್ನ ಕಡುತರನಾದ ಸನ್ಯಾಸಮಾರ್ಗವನ್ನು ಬದಲಿಸಿ ಕ್ರಮೇಣ ಭಕ್ತಿ ಶರಣಾಗತಿ ಭಾವ ಗಳನ್ನಳವಡಿಸಿಕೊಂಡಿತು.

ವಿಷ್ಣು, ವಾಸುದೇವ, ಕೃಷ್ಣ – ಈ ಬೆಳವಣಿಗೆಯು ಮುಂದೆ ವಿಠ್ಠಲನ ಪೂಜೆ, ವಿಠ್ಠಲಭಕ್ತಿಯನ್ನು ಅಳವಡಿಸಿಕೊಂಡಿತು. ವಿಠ್ಠಲ ಇದು ಕೂಡ ವಿಷ್ಣುವಿನ ಇನ್ನೊಂದು ರೂಪವೇ. ಮಧ್ವಾಚಾರ್ಯರು ಸ್ಥಾಪಿಸಿದ ಉಡುಪಿಯ ಶ್ರೀಕೃಷ್ಣನ ಪೂಜೆಯೊಡನೆ ವಿಠ್ಠಲನ ಪೂಜೆಯೂ ಬೆಳೆದು ಬಂತು. ಪಂಢರಪುರದ ವಿಠ್ಠಲನ ಮಹತ್ವವು ಕರ್ನಾಟಕ, ಮಹಾರಾಷ್ಟ್ರಗಳನ್ನು ವ್ಯಾಪಿಸಿದೆ. ಪಂಢರಪುರದ ವಿಠ್ಠಲನು ವಿಜಯನಗರದ ರಾಜರಾದ ಪ್ರೌಢದೇವರಾಯ ಮತ್ತು ಕೃಷ್ಣದೇವರಾಯರು ಹಂಪೆಯಲ್ಲಿ ಸ್ಥಾಪಿಸಿದ ವಿಜಯ ವಿಠ್ಠಲನೆ ಎಂದು ಹೇಳುತ್ತಾರೆ. ಆದರೆ ಈ ವಿಠ್ಠಲಮೂರ್ತಿ ಪಂಢರಪುರಕ್ಕೆ ಸ್ಥಾನಾಂ ತರಿಸಲ್ಪಟ್ಟೊ ಅಥವ ಇನ್ನೆಲ್ಲಿಗೊ ಸಾಗಿಸಲ್ಪಟ್ಟೊ ಅಂತೂ ಹಂಪೆಯ ವಿಜಯವಿಠ್ಠಲ ಮಂದಿರವು ದೇವರಿಲ್ಲದ ಗುಡಿಯಾಯಿತು. ಕರ್ನಾಟಕದ ಭಕ್ತರಿಗೆ ಹಂಪೆಯ ವಿಠ್ಠಲ ಮೂರ್ತಿಯು ಇಲ್ಲವಾದ ಮೇಲೆ ಪಂಢರಪುರವೆ ಅವರ ಯಾತ್ರಾಸ್ಥಳವಾಯಿತು. ವಿಠ್ಠಲಸಂಪ್ರದಾಯವು ಭಾಗವತ ಧರ್ಮದ ಅಂಗವಾಗಿದೆ. ಮಹಾರಾಷ್ಟ್ರದ ಜ್ಞಾನ ದೇವ, ತುಕಾರಾಮ ಮೊದಲಾದ ಅನೇಕ ಸಾಧು–ಸಂತರು ವಿಠ್ಠಲನ ಮಹಿಮೆಯನ್ನು ಮನವಾರೆ ಕೊಂಡಾಡಿದ್ದಾರೆ.

ಮಹಾರಾಷ್ಟ್ರಕ್ಕೆ ಸ್ಫೂರ್ತಿ ನೀಡಿದ ಭಾಗವತ ಧರ್ಮವು ಶ್ರೀಮಧ್ವಾಚಾರ್ಯರ ಪ್ರಯತ್ನದಿಂದಾಗಿ ಒಂದು ಹೊಸ ಸ್ವರೂಪವನ್ನು ಪಡೆದಿದ್ದಿತು ಎಂಬುದನ್ನು

ಮರೆಯುವಂತಿಲ್ಲ. ಪುರಾಣಗಳ ಗೊಂದಲದಿಂದ ಭಾಗವತ ಧರ್ಮದ ತಿಳಿವಳಿಕೆಗೆ ಉಂಟಾಗಿದ್ದ ಕೊರತೆಗಳನ್ನು ಕಳೆದು ಮಧ್ವಾಚಾರ್ಯರು ವೇದಗಳ ಆಧಾರದಿಂದ ಅದಕ್ಕೆ ಒಂದು ಸಮನ್ವಯ ಸ್ವರೂಪವನ್ನು ನೀಡಿದರು. ಭಾಗವತ ಧರ್ಮವೆಂದರೆ ಸ್ಮಾರ್ತರಿಗೂ, ವೈಷ್ಣವರಿಗೂ ಸಮಾನವಾದ ವಿಷ್ಣು ಭಕ್ತಿ ಎಂದು ಪ್ರತಿಪಾದಿಸಿದರು. ಭಕ್ತಿಯೆ ಭಾಗವತ ಧರ್ಮದ ಮುಖ್ಯ ತತ್ವ ಎಂಬುದನ್ನು ತಿಳಿಯಪಡಿಸಿದರು. ಭಗವದ್ಗೀತೆಯೆ ಭಾಗವತ ಧರ್ಮದ ಸಾರ ಎಂಬುದನ್ನು ವಾಸುದೇವಸರ್ವೋತ್ತಮತ್ವ, ವಿಷ್ಣು ಸರ್ವೋತ್ತಮತ್ವಗಳನ್ನು ಸೂಚಿಸುವಂಥ ವಾಕ್ಯಗಳಿಂದ ಸಿದ್ಧಪಡಿಸಿದರು. ಇದಲ್ಲದೆ ಹರಿಹರರ ಪರಸ್ಪರ ಶ್ರೇಷ್ಠತೆಯ ಸ್ಪರ್ಧೆಗೆ ವಿರಾಮವನ್ನು ಹಾಕಿ ಭಾಗವತ ಧರ್ಮವು ಹೆಚ್ಚು ವ್ಯಾಪಕವೂ, ವಿಶಾಲವೂ ಆಗುವಂತೆ ಮಾಡಿ ಹರಿಹರರ ಸಾಮ್ಯವನ್ನು ಸ್ಥಾಪಿಸಿದರು. ಪಶ್ಚಿಮಘಟ್ಟದ ಕರಾವಳಿಯ ಸಂತರು ಹರಿಹರರಿಗೆ ಸಮಾನ ಗೌರವವನ್ನು ಪೂಜ್ಯತೆಯನ್ನು ಸಲ್ಲಿಸುತ್ತ ಬಂದಿದ್ದಾರೆ. ಇದೆಲ್ಲವು ಶ್ರೀ ಮಧ್ವಾಚಾರ್ಯರ ಪ್ರಭಾವವೇ.

ಭಕ್ತಿಗೆ ಪ್ರಾಶಸ್ತ್ಯ ನೀಡಿದ ಭಾಗವತ ಧರ್ಮವು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಜ್ಞಾನದಿಂದ ಕೂಡಿದ ಭಕ್ತಿಯೆ ಭಾಗವತ ಭಕ್ತಿ ಎಂದೂ ಗುರುತಿಸಿತು. ದೇವತಾಸಾಕ್ಷಾತ್ಕಾರಕ್ಕೆ ಕರ್ಮ, ಜ್ಞಾನ, ಭಕ್ತಿ ಎಂಬ ಮೂರು ಮಾರ್ಗಗಳ ಹೋರಾಟವು ವೇದಾಂತಿಕ ಬೆಳವಣಿಗೆಯಲ್ಲಿ ಕಂಡುಬರುತ್ತಿವೆ. ಗೀತೆಯಲ್ಲಿ ಕರ್ಮ, ಜ್ಞಾನಗಳಿಗಿಂತ ಜ್ಞಾನಯುಕ್ತ ಭಕ್ತಿಗೆ ಪ್ರಾಶಸ್ತ್ಯ ಬಂದಿದೆ. ಭಕ್ತಿಯ ಮುಖಾಂತರ ಕರ್ಮ ಮತ್ತು ಜ್ಞಾನಗಳನ್ನು ಸಂಯೋಜಿಸುವ ತತ್ವವು ಭಾಗವತ ಧರ್ಮದ ಪರಮ ಸಾಧನೆ. ಭಕ್ತಿಯ ವ್ಯಾಪ್ತಿಯನ್ನು ವಿಸ್ತರಿಸಿ ಅದರಲ್ಲಿ ಜ್ಞಾನಕ್ಕೂ, ಕರ್ಮಕ್ಕೂ ಸಮುಚಿತ ಸ್ಥಾನವನ್ನು ಭಾಗವತ ಧರ್ಮವು ಕಲ್ಪಿಸಿತು. ಭಾರತೀಯ ವೇದಾಂತ ವಿಚಾರಕ್ಕೆ ಭಾಗವತ ಧರ್ಮದ ಹಿರಿಯ ಕಾಣಿಕೆಯೆಂದರೆ ಇದು – ಜ್ಞಾನ ಕರ್ಮನಿಷ್ಠ ಭಕ್ತಿ. ಕರ್ಮವನ್ನು ಮಾಡಿಯೂ ನೈಷ್ಕರ್ಮ್ಯವನ್ನು ಸಾಧಿಸುವ ಯೋಗ ಮಾರ್ಗವನ್ನು ಪಂಚರಾತ್ರವೂ ಭಾಗವತ ಧರ್ಮವೂ ಒಂದು ವಿಶಿಷ್ಟ ರೀತಿಯಲ್ಲಿ ಘೋಷಿಸಿದವು ಅದುವೆ ಭಕ್ತಿಪೂರ್ವಕವಾದ ಬುದ್ಧಿಯೋಗ. ಕರ್ಮವು ನೈಷ್ಕರ್ಮ್ಯದ ಹಂತವನ್ನು ಮುಟ್ಟುವಾಗ ಜ್ಞಾನದಿಂದ ಕೂಡಿರುತ್ತದೆ. ಇಂತಹ ಕರ್ಮವನ್ನು ಪರಮಾತ್ಮನಿಗೆ ಸಮರ್ಪಿಸುವಾಗ ಅಲ್ಲಿ ಭಕ್ತಿ ಇರುತ್ತದೆ. ಇದುವೆ ನಿಜವಾದ ಭಗವತ್ ಪೂಜೆ. ಭಕ್ತಿಯು ಜ್ಞಾನದ ಒಂದು ಪರಿಪೂರ್ಣ ಅಂಗ. ಅದೇ ರೀತಿ ಜ್ಞಾನವು ಭಕ್ತಿಯ ಪರಿಪೂರ್ಣಅಂಗ. ಎಂಬುದನ್ನು ಮಧ್ವಾಚಾರ್ಯರು ವಿಶದಪಡಿಸಿದರು – 'ಜ್ಞಾನಸ್ಯ ಭಕ್ತಿಭಾಗತ್ವಾತ್ ಭಕ್ತಿಜ್ಞಾನಮಿತೀರ್ಯತೆ' ಎಂದು.

ಈಶ್ವರನ ಮಾಹಾತ್ಮ್ಯ ಜ್ಞಾನವೇ ಭಕ್ತಿ. ಈ ಮಾಹಾತ್ಮ್ಯೆಯನ್ನು ಅರಿಯಲು ಈಶ್ವರನಲ್ಲಿ ಶ್ರದ್ಧೆ ಬೇಕು. ನಿಜವಾದ ಭಾಗವತ ಧರ್ಮವು ಈಶ್ವರೀಶ್ರದ್ಧೆಯ ಮೇಲೆ ನಿಂತಿದೆ. ಇದಕ್ಕೆ ಸಗುಣೋಪಾಸನೆ ಸಾಧನ. ಭಗವಂತನು ಸಚ್ಚಿದಾನಂದನು, ಶಾಂತನು, ಶಿವನು, ಸುಂದರನು ಆಗಿದ್ದಾನೆ. ಜೀವನದ ಶ್ರೇಷ್ಠ ಮೌಲ್ಯಗಳನ್ನು ಕಾಪಾಡಿಕೊಳ್ಳಲು, ಪೋಷಿಸಲು ಆತನ ಅನುಗ್ರಹ ಬೇಕು. ಪರಮಾತ್ಮನ ಅನಂತ ಗುಣಗಳನ್ನು ಅರಿಯುವುದು ಸಾಮಾನ್ಯ ಮನುಷ್ಯರಿಗೆ ಸಾಧ್ಯವಿಲ್ಲ. ಆದುದರಿಂದ ನಾವು ಭಗವತ್ ಕೃಪೆಯನ್ನು ಪಡೆಯಲು ಭಕ್ತಿಯ ಮೂಲಕ ಪ್ರಯತ್ನಿಸಬೇಕು. ಮಧ್ವಾಚಾರ್ಯರು ಈ ದೃಷ್ಟಿಯಿಂದ ಸಮರ್ಥವಾದ ರೀತಿಯಲ್ಲಿ ವಿವರಿಸಿದ ಭಾಗವತ ಧರ್ಮದ ಮಹಾರಾಷ್ಟ್ರದ ಸಾಧುಸಂತರ ಚಿತ್ತವನ್ನು ಸೆಳೆಯಿತು. ಭಾಗವತ ಧರ್ಮದಲ್ಲಿ ಭಗವತ್ ಪೂಜೆಯು ಸಾಧನವಾಗುವುದಿಲ್ಲ ಸಿದ್ಧಿಯೆನಿಸುತ್ತದೆ. ನಾಮ ಸಂಕೀರ್ತನೆಗಳು ಕೂಡ ಭಕ್ತಿಯ ಒಂದು ಸಿದ್ಧಿಯೇ. ಭಕ್ತನಿಗೆ ದಾಸನಾಗಿ ಇರುವುದರಲ್ಲಿಯೆ ದಿವ್ಯ ಆನಂದ. ಭಕ್ತನು ಯಾವಾಗಲೂ ಭಕ್ತನಾಗಿಯೆ ಇರಬೇಕೆನ್ನುತ್ತಾನೆ. ಮಹಾರಾಷ್ಟ್ರದ ಭಾಗವತ ಕವಿ ಸಂತ ತುಕಾರಾಮನು ಹೀಗೆ ಹೇಳುತ್ತಾನೆ. 'ಅದ್ವೈತಿತೋ ಮಾಝೌ ನಾಹಿ ಸಮಾಧಾನ ಗೋಡ ಹೇ ಚರಣ ಸೇವಾ ತುಝೀ.' ಭಕ್ತನಿಗೆ 'ಅಹಂಬ್ರಹ್ಮಾಸ್ಮಿ'ಯಾಗುವುದರಲ್ಲಿ ಆನಂದವಿಲ್ಲ, ಸೋಹಂ ಎಂಬಲ್ಲಿ ಸಮಾಧಾನವಲ್ಲ. ಭಗವಂತನಿಂದ ಭಿನ್ನನಾಗಿ ಆತನ ಚರಣಸೇವೆ ಮಾಡುವುದರಲ್ಲಿಯೆ ಹೆಚ್ಚಿನ ತೃಪ್ತಿ. ಸಾತ್ವಿಕ ಗುಣವನ್ನು ತೋರುವ ಅಂತ್ಯಜನು ಕೂಡ ಭಾಗವತನೇ. ಇದು ಮಧ್ವಾಚಾರ್ಯರ ಮನೋಭಾವ. 'ಸತ್ವಾಧಿಕಃ ಪುಲ್ಕಸೋಽಪಿ ಯಸ್ತು ಭಾಗವತಃ ಸದಾ.' ಇದು ಭಾಗವತ ತತ್ವ. ಮಧ್ವಾಚಾರ್ಯರ ತರುವಾಯ ಬಂದ ಹರಿದಾಸರು ಈ ವಿಚಾರವನ್ನು ವಿಸ್ತೃತವಾಗಿ ಪ್ರಕಟಿಸಿದ್ದಾರೆ. ಮಧ್ವಾಚಾರ್ಯರ ಭಾಗವತ ವಿಚಾರವು ಬಂಗಾಲದ ಚೈತನ್ಯರನ್ನೂ ಮಹಾರಾಷ್ಟ್ರದ ಜ್ಞಾನೇಶ್ವರರನ್ನೂ ಪ್ರಭಾವಿಸಿತು. ಮುಂದೆ ವಲ್ಲಭಾಚಾರ್ಯರು, ಗೋಸ್ವಾಮಿಯವರೂ ಮಧ್ವಾಚಾರ್ಯರ ವೈಚಾರಿಕ ಪ್ರಭೆಯಿಂದ ಬೆಳಗಿದರು.

ಮಧ್ವಾಚಾರ್ಯರು ಜನಸಾಮಾನ್ಯರಿಗಾಗಿ ಅನೇಕ ಭಕ್ತಿಪರ ಗೀತೆಗಳನ್ನು ರಚಿಸಿದ್ದಾರೆ. (ಅವರ ಪ್ರತಿಭೆ, ಪಾಂಡಿತ್ಯಗಳನ್ನೂ ವಿಮರ್ಶಾ ಪ್ರಜ್ಞೆಯನ್ನೂ ತೋರ್ಪಡಿಸುವ ಭಾರತ ತಾತ್ಪರ್ಯ ನಿರ್ಣಯ, ಋಗ್‌ಭಾಷ್ಯ, ಸೂತ್ರ ಪ್ರಸ್ಥಾನ ಇತ್ಯಾದಿ ಗ್ರಂಥಗಳ ವಿವೇಚನೆ ಇಲ್ಲಿ ಪ್ರಸ್ತುತವಲ್ಲ) ಆಚಾರ್ಯರ ದ್ವಾದಶಸ್ತೋತ್ರವು ಅವರ ಹೃದಯದಿಂದ ಹೊರಹೊಮ್ಮಿದ ಭಾವಗೀತಾಂಜಲಿಯಾಗಿದೆ. ಆಚಾರ್ಯರು ಭಗವದ್ಭಕ್ತಿಯಿಂದ ಮೈ ಮರೆತಾಗ ಈ ದ್ವಾದಶಸ್ತೋತ್ರಗಳು ಉಕ್ಕಿ ಹೊರಚೆಲ್ಲಿವೆ.

ಹರಿದಾಸರ ಭಕ್ತಿಪರ ಕೀರ್ತನ ವಾಙ್ಮಯಕ್ಕೆ ದ್ವಾದಶಸ್ತೋತ್ರವು ಸ್ಫೂರ್ತಿಯ ಆಗರ ವಾಗಿದೆ, ಅದು ಹರಿದಾಸ ಸಾಹಿತ್ಯದ ಗಂಗೋತ್ರಿ. ಇದರಲ್ಲಿ ಆಚಾರ್ಯರು ಶ್ರೀ ಹರಿಯನ್ನು ವಿವಿಧ ರೀತಿಯಿಂದ ಸ್ತುತಿಸಿದ್ದಾರೆ. ತಮ್ಮ ಸಿದ್ಧಾಂತಗಳನ್ನೆಲ್ಲ ಪರ ಮಾತ್ಮನ ಪ್ರಾರ್ಥನೆಯಲ್ಲಿಯೆ ಅಳವಡಿಸಿದ್ದಾರೆ. ಇದರಲ್ಲಿ 'ವಂದೇ ವಂದ್ಯಂ ಸದಾ ನಂದಂ ವಾಸುದೇವಂ ನಿರಂಜನಂ ಇಂದಿರಾಪತಿ ಮಾದ್ಯಾದಿ ವರದೇಶ ವರಪ್ರದಮ್' ಎಂದು ಮೊದಲಾಗುವ ಸ್ತೋತ್ರವಾಗಲಿ 'ಕುರುಂ ಭುಂಕ್ಷ್ವ ಚ ಕರ್ಮ ನಿಜಂ ನಿಯತಂ ಹರಿಪಾದವಿನಮ್ರಧಿಯಾ ಸತತಂ' ಎಂದು ಮೊದಲಾಗುವ ಸ್ತೋತ್ರವಾಗಲಿ 'ದೇವಕೀನಂದನ ನಂದಕುಮಾರ ವೃಂದಾವನಾಂಜನ ಗೋಕುಲಚಂದ್ರ' ಎಂದು ಮೊದಲಾಗುವ ದಶಾವತಾರದ ವರ್ಣನಪರ ಸ್ತೋತ್ರವಾಗಲಿ ಉತ್ತಮ ಭಾವಗೀತ ಗಳ ಉದಾಹರಣೆಗಳು. ಪಂಚಮಸ್ತೋತ್ರದೊಳಗಿನ ಸ್ವಲ್ಪ ಭಾಗ ಹೀಗಿದೆ.

**ಅನುಬಂಧ—ಪಂಚಮಸ್ತೋತ್ರದೊಳಗಿನ ಕೆಲವು ಭಾಗ :**

ಕುರುಭುಂಕ್ಷ್ವ ಚ ಕರ್ಮ ನಿಜಂ ನಿಯತಂ ಹರಿಪಾದವಿನಮ್ರಧಿಯಾ ಸತತಂ
ಹರಿರೇವಪರೋ ಹರಿರೇವಗುರುರ್ಹರಿರೇವ ಜಗತ್ಪಿತೃ ಮಾತೃಗತಿಃ ॥
ನತತೋऽಸ್ತ್ಯ ಪರಂ ಜಗದೀಡ್ಯ ತಮಂ ಪರಮಾತ್ಪರತಃ ಪುರುಷೋತ್ತಮತಃ
ತದಲಂ ಬಹುಲೋಕ ವಿಚಿಂತನಯಾ ಪ್ರವಣಂ ಕುರುಮಾನಸಮೀಶಪದೇ ॥
ಯತತೋऽಪಿ ಹರೇ, ಪದ ಸಂಸ್ಮರಣೇ ಸಕಲಂ ಹ್ಯಘಮಾಶುಲಯಂವ್ರಜತಿ
ಸ್ಮರತಸ್ತು ವಿಮುಕ್ತಿ ಪದಂ ಪರಮಂ ಸ್ಫುಟಮೇಷ್ಯತಿ ತತ್ಕಿಮಪಾಕ್ರಿಯತೇ ॥
ಶೃಣುತಾಮಲ ಸತ್ಯವಚಃ ಪರಮಂ ಶಪಥೇರಿತ ಮುಚ್ಛ್ರಿತ ಬಾಹುಯುಗಮ್
ನಹರೇಃ ಪರಮೋ ನ ಹರೇಃ ಸದೃಶಃ ಪರಮಃ ಸತು ಸರ್ವಚಿದಾತ್ಮಗಣಾತ್॥
ಯದಿನಾಮ ಪರೋ ನಭವೇತ ಹರಿಃ ಕಥಮಸ್ಯವಶೇ ಜಗತೇತದಭೂತ್
ಯದಿನಾಮ ನತಸ್ಯವಶೇ ಸಕಲಂ ಕಥಮೇವ ತು ನಿತ್ಯಸುಖಂ ನಭವೇತ್....॥

(ಉಳಿದ ಸ್ತೋತ್ರಗಳಿಗಾಗಿ ಅನುಬಂಧ 'ಕ' ೧ ಮತ್ತು ೨ ನೋಡಿರಿ)

ಭಾಗವತ ಧರ್ಮವು ಮಧ್ವಾಚಾರ್ಯರಿಂದ ಒಂದು ಸಮನ್ವಯ ಸ್ವರೂಪ ವನ್ನು ಪಡೆದು ಭಕ್ತಿಪ್ರಮುಖವಾಗಿ ತನ್ನ ಪ್ರಭಾವವನ್ನು ಮಹಾರಾಷ್ಟ್ರ, ಗುಜರಾಥ, ಬಂಗಾಲಗಳಲ್ಲೆಲ್ಲ ಪಸರಿಸಿತಷ್ಟೆ. ಬಂಗಾಲದಲ್ಲಿ ಚೈತನ್ಯರಿಂದ ವೈಷ್ಣವ ಭಕ್ತಿಗೆ ಹೆಚ್ಚಿನ ಪುಟ ಸಿಕ್ಕಿತು. ಚೈತನ್ಯರು ತಮ್ಮ ಗಯಾಯಾತ್ರೆಯಲ್ಲಿ ಈಶ್ವರ ಪುರಿ ಎಂಬ ಸಾಧು ಪುರುಷನಿಂದ ಕೃಷ್ಣಭಕ್ತಿಯ ಮಂತ್ರವನ್ನು ಸ್ವೀಕರಿಸಿ ತತ್ವ ಭಾವದಿಂದ ವೈಷ್ಣವ ಭಕ್ತಿಯನ್ನು ಬಂಗಾಲದ ತುಂಬೆಲ್ಲ ಪಸರಿಸಿದರು.

## ಮಹಾರಾಷ್ಟ್ರದಲ್ಲಿ ಭಾಗವತ ಪಂಥ

ಮಹಾರಾಷ್ಟ್ರದಲ್ಲಿ ಕರ್ನಾಟಕ ಭಾಗವತ ಭಕ್ತಿಯೇ ಸಂತರಾದ ಜ್ಞಾನೇಶ್ವರ, ತುಕಾರಾಮ್, ಏಕನಾಥ್, ನಾಮದೇವ ಮೊದಲಾದ ಸಂತ ಕವಿಗಳಿಗೆ ಸ್ಫೂರ್ತಿ, ಪ್ರೇರಣೆ ನೀಡಿತು. ಮಹಾರಾಷ್ಟ್ರೀಯ ಭಾಗವತರಿಗೆ ಪಂಡರಪುರವೇ ಪುಣ್ಯಕ್ಷೇತ್ರವಾಗಿದ್ದಿತು. ಮಹಾನುಭಾವ ಪಂಥಿಯವರೂ, ನಾಥ ಪಂಥಿಯವರೂ ಹಾಗೂ ವಾರ್ಕರಿ ಪಂಥಿಯರೂ ಪಂಡರಪುರದ ವಿಠ್ಠಲನ ಭಕ್ತರಾಗಿದ್ದರು. ನಾಥ ಪಂಥಿಯರ ಮೂಲಪುರುಷನು, ಆದಿನಾಥ. ಅವನಿಂದ ಮತ್ಸ್ಯೇಂದ್ರನಾಥ, ಗೋರಕನಾಥ, ಗಹನೀನಾಥ, ನಿವೃತ್ತಿನಾಥ ಮೊದಲಾಗಿ ಜ್ಞಾನದೇವನವರೆಗೆ ಪರಂಪರೆ ನಡೆದುಕೊಂಡು ಬಂದಿತು. "ಈ ಪಂಥದಲ್ಲಿ ಆತ್ಮ ಸಾಕ್ಷಾತ್ಕಾರ ಅಥವಾ ಆತ್ಮಾನುಭಾವವೆ ಸಾಧಕನ ಮುಖ್ಯ ಗುರಿ. ಶಿವ, ವಿಷ್ಣು ಇಬ್ಬರೂ ಏಕವೆಂದೂ ಆಧ್ಯಾತ್ಮ ಜ್ಞಾನದಲ್ಲಿ ಎಲ್ಲರಿಗೂ ಸಮಾನ ಅಧಿಕಾರವಿರುವುದೆಂದೂ ವರ್ಣಾಶ್ರಮ ಭೇದವಿಲ್ಲದೆ ಎಲ್ಲರೂ ಈ ಮಾರ್ಗದ ದೀಕ್ಷೆಯನ್ನು ಹೊಂದಿ ಆತ್ಮಾನುಭಾವವನ್ನು ಪಡೆಯಬಲ್ಲರೆಂದೂ ಇವರು ನಂಬುವರು."*

ವಾರ್ಕರಿ ಪಂಥದವರು ಭಾಗವತ ಸಂಪ್ರದಾಯಕ್ಕೆ ಸೇರಿದ ಅದ್ವೈತ ತತ್ವದವರು. ಪಾಂಡುರಂಗನು ಇವರ ಆರಾಧ್ಯ ದೇವತೆ.

ಮಹಾನುಭಾವ ಪಂಥವು ಹನ್ನೆರಡನೆ ಶತಮಾನದಲ್ಲಿ ಚಕ್ರಧರ ಸ್ವಾಮಿಯಿಂದ ಸ್ಥಾಪಿಸಲ್ಪಟ್ಟಿತು. ಮಹಾನುಭಾವೀಯರು ಅವೈದಿಕರೆಂದೂ ಕೆಲವರು ನಂಬುತ್ತಾರೆ. ಅವರು ಮೂರ್ತಿಪೂಜೆಯನ್ನೂ, ವೇದಪ್ರಾಮಾಣ್ಯವನ್ನೂ ಒಪ್ಪುವುದಿಲ್ಲ. ಭಗವದ್ಗೀತೆಯು ಅವರಿಗೆ ಮಾನ್ಯ ಗ್ರಂಥವಾಗಿದೆ. ಸ್ತ್ರೀಪುರುಷರು ಈ ಪಂಥಕ್ಕೆ ಸೇರಿ ಸನ್ಯಾಸ ಸ್ವೀಕರಿಸಿ ಮೋಕ್ಷ ಪಡೆಯಬಲ್ಲರು ಎಂದು ಈ ಪಂಥದವರ ನಂಬುಗೆ.

ಭಕ್ತಿಯು ಜಾತಿ, ಮತಗಳನ್ನು ಎಣಿಸದೆ ಒಂದು ಹಿಂದೂ ಧರ್ಮದ ವ್ಯಾಪ್ತಿಯನ್ನು ಒಳಗೊಂಡುದು. ಕರ್ನಾಟಕದಷ್ಟೆ ಮಹಾರಾಷ್ಟ್ರಕ್ಕೂ ಅನ್ವಯಿಸುತ್ತದೆ. ಕರ್ನಾಟಕದಲ್ಲಿ ವೀರಶೈವ ವಚನಕಾರರು ಹರಿದಾಸ ಕೀರ್ತನಕಾರರು ಭಕ್ತಿಯ ಒಂದೇ ಮಾರ್ಗದಲ್ಲಿ ಮುಂದುವರಿದಂತೆ ಮಹಾರಾಷ್ಟ್ರದಲ್ಲಿಯೂ ವಿವಿಧ ಜಾತಿಯ ವಿವಿಧ ಮತಗಳ ಸಂತರು ಭಕ್ತಿಪದರಚನೆಗಳಾದ ಅಭಂಗಗಳನ್ನು ರಚಿಸಿದರು.

ಸಂತ ತುಕಾರಾಮರು ಜ್ಞಾನೇಶ್ವರರಿಂದ ಪ್ರಭಾವಿತರಾಗಿ ಜ್ಞಾನೇಶ್ವರರ ಸಮಾಧಿ ಸ್ಥಳವಾದ ಆಳಂದಿಯ ಮಹಾತ್ಮೆಯನ್ನು ಕುರಿತು ಒಂದೆಡೆಗೆ ಹೀಗೆ ಭಕ್ತಿಪರ ಉದ್ಗಾರವನ್ನು ತೆಗೆದಿದ್ದಾರೆ :

---

* ಹರಿದಾಸ ಸಾಹಿತ್ಯ-ಪುಟ. 42

ಚಲಾ ಆಳಂದೀಲ ಜಾವು । ಜ್ಞಾನದೇವ ಡೋಳಾ ಪಾಹು ॥
ಹೋತಿ ಸಂತಾಂಚಿಯಾಭೇಟಿ । ಸಾಂಗು ಸುಖಾಚಿಯಾಗೋಷ್ಟಿ ॥
ಜ್ಞಾನೇಶ್ವರ ಜ್ಞಾನೇಶ್ವರ । ಮುಖಿ ಮ್ಹಣತಾ ಚುಕತಿ ಫೇರೆ ॥
ಪುನಃ ಜನ್ಮನಾಹಿ ಐಕ । ತುಕಾಮಣೆ ಮಾಜಿ ಭಾಕ ॥

ನಾಮರೂಪ ಸಂಕೀರ್ತನೆಯನ್ನು ಮರಾಠಿ ಸಂತರ ಅಭಂಗಗಳಲ್ಲಿ ವಿಪುಲವಾಗಿ ಕಾಣು ತ್ತೇವೆ. ತುಕಾರಾಮರ ಈ ಅಭಂಗವನ್ನು ಅವಲೋಕಿಸಬಹುದು :

ಸದಾ ಮಾಯ್ಝಾ ಡೋಳಾ ಜಡೋತುಜಿ ಮೂರ್ತಿ ।
ರುಶುಮಾಯೀಟಾ ಪತಿ ಸೋಯೆರೀಯಾ ॥
ಗೋಡ ತುಝೆ ರೂಪ ಗೋಡ ತುಝೆ ನಾಮ ॥
ದೇಯಿ ಮಜ ಪ್ರೇಮ ಸರ್ವಕಾಳ ॥
ವಿರೂ ಮಾವುಲಿ ಏ ಹಾಚಿ ವರದೇಯಿ ।
ಯೇವೊನಿಯಾ ರಾಹಿ ಹೃದಯೀಮಾಯ್ಝಾ ॥
ತುಕಾಮಣೆ ಕಾಚೆ ನ ಮಾಗೆ ಆಣಿಕ ।
ತುಜಾ ಪಾಯಿ ಸುಖ ಸರ್ವ ಆಯೆ ॥

ತುಕಾರಾಮರ ಇನ್ನೊಂದು ಅಭಂಗದಲ್ಲಿ ಹಸಿದ ಭಕ್ತ ಭಗವಂತನನ್ನು ಹೊಟ್ಟೆಯ ಹಸಿವು ಹಿಂಗುವ ಮಟ್ಟಿಗೆ ನೀಡಿದರೆ ಸಾಕೆಂದು ಬೇಡಿಕೊಳ್ಳುವಲ್ಲಿ ಭಕ್ತಿಯ ಉತ್ಕಟತೆಯಲ್ಲಿ ಸುಂದರ ಧ್ವನ್ಯರ್ಥವೂ ಇದೆ :

ಲಯೀನಾಹಿ ಲಯೀನಾಹಿ ಮಾಗಣೆ ದೇವಾ ।
ಪೋಟಾಪುರತೆ ದೇಯೀ ವಿಠ್ಠಲಾ ॥
ವಸ್ತ್ರಜುನ ಅಥವಾ ನವ ದೇಯೀ ದೇವಾ ಅಂಗಭರೋನ ॥
ಕಳವಾ ಅಥವಾ ಕೋಮ್ ಡಾ । ದೇಯೀ ಭುಕೇಚಾ ತೋಂಡಾ ವಿಠ್ಠಲಾ ॥
ಭಾಕರತಾಜಿ ಅಥವಾ ಶಿಳೀ । ದೇಯೀ ಭುಕೇಚಾ ವೇಳಿ ವಿಠ್ಠಲಾ ॥
ತುಕಾಮ್ಹಣೆ ದೇವಾ ಆತಾ । ನಕಾಕರು ಪಾಯಾ ಪರತಾ ॥

ಸಂತ ತುಕಾರಾಮರು ಏಕಾಂಕಿಕ ಭಕ್ತಿಯ ಮೇಲ್ಮೆಯನ್ನೂ ತಮ್ಮ ಅಭಂಗ ಗಳಲ್ಲಿ ಕೊಂಡಾಡಿದ್ದಾರೆ. ಏಕಾಂತಿಕ ಅನನ್ಯ ಭಕ್ತಿಯ ಮುಂದೆ ಮಿಕ್ಕ ಸಾಧನಗಳು ತುಚ್ಛವೆನಿಸುತ್ತವೆ. (ಅನುಬಂಧ 'ಕ 3 ನೋಡಿರಿ) ಅಭಂಗಗಳು ಶರಣರ ವಚನಗಳಂತೆ

ಅಂತರಂಗದ ಭಾವನೆಗಳನ್ನು ಬಹಿರಂಗ ಪಡಿಸುವ ಸಣ್ಣ ಸಣ್ಣ ಸುಂದರ ಭಾವಗೀತ ಗಳಾಗಿವೆ. ದಾಸರ ಕೀರ್ತನೆಗಳಂತೆ, ಸುಳಾದಿ, ಉಗಾ ಭೋಗಗಳಂತೆ ತಾಳ, ಲಯ ಬದ್ಧವಾಗಿ ಗೇಯ ಸಾಹಿತ್ಯದಿಂದ ಕೂಡಿವೆ. 'ವಚನದಲ್ಲಿ ನಾಮಾಮೃತ ತುಂಬಿ' ಎಂದು ಬಸವೇಶ್ವರರು ಹಾಡಿದಂತೆ 'ರಾಮನಾಮ ಪಾಯಸಕ್ಕೆ ಕೃಷ್ಣ ನಾಮ ಸಕ್ಕರೆ' ಎಂದು ಪುರಂದರದಾಸರು ಹಾಡಿದಂತೆ, ಸಂತ ನಾಮದೇವರು ಒಂದು ಅಭಂಗದಲ್ಲಿ ಹೀಗೆ ಹಾಡಿದ್ದಾರೆ :

'ಅಮೃತಾಹುನಿಗೋಡ ನಾಮ ತುಝೆ ದೇವಾ' ಎಂದರೆ ಪಂಢರಿರಾಯನ ನಾಮಸ್ಮರಣೆಯು ಅಮೃತದಷ್ಟೇ ಅಲ್ಲ ಅಮೃತಕ್ಕಿಂತ ಸವಿ.

ಮನಮಾಝೆ ಕೇಶವಾ ಕಾ ಬಾ ನಘೇ ॥
ಸಾಂಗ ಪಂಢರೀರಾಯ ಕಾಯ ಕರೂ ಯಾಸಿ
ಕಾರೂಪ ಧ್ಯಾನಾಸಿ ನಯೇ ತುಝೆ ? ॥
ಕೀರ್ತನಿ ಬೈಸತಾ ನಿದ್ರೆ ನಾಗವೀಲೆ
ಮನಮಾಝೆ ಗುಂತಲೇ ವಿಷಯ ಸುಖಾ ॥
ಹರಿದಾಸ ಗರ್ಜತಿ ಹರಿನಾಮಾಚಾ ಕೀರ್ತಿ .
ನಯೇ ಮಾಝೆ ಚಿತ್ತೀ ನಾಮಾಮ್ಹಣೆ ॥

ಸಂತ ಜ್ಞಾನೇಶ್ವರರು ವಿಠ್ಠಲಮೂರ್ತಿಯನ್ನು ಕಂಡಾಗ ತಮಗಾದ ಹರ್ಷ ನಿರ್ಭರತೆಯನ್ನು ಈ ಅಭಂಗದಲ್ಲಿ ಹೇಳಿದ್ದಾರೆ.

ರೂಪಪಾಹತಾ ಲೋಚನಿ । ಸುಖಝಾಲೆ ಓ ಸಾಜನಿ
ತೋಹಾ ವಿಠ್ಠಲ ಬರವಾ । ತೋಹಾ ಮಾಧವ ಬರವಾ ॥
ಬಹುತ ಸುಕೃತಾಚಿ ಜೋಡಿ । ಮ್ಹಣುನಿ ವಿಠ್ಠಲೀ ಆವಡೀ ॥
ಸರ್ವಸುಖಾಚೆ ಆಗರ । ಬಾಪ ರಕುಮಾದೇವಿವರ ॥

ಇದರಂತೆಯೆ ದೇವಸೇವಾಭಾವವನ್ನು ವ್ಯಕ್ತಪಡಿಸುವ ದಾಸ್ಯ ಭಕ್ತಿಗೆ ದಿವ್ಯ ನಿದರ್ಶನವೆಂಬಂತೆ ಜ್ಞಾನೇಶ್ವರರ ಈ ಅಭಂಗವನ್ನು ನೋಡಬಹುದು :

ತುಝೀ ಸೇವಾ ಕರೀನ ಮನೋಭಾವೇವೋ
ಮಾಝೆ ಮನಹೇ ಗೋವಿಂದು ರಂಗಲೇವೊ ॥
ನವಸೀಯೆ ಮಾಝೆ ನವಸೀಯೆವೊ

ಪಂಢರೀಚೆ ದೈವತ ವಿಠ್ಠಲೇವೋ
ಬಾಪ ರಕುಮಾದೇವಿವರು ವಿಠ್ಠಲೇವೋ
ಚಿತ್ತ ಚೈತನ್ಯ ಚೋರೂನಿ ನೇಲೇವೋ ॥

ಸಂತ ಜ್ಞಾನೇಶ್ವರರ ಕಾಲದ ಮರಾಠೀ ಭಾಷೆಯ ಅವಸ್ಥೆಯನ್ನು ಈ ಅಭಂಗದಲ್ಲಿ ನೋಡಬಹುದಾಗಿದೆ. ಕನ್ನಡದಂತೆ ಉಕಾರಾಂತ ಶಬ್ದಗಳು ಜ್ಞಾನೇಶ್ವರರ ಶೈಲಿಯ ವೈಶಿಷ್ಟ್ಯ.

ಸಂತ ಏಕನಾಥರ ಅಭಂಗಗಳಲ್ಲಿ ಅನುಭಾವವು ಹಾಲಿನ ಕೆನೆಯಂತೆ ಹೆಪ್ಪುಗಟ್ಟಿದೆ. ಈ ದೇಹವೆ ಕ್ಷೇತ್ರ ಎಂಬರ್ಥದಲ್ಲಿ ದೇಹವೆ ಪಂಢರಪುರ ಆತ್ಮವೇ ವಿಠ್ಠಲ ಎಂದು ಹಾಡಿದ್ದಾರೆ.

ನಾಮುವದತಾ ಹೇ ವೈಖರಿ ಚಿತ್ತಧಾವೆ ವಿಷಯಾವರಿ ॥
ಕೈಸೆ ಹೋತಾ ಹೇ ಸ್ಮರಣ ಸ್ಮರಣಾಮಾಜೀ ವಿಸ್ಮರಣ
ನಾಮ ರೂಪಾ ನಾಹೀಮೇಳ ನುಸುತಾ ವಾಚೀ ಚಾ ಗೋಂಧಳ
ಏಕಾ ಜನಾರ್ದನಿ ನಾಮ ನಾಮೀ ಪ್ರಗಟೆ ಆತ್ಮಾರಾಮ

ನಾಮ ಸಂಕೀರ್ತನೆಗೆ ಇಂಥದೆ ಕಾಲ ಇಂಥದೆ ವೇಳೆ ಎಂಬುದಿಲ್ಲ. ಇಂಥದೆ ಜಾತಿ, ಇಂಥದೆ ಮತ ಎಂಬುದಿಲ್ಲ. ನಾಮ ಸಂಕೀರ್ತನೆಯಷ್ಟು ಸೌಲಭ್ಯ ಇನ್ನೊಂದು ಸಾಧನಕ್ಕಿಲ್ಲ. ಸಂತ ನಾಮದೇವರು ಹೇಳುತ್ತಾರೆ :

ಕಾಳವೇಳನಸ್ವ ನಾಮಸಂಕೀರ್ತನೆ । ಉಂಚ ನೀಚ ಯೋನಿ ಹೇ ಹೀನಸೇ ॥
ಧರಾನಾಮಕಂಠಿ ಸದಾ ಸರ್ವಕಾಳ । ಮಗತೋ ಗೋಪಾಳ ಸಂಭಾಳೀಲ ॥
ಕೃಪಾಳು ಶೋವಸಾ ಸುಖಾ ಚಾ ಸಾಗರ । ಕರೀಲ ಉದ್ಧಾರ ಭಾವಿಕಾಸಿ ॥
ನಾಮಾಮ್ಹಣೆ ಥಾರ ಸೋಪೇ ಹೇ ಸಾಧನ । ವಾಚೇನಾಮ ಘೇಣೆ ಇತುಕೇಚಿ॥

ಸಂತ ಜ್ಞಾನೇಶ್ವರರ ಒಂದು ಅಭಂಗವಂತೂ ಅನುಭಾವದ ಶಿಖರವನ್ನು ಮುಟ್ಟಿದ. ಶ್ರೀಹರಿಯನ್ನು ಸಾಕ್ಷಾತ್ಕರಿಸಿಕೊಂಡ ಸುಂದರ ಚಿತ್ರ ಇದರಲ್ಲಿ ಮೂಡಿದೆ.

ಹರಿಯಾಲಾರೆ ಹರಿಯಾಲಾರೆ । ಸಂತಸಂಗೆ ಬ್ರಹ್ಮಾನಂದೂ ಜ್ಞಾನಾಚಾರ ॥
ಹರಿಯೇಥೆರೆ ಹರಿಯೇಥೆರೆ । ಹರಿವಾಚುನಿ ನ ದಿಸೆ ರಿತೇರೆ ॥
ಹರಿಪಾಹೀರೆ ಹರಿಧ್ಯಾಯೀರೆ । ಹರಿ ವಾಚುನಿ ದುಜೆ ನಾಹೇರೆ ॥
ಹರಿವಾಚೇರೆ ಹರಿನಾಚೇರೆ । ಹರಿಪಾಹಲಾ ಆನಂದು ಸಾಚೇರೆ ॥
ಹರಿ ಆದೀರೆ ಹರಿ ಅಂತೀರೆ । ಹರಿ ವ್ಯಾಪಕ ಸರ್ವಾ ಭೂತೀರೆ ॥
ಹರಿ ಜಾಣಾರೆ ಹರಿ ವಾನಾರೆ । ಬಾಪ ರಕುಮಾದೇವಿವರು ರಾಣಾರೆ ॥

ಶ್ರೀ ಜ್ಞಾನೇಶ್ವರ್, ಶ್ರೀ ನಾಮದೇವ್, ಶ್ರೀ ಏಕನಾಥ್, ಶ್ರೀ ತುಕಾರಾಮ್, ಶ್ರೀ ರಾಮದಾಸ್ ಈ ಐವರು ಸಾಧುಗಳನ್ನು ಮಹಾರಾಷ್ಟ್ರದ ಸಾಧುಪಂಚಾಯತನ ಎಂದು ಕರೆಯುತ್ತಾರೆ. ಇವರೆಲ್ಲರೂ, ಮಧ್ವಾಚಾರ್ಯರು ಪ್ರಚುರಪಡಿಸಿದ ಭಾಗವತ ಮೇಲ್ಮೆಯನ್ನು ಎತ್ತಿ ಹಿಡಿದರು. ಸಂತ ಜ್ಞಾನೇಶ್ವರರು ಮಹಾರಾಷ್ಟ್ರದ ಹದಿಮೂರನೆಯ ಶತಮಾನದ ಭಕ್ತಿಮಾರ್ಗದ ಆದಿ ಪ್ರವರ್ತಕರು. ಮಹಾರಾಷ್ಟ್ರದ ಈ ಪ್ರಮುಖ ಸಾಧು ಸಂತರ ಬೋಧನೆಗಳು 'ಅನಾದಿ ವೇದಗ್ರಂಥಗಳಿಂದ ಆತ್ಮ ತತ್ವದ ಉತ್ಕೃಷ್ಟ ನಿರೂಪಣೆಯುಳ್ಳ ಉಪನಿಷದ್ಗ್ರಂಥ' ರಾಮ, ಕೃಷ್ಣಾದಿಗಳ ಸಗುಣ, ನಿರ್ಗುಣ ರೂಪವಿಷಯವಾಗಿ ಅದ್ಭುತ ಪ್ರೇಮವನ್ನು ಹುಟ್ಟಿಸುವಂತಹ ರಾಮಾಯಣ, ಭಾರತ,ಭಾಗವತಾದಿ ಜ್ಞಾನ, ಭಕ್ತಿಪ್ರಧಾನ ಗ್ರಂಥಗಳು ಮತ್ತು ಆ ಗ್ರಂಥಗಳ ಸಹಾಯ ದಿಂದ ಹಾಗೂ ಸದ್ಗುರು ಪ್ರಸಾದದಿಂದ ಕೃತಾರ್ಥರೆನಿಸಿದ ಭಾಗವತೋತ್ತಮರ ಸಾನು ಭವ ಪರ ಉಕ್ತಿಗಳು ಅಸಂಖ್ಯ ಜೀವಿಗಳ ಮುಕ್ತಿಮಾರ್ಗವನ್ನು ತೆರೆದು ತೋರಿವೆ,' ಎಂದು ಮರಾಠಿ ಲೇಖಕ ಶ್ರೀ ಲ.ರಾ. ಪಾಂಗಾರ್‌ಕರ ಹೇಳಿದ್ದಾರೆ. ಸಂತ ಜ್ಞಾನೇಶ್ವರ ಮೊದಲಾದ ಪಂಚಭಾಗವತರು ಕರ್ಮಯೋಗ, ಜ್ಞಾನಯೋಗ ಅವಿರುದ್ಧವಾದ ಭಕ್ತಿ ಮಾರ್ಗವನ್ನು ಮಹಾರಾಷ್ಟ್ರದ ತುಂಬೆಲ್ಲ ಪ್ರಚುರಪಡಿಸಿದರು. ಜ್ಞಾನೇಶ್ವರೀ ಗ್ರಂಥವು ಮುಂದಿನ ಆರುನೂರು ವರ್ಷಗಳಲ್ಲಿ ತಲೆಯೆತ್ತಿದ ಸಂತ ಶಿಶುಗಳ ಮಾತು. ಜ್ಞಾನೇಶ್ವರೀ ಎಂದರೆ ಜ್ಞಾನೇಶ್ವರರು ರಚಿಸಿದ ಗೀತೆಯನ್ನು ಕುರಿತ ಗ್ರಂಥ, ಮತ್ತು ಏಕನಾಥಿ ಭಾಗವತ ಎಂದರೆ ಏಕನಾಥರು ರಚಿಸಿದ ಭಾಗವತ. ಇವು ಭಕ್ತಿಮಾರ್ಗದ ಮುಖ್ಯ ಆಧಾರಸ್ತಂಭಗಳಾಗಿವೆ. ಸರ್ವಾಂಗ ಮನೋಹರವಾದ ಜ್ಞಾನೇಶ್ವರಿ, ಭಕ್ತಿ ಪ್ರೇಮಗಳ ಮಹಾರ್ಣವವೆನಿಸಿದ ಏಕನಾಥಿ ಭಾಗವತ, ಪ್ರಪಂಚ – ಪರಮಾರ್ಥಗಳ ಉತ್ಕೃಷ್ಟ ವಿವರಣೆಯನ್ನು ನೀಡುವ ದಾಸಬೋಧ. ನಾಮದೇವ, ತುಕಾರಾಮಾದಿ ಗಳ ಪ್ರೇಮ, ಭಕ್ತಿಗಳ ಸ್ವೈರಾಲಾಪ ಇವು ಸ್ವಾನುಭವಾಮೃತದ ಸಾಗರ ಎನಿಸಿವೆ.

ರೂಪಗೋಸ್ವಾಮಿ, ಸನಾತನ ಗೋಸ್ವಾಮಿ ಮತ್ತು ಜೀವ ಗೋಸ್ವಾಮಿ ಈ ಮೂವರು ಚೈತನ್ಯಾನುಯಾಯಿಗಳು ವೈಷ್ಣವ ಮತದ ವಿಚಾರವಾಗಿ ಮಧ್ವಾಚಾರ್ಯರ ಗ್ರಂಥಗಳಿಂದಲೆ ಉದ್ಧರಿಸಿದ್ದಾರೆ. ಹೀಗೆ ಉತ್ತರ ಹಿಂದೂಸ್ತಾನದಲ್ಲಿ ಮಧ್ವಾ ಚಾರ್ಯರ ಪ್ರಭಾವವು ವಿಪುಲವಾಗಿದೆ. ಗುಜರಾಥದಲ್ಲಿ ವ್ಯಾಸತೀರ್ಥರ ಸಮಕಾಲೀನ ರಾದ ವಲ್ಲಭಾಚಾರ್ಯರು ಭಾಗವತ ಧರ್ಮವನ್ನು ಪ್ರಚಾರ ಮಾಡಿದರು. ಕೃಷ್ಣ ಭಕ್ತಿ ಅವರ ಸಾರಸರ್ವಸ್ವ. ನರ್ಸಿ ಮೆಹತಾ ಎಂಬ ಸಂತ ಕವಿ ವಿಷ್ಣು ಭಕ್ತಿ ಪಾರಮ್ಯವನ್ನು ಗುಜರಾತ್ ಭಾಷೆಯಲ್ಲಿ ಹಾಡಿದ್ದಾನೆ. 'ವೈಷ್ಣವ ಜನತೋತೇನೇ ಕಹಿಯೆ ಜೇ ಪೀಡಪರಾಯೆ ಜಾಣೇರೆ' ಎಂಬ ಲೋಕಪ್ರಿಯ ಗೀತೆ ಗಾಂಧೀಜಿ ಯವರಿಗೆ ವಿಶೇಷ ಮೆಚ್ಚುಗೆಯಾಗಿತ್ತು, ಕರ್ನಾಟಕದಲ್ಲಿ ವ್ಯಾಸಕೂಟ ಮತ್ತು

ದಾಸಕೂಟ ಪರಂಪರೆಗಳು ಮಧ್ವಾಚಾರ್ಯರ ಭಾಗವತ ಧರ್ಮವನ್ನೇ ತಮ್ಮ ಕೀರ್ತನೆಗಳ ಮೂಲಕ ಎತ್ತಿ ಹಿಡಿದು ಗೇಯವಾದ ಈ ಸಾಹಿತ್ಯವನ್ನು ಕನ್ನಡಿಗರ ಮನೆ ಮನೆಗೂ ಮುಟ್ಟಿಸಿದ್ದಾರೆ. ಕರ್ನಾಟಕ ಹರಿದಾಸ ಆಂದೋಲನವಂತೂ ಮಧ್ವಾಚಾರ್ಯರ ಭಾಗವತ ಧರ್ಮದ ಆಧಾರದ ಮೇಲೆ ಬೆಳೆದುಕೊಂಡು ಬಂತು. ದಾಸಕೂಟದವರು ಕೈಯಲ್ಲಿ ತಂಬೂರಿ, ಕಾಲಲ್ಲಿ ಗಜ್ಜೆ ಕಟ್ಟಿಕೊಂಡು ಮನೆ ಮನೆಗೆ ಹೋಗಿ ಕೀರ್ತನೆಗಳ ಪ್ರಚಾರ ಮಾಡಿದರು.

**ಕರ್ನಾಟಕದಲ್ಲಿ ಭಾಗವತ ಪಂಥ—ಪ್ರಥಮ ಹರಿದಾಸರು**

ಭಕ್ತಿಪಂಥದ ಪ್ರಥಮ ಹರಿದಾಸರು ಯಾರು ಎಂಬ ಬಗ್ಗೆ ಒಂದಿಷ್ಟು ಭಿನ್ನಾಭಿಪ್ರಾಯಗಳಿದ್ದಂತೆ ತೋರುತ್ತದೆ. ನರಹರಿ ತೀರ್ಥರೊ, ಶ್ರೀಪಾದ ರಾಯರೊ, ಅಚಲಾನಂದದಾಸರೊ ಇವರಲ್ಲಿ ಯಾರು ಆದ್ಯರು ಎಂಬ ಬಗ್ಗೆ ಸ್ಪಷ್ಟವಾದ ಆಧಾರಗಳು ದೊರೆತಿಲ್ಲ. "13ನೆಯ ಶತಮಾನದ ಕೊನೆಗಿದ್ದ ನರಹರಿತೀರ್ಥರು 'ದಾಸಕೂಟದ ಮೂಲಪುರುಷ' ಆದರೆ ಅವರ ತರುವಾಯ 15ನೆಯ ಶತಮಾನದ ಶ್ರೀಪಾದರಾಯರವರೆಗೂ ಯಾರ ಹೆಸರೂ ಕೇಳಬರುವುದಿಲ್ಲ. ದಾಸಕೂಟಕ್ಕೆ ಹಿರಿಯನೆಂದು ಕೀರ್ತನಕಾರರು ಮೊದಲು ಶ್ರೀಪಾದರಾಯರನ್ನು ನೆನೆಯುವುದನ್ನು ನೋಡಿದರೆ ನರಹರಿತೀರ್ಥರ ಬದಲು ಅವರೇ ಮೊದಲಿಗರಾಗಬೇಕೆಂದು ತೋರುವಂತಿದೆ. ಈ ವಿಷಯದಲ್ಲಿ ಸಂಶೋಧನೆ ನಡೆಯಬೇಕಾಗಿದೆ. ಸದ್ಯದ ಮಟ್ಟಿಗೆ ನರಹರಿತೀರ್ಥರೆ ಮೊದಲಿಗರೆಂದು ನಾವು ಗ್ರಹಿಸಿದ್ದೇವೆ. ಪರಂಪರೆ ತ್ರುಟಿತವಾಗಿದೆ ಎಂಬುದರಿಂದ ಅವರು ಮೊದಲಿಗರಲ್ಲ ಎಂದು ತಿಳಿಯಬೇಕಾಗಿದೆ."[1] ಆದರೆ ಕೀರ್ತನೆಗಳ ಬಹು ಸಂಖ್ಯಾಕತೆ, ಅವುಗಳ ಲೋಕಪ್ರಿಯತೆ ಇವುಗಳ ದೃಷ್ಟಿಯಿಂದ ಶ್ರೀಪಾದರಾಯರಿಗೇ ಆದ್ಯತೆ ಸಲ್ಲುತ್ತದೆ. "ಹರಿದಾಸ ಸಾಹಿತ್ಯ ಕ್ಷೇತ್ರದಲ್ಲಿ ಸದ್ಯಕ್ಕೆ ಪ್ರಪ್ರಥಮರೆಂದು ಪರಿಗಣಿತರಾಗಿರುವ ಶ್ರೀಪಾದರಾಜರ ರಚನೆಗಳಲ್ಲಿ ಹರಿಭಕ್ತಿ ಪ್ರತಿಪಾದನೆಯತ್ತ ಗಮನ ಹರಿದಿರುವಷ್ಟು ಸಾರ್ವತ್ರಿಕವಾದ ಉಪದೇಶಗಳ ಕಡೆ ಹರಿದಿಲ್ಲವೆಂದು ಹೇಳಬಹುದು."[2]

ದಾಸ ಸಾಹಿತ್ಯವು ಮುಖ್ಯವಾಗಿ ನಾಲ್ಕು ಘಟ್ಟಗಳಾಗಿ ವಿಭಾಗಿಸಲ್ಪಟ್ಟಿದೆ. ಮೊದಲನೆಯ ಮೆಟ್ಟಿಲಲ್ಲಿ ಪುರಂದರದಾಸರ ಪೂರ್ವದ ಸಾಹಿತ್ಯವು ಶ್ರೀ ಮಧ್ವಾಚಾರ್ಯರು ಬೆಳಗಿದ ಭಾಗವತ ಮಾರ್ಗದಲ್ಲಿ ಕೀರ್ತನೆಗಳ ಉದಯಕಾಲವನ್ನು

1. ಡಾ॥ ರ. ಶ್ರೀ ಮುಗಳಿ 'ಕನ್ನಡ ಸಾಹಿತ್ಯ ಚರಿತ್ರೆ'
2. ಡಾ॥ ಜಿ. ವರದರಾವ್ 'ಶ್ರೀಪಾದರಾಯರು'

ಗುರುತಿಸುವ ನರಹರಿತೀರ್ಥರು, ಶ್ರೀಪಾದರಾಯರು, ವ್ಯಾಸತೀರ್ಥರು ಇವರೇ ಮೊದಲಾದ ಖ್ಯಾತ, ಅಲ್ಪಖ್ಯಾತ, ಅಜ್ಞಾತ ದಾಸಕವಿಗಳು ಬರುತ್ತಾರೆ. ಎರಡನೆಯ ಘಟ್ಟ ದಾಸ ವಾಙ್ಮಯದ ಉಚ್ಛ್ರಾಯ ಕಾಲ ಎಂದು ಹೇಳಬಹುದು. ಈ ಘಟ್ಟವು ವಿಜಯನಗರದ ಕೃಷ್ಣದೇವರಾಯನ ಆಳ್ವಿಕೆಯ ಕಾಲ. ಈ ಕಾಲದ ದಾಸವರೇಣ್ಯರೆ ಪುರಂದರದಾಸ ಮತ್ತು ಕನಕದಾಸ. ಮೂರನೆಯ ಘಟ್ಟವು ವಿಜಯದಾಸ ಪ್ರಮುಖವಾದ ದಾಸರ ಭಾಗವತ ಪರಂಪರೆಯ ಪುನರೋಭಿವೃದ್ಧಿಗೆ ಸಂಬಂಧಿಸಿದೆ. ನಾಲ್ಕನೆಯ ಘಟ್ಟ ಗುರುಪ್ರಾಣೇಶವಿಠ್ಠಲರೇ ಪ್ರಮುಖರಾದ ದಾಸಕೂಟಕ್ಕೆ ಸಂಬಂಧಿಸಿದೆ. ಮೊದಲನೆಯ ಘಟ್ಟವು 13 ರಿಂದ 16ನೆಯ ಶತಮಾನದವರೆಗೆ, ಎರಡನೆಯ ಘಟ್ಟವು 16 ರಿಂದ 18ನೇ ಶತಮಾನದ ಮಧ್ಯದವರೆಗೆ ಮೂರನೆಯ ಮತ್ತು ನಾಲ್ಕನೆಯ ಘಟ್ಟಗಳು ಮುಂದಿನ ಒಂದು ಶತಮಾನದವರೆಗೆ ಎಂದು ಸ್ಥೂಲವಾಗಿ ಗುರುತಿಸಬಹುದು. ಜಗನ್ನಾಥದಾಸರು ಕ್ರಿ. ಶ. 18ನೇ ಶತಮಾನದ ಪ್ರಾರಂಭದ ದೆಸೆಯಲ್ಲಿದ್ದರೆ ಮಹಿಪತಿದಾಸರು ವಿಜಾಪುರದ ಮಹಮ್ಮದ ಶಾ ಎಂಬ ಬಾದಶಹನ ಊಳಿಗದಲ್ಲಿದ್ದರು. ಪ್ರಸನ್ನ ವೆಂಕಟದಾಸರು ವಿಜಯದಾಸರ ಸಮಕಾಲೀನರು.

ಪುರಂದರದಾಸರ ಪೂರ್ವದ ದಾಸಸಾಹಿತ್ಯವೆಂದರೆ ಯಾವಾಗಿನಿಂದ ಪ್ರಾರಂಭ ಎಂಬ ವಿಷಯವು ಇನ್ನೂ ಅನಿಶ್ಚಿತ. ಶ್ರೀ ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾಗಿ ನರಹರಿತೀರ್ಥರು, ಮಧ್ವಾಚಾರ್ಯರು ದ್ವಾದಶಸ್ತೋತ್ರದಲ್ಲಿ ಮಿಡಿದ ಭಕ್ತಿಯನ್ನೆ ಕನ್ನಡದಲ್ಲಿ ನುಡಿಸಿದರು ಎನ್ನಬಹುದು. ಆದರೆ ನರಹರಿತೀರ್ಥರ ಕೀರ್ತನೆಗಳು ಸಾಕಷ್ಟು ಮೊತ್ತದಲ್ಲಿ ಉಪಲಬ್ಧವಿಲ್ಲ. ಬೆರಳ ಮೇಲೆಣಿಸುವಷ್ಟು ಕೆಲವೇ ಕೀರ್ತನೆಗಳು ಮಾತ್ರ. ರಚನೆಗಳ ಅಲ್ಪತೆಯಿಂದಾಗಿ ಅವರ ಆದ್ಯತೆಗೆ ಚ್ಯುತಿ ಬರಲಾರದು. ನರಹರಿತೀರ್ಥರಿಂದ ಮೊದಲಾದುದು ಎನ್ನಬಹುದಾದರೆ ಮುಂದೆ ದಾಸ ಸಾಹಿತ್ಯವು ಶ್ರೀಪಾದರಾಯರ ಕಾಲದವರೆಗೂ ಎಂದರೆ ಸುಮಾರು ಎರಡುನೂರು ವರ್ಷಕಾಲ ಬದುಕಿ ಬೆಳೆದು ಬಂದುದಕ್ಕೆ ಉದಾಹರಣೆಗಳೆ ಇಲ್ಲದಂತಾಗಿವೆ. ಈ ಸಂದರ್ಭದಲ್ಲಿ ಅಚಲಾನಂದದಾಸರ ಪ್ರಶ್ನೆಯು ಉದ್ಭವಿಸುತ್ತದೆ. ಆದರೆ ಅವರು ಶ್ರೀ ಬೇಲೂರು ಕೇಶವದಾಸರು ಅಭಿಪ್ರಾಯಪಡುವಂತೆ ಅಷ್ಟೊಂದು ಎಂದರೆ 9ನೆಯ ಶತಮಾನದಷ್ಟು ಪ್ರಾಚೀನರಲ್ಲವೆಂಬುದೀಗ ಸ್ಪಷ್ಟವಾಗಿದೆ.

**ನರಹರಿತೀರ್ಥರು**

ನರಹರಿತೀರ್ಥರು ಶ್ರೀ ಮನ್ಮಧ್ವಾಚಾರ್ಯರ ಶಿಷ್ಯರು. ಮುಖ್ಯವಾಗಿ

ಸಂಸ್ಕೃತ ಭಾಷೆಯಲ್ಲಿಯೆ ಇವರ ಗ್ರಂಥರಚನೆ ನಡೆದಿರಬೇಕು. ಮಧ್ವಾಚಾರ್ಯರ ಮತಪ್ರಚಾರಕ್ಕಾಗಿ ಜನಸಾಮಾನ್ಯಬೋಧವಾಗುವಂತೆ ಕನ್ನಡದಲ್ಲಿ ಕೀರ್ತನ ಪದ್ಧತಿಯನ್ನು ಪ್ರಾರಂಭಿಸಿ ತನ್ಮೂಲಕ ಭಾಗವತ ಧರ್ಮದ ಮೇಲ್ಮೆಯನ್ನು ಕೊಂಡಾಡಿದರು.

. ನರಹರಿತೀರ್ಥರು ಒರಿಸ್ಸಾ ದೇಶದ ಗಜಪತಿಅರಸರಲ್ಲಿ ಅಧಿಕಾರಿಗಳಾಗಿದ್ದು ಮುಂದೆ ದೈವವಶಾತ್ ರಾಜ್ಯಪಟ್ಟವನ್ನು ಪಡೆದರು. ಮಧ್ವಾಚಾರ್ಯರು ಬದರಿಯಾತ್ರೆಯನ್ನು ಮುಗಿಸಿಕೊಂಡು ಹಿಂತಿರುಗುವಾಗ ಒರಿಸಾ ದೇಶದಲ್ಲಿ ರಾಣ್ಯ ಹೂಡಿದಾಗ ನರಹರಿತೀರ್ಥರು (ಸ್ವಾಮಿಶಾಸ್ತ್ರಿಗಳೆಂದು ಇವರ ಪೂರ್ವಾಶ್ರಮದ ಹೆಸರು) ಮಧ್ವಾಚಾರ್ಯರನ್ನು ಸಂಧಿಸಿ ಅವರ ಪ್ರತಿಭೆ, ಪಾಂಡಿತ್ಯಗಳಿಗೆ ಮನಸೋತು ಮಧ್ವಾಚಾರ್ಯರ ದ್ವೈತ ಸಿದ್ಧಾಂತವನ್ನು ಅಂಗೀಕರಿಸಿದರು. ಆಚಾರ್ಯರ ಅಪೇಕ್ಷೆಯ ಮೇರೆಗೆ ಗಜಪತಿರಾಜರ ಭಂಡಾರದಲ್ಲಿದ್ದ ಮೂಲ ಸೀತಾರಾಮರ ವಿಗ್ರಹಗಳನ್ನು ಆಚಾರ್ಯರಿಗೆ ಒಪ್ಪಿಸಿ ತಾವೂ ಉಡುಪಿಯಲ್ಲಿಯೆ ನೆಲೆಯಾಗಿ ನಿಂತರು. ಮುಂದ ಮಧ್ವಾಚಾರ್ಯರು ಮೂಲ ಸೀತಾರಾಮರ ವಿಗ್ರಹಗಳನ್ನು 80 ದಿನಗಳವರೆಗೆ ಆರಾಧನೆ ಮಾಡಿ ತಮ್ಮ ಸಂಸ್ಥಾನವನ್ನು ಪದ್ಮನಾಭತೀರ್ಥರಿಗೆ ಒಪ್ಪಿಸಿ ತಾವು ಮತ್ತೆ ಬದರಿಕಾಶ್ರಮಕ್ಕೆ ಪ್ರಯಾಣ ಮಾಡಿದರು. ಪದ್ಮನಾಭತೀರ್ಥರು 1324ನೇ ನವೆಂಬರ್ 14ರ ವರೆಗೆ ಸಂಸ್ಥಾನದ ಆಡಳಿತವನ್ನು ನೋಡಿಕೊಂಡು ಆ ಬಳಿಕ ನರಹರಿತೀರ್ಥರಿಗೆ ಅದನ್ನು ಒಪ್ಪಿಸಿದರು.

ಇವರ ಕೀರ್ತನೆಗಳು ದೊರೆತಿರುವುದು ಸದ್ಯ 2–3 ಮಾತ್ರವೇ. ಈ ಬಗ್ಗೆ ಸಾಕಷ್ಟು ಸಂಶೋಧನೆ ನಡೆದಂತಿಲ್ಲ.

ನರಹರಿತೀರ್ಥರು ಪೂರ್ವಾಶ್ರಮದಲ್ಲಿ ಸ್ವಾಮಿಶಾಸ್ತ್ರಿಗಳಾಗಿ ರಾಜ್ಯಭಾರ ವಹಿಸಿಕೊಂಡುದು ಕ್ರಿ. ಶ. 1263ರಲ್ಲಿ (ಇಂಡಿಯನ್ ಆ್ಯಂಟಿಕ್ವೇರಿ, ಸಂಪುಟ xliii (1914) ಪುಟ, 264) ಶ್ರೀ ಆರ್. ಎಸ್. ಪಂಚಮುಖಿಯವರು ಮಾತ್ರ ನರಹರಿತೀರ್ಥರು ಪೂರ್ವದಲ್ಲಿಯೆ ಸಂನ್ಯಾಸಿಗಳಾಗಿದ್ದರೆಂಬ ಅರ್ಥ ಬರುವಂತೆ ಹೇಳುತ್ತಾರೆ. “ಪಾಜಕ ಕ್ಷೇತ್ರದಲ್ಲಿ ಶ್ರೀ ಮಧ್ವಾಚಾರ್ಯರು ಅವತಾರ ಹೊಂದಿ ಉಡುಪಿಯಲ್ಲಿ ಶ್ರೀ ಕೃಷ್ಣನ ಪ್ರತಿಷ್ಠೆ ಮಾಡಿ ಶ್ರೀ ವಿಷ್ಣುತೀರ್ಥ, ಪದ್ಮನಾಭತೀರ್ಥ, ನರಹರಿತೀರ್ಥ, ಮಾಧವತೀರ್ಥ, ಅಕ್ಷೋಭ್ಯತೀರ್ಥರೆ ಮೊದಲಾದ ಸಂನ್ಯಾಸಿಗಳನ್ನೂ ತ್ರಿವಿಕ್ರಮ ಪಂಡಿತಾಚಾರ್ಯರೆ ಮೊದಲಾದ ಗೃಹಸ್ಥಾಶ್ರಮಿಗಳನ್ನೂ ಶಿಷ್ಯರನ್ನಾಗಿ ಮಾಡಿಕೊಂಡು ಅವರ ಮೂಲ್ಯವಾಗಿ ವೈದಿಕ ತತ್ವವಾದವನ್ನೂ, ಹರಿಭಕ್ತಿಯನ್ನೂ ಪ್ರಚಾರಗೊಳಿಸಿದರು.” (ಹರಿದಾಸ ಸಾಹಿತ್ಯ, ಪುಟ–39) ನರಹರಿತೀರ್ಥರು

ಗೃಹಸ್ಥಾಶ್ರಮಿಯಾಗಿ ರಾಜ್ಯಭಾರ ಮಾಡಿ ಮಧ್ವಾಚಾರ್ಯರನ್ನು ಸಂಧಿಸಿದ ಮೇಲೆ ರಾಜ್ಯತ್ಯಾಗ ಮಾಡಿ ಉಡುಪಿಗೆ ಬಂದು ಅಲ್ಲಿ ಸಂನ್ಯಾಸವನ್ನು ಸ್ವೀಕರಿಸಿರಬೇಕು.

ಹರಿದಾಸಾಗ್ರಣಿ ಎನಿಸಿದ ಮಧ್ವಾಚಾರ್ಯರು ತುಳು ಭಾಷೆಯಲ್ಲಿ ಭಕ್ತಿಪರ ಗೀತಗಳನ್ನು ರಚಿಸಿ ಸ್ತ್ರೀಯರಿಗೂ ಶೂದ್ರರಿಗೂ ಉಪಕಾರ ಮಾಡಿದರೆಂದು ತಿಳಿಯುತ್ತದೆ. ನರಹರಿತೀರ್ಥರು ಮಧ್ವಾಚಾರ್ಯರಿಂದಲೆ ಸ್ಫೂರ್ತಿ ಪಡೆದು ಅವರ ಶಿಷ್ಯತ್ವವನ್ನು ವಹಿಸಿ ಪದಗಳನ್ನು ರಚಿಸಿ ಲೋಕೋಪಕಾರ ಕಾರ್ಯವನ್ನು ಕೈಗೊಂಡರು. ಇವರಂತೆ ಮಧ್ವಾಚಾರ್ಯರ ಮತ್ತೊಬ್ಬ ಶಿಷ್ಯರಾದ ಜಯತೀರ್ಥರೂ ಇದೇ ರೀತಿಯಾಗಿ ಹರಿಭಕ್ತಿ, ಹರಿ–ಉಪಾಸನೆ, ಹರಿದಾಸ್ಯಗಳನ್ನು ತಮ್ಮ ವಚನಗಳ ಮುಖಾಂತರ ಉಪದೇಶಿಸಿದರು. ಮುಂದೆ ಶ್ರೀಪಾದರಾಯರು, ವ್ಯಾಸತೀರ್ಥರು, ಪುರಂದರದಾಸರು ಇವರ ಭಕ್ತಿಮಾರ್ಗದಲ್ಲಿಯೆ ಮುನ್ನಡೆದರು.

**(ಅನುಬಂಧ 'ಆ' – 4 – 5 ನೋಡಿರಿ.)**

ಭಕ್ತನು ತನ್ನ ಮೇಲೆಯೆ ಆರೋಪಿಸಿಕೊಂಡಿರುವ ಪ್ರೀತಿ, ಧನಾದಿ ವಿಷಯದಲ್ಲಿ ನಿರ್ಭೀತಿ, ದೈವ ಗುರುದ್ರೋಹ, ಏಕಾಂತದಲ್ಲಿ ಸ್ವಾರ್ಥ ಗೋಷ್ಠಿ, ಲೋಕಾಂತದಲ್ಲಿ ವೈರಾಗ್ಯದ ಗೋಷ್ಠಿ ಇಂತಹ ಬಾಹ್ಯಾಡಂಬರದ ಜೀವನ, ಸಮಾಜದಲ್ಲಿ ಸುಳ್ಳು ಪ್ರತಿಷ್ಠೆ, ಧರ್ಮಕ್ಕಾದರೊ ಒಂದು ಕಾಸು ಕೊಟ್ಟರೆ ಸಾವಿರ ಹೊನ್ನು ಕೊಟ್ಟ ಹಾಗೆ ತಿಳಿಯುವುದು, ಅಧರ್ಮಕ್ಕೆ ಕೊಟ್ಟ ಕೋಟಿ ಹೊನ್ನನ್ನು ಒಂದೇ ಕಾಸು ಎಂದು ತಿಳಿಯುವುದು, ಧರ್ಮಕ್ಕೆ ಬೇಸರಿಕೆ ಅಧರ್ಮಕ್ಕೆ ಎಚ್ಚರಿಕೆ – ಇಂತಹ ಢಂಭತನದ ಕರ್ಮವ ಮಾಡಿ ಅಂಬುಜನಾಭನಿಗೆ ಕುಂಭೀಪಾಕಕ್ಕೆ ಗುರಿಯಾಗುವ ಮಾನವನು ಎಂತಹ ಮರುಳನು ಎಂದು ನರಹರಿದಾಸರು ಉದ್ಗಾರ ತೆಗೆದಿದ್ದಾರೆ. ತಾನು, ತನ್ನ ಹೆಂಡಿರು, ತನ್ನ ಮಕ್ಕಳು ಎಂಬ ಮೋಹ, ಮಮಕಾರಗಳಲ್ಲಿ ಸಂಕುಚಿತಗೊಂಡು ವ್ಯರ್ಥ ಧಾವತಿಪಡುವ ಪೊಳ್ಳು ಜೀವನವನ್ನು ಟೀಕಿಸಿದ್ದಾರೆ. ಮುಂದಿನ ಎಲ್ಲ ದಾಸರಲ್ಲಿಯೂ ಇದೇ ಬಗೆಯ ಸಮಕಾಲೀನ ಸಾಮಾಜಿಕ ಜೀವನದ ಡಂಭಾಚಾರವನ್ನು ಎತ್ತಿ ಹೀಗಳೆಯುವ ಮನೋವೃತ್ತಿಯನ್ನು ಕಾಣುತ್ತೇವೆ. ಹೀಗೆ ಜೀವನವು ವ್ಯರ್ಥ ಹಾಳಾಗದೆ ಕೃತಾರ್ಥತೆಯನ್ನು ಪಡೆಯಬೇಕಾದರೆ ಭಕ್ತಿಯೊಂದೆ ಮುಖ್ಯಸಾಧನ ಎಂಬ ತಾತ್ಪರ್ಯ ದಾಸರ ಕೀರ್ತನಗಳಲ್ಲಿ ಅಡಕವಾಗಿದೆ. ಹೀಗೆ ದಾಸರು ಒಂದು ಬಗೆಯಿಂದ ಲೋಕಶಿಕ್ಷಣಕಾರ್ಯವನ್ನು ತಮ್ಮ ಕೀರ್ತನೆಗಳ ಮೂಲಕ ಮಾಡಿದ್ದಾರೆ. ಇದರೊಂದಿಗೆ ಆಧ್ಯಾತ್ಮಿಕ ಅನುಭವ ನಿರ್ಹೇತುಕವಾದ ಭಕ್ತಿಭಾವ ಇವು ಎದ್ದು ಮೂಡಿವೆ. ಇದರೊಂದಿಗೆ ಕೀರ್ತನೆಗಳಲ್ಲಿ ಮಿಂಚುವ ಕಾವ್ಯಗುಣದಿಂದಲೂ, ಸರಳ ಶೈಲಿಯಿಂದಲೂ, ಸುಂದರ ಭಾವನೆಗಳಿಂದಲೂ, ಅರ್ಥಾಲಂಕಾರ ಶಬ್ದಾಲಂಕಾರಗಳಿಂದಲೂ ದಾಸರ ಕೀರ್ತನೆಗಳು ಕಂಗೊಳಿಸುತ್ತವೆ. ಎಲ್ಲಕ್ಕೂ ಮುಖ್ಯವಾಗಿ

ಕೀರ್ತನೆಗಳು ಸಂಗೀತಕ್ಕೆ ಅಳವಟ್ಟು ರಾಗ, ತಾಳ, ಒಪ್ಪವಾಗಿ ಉತ್ತಮ ಗೇಯ ಲಕ್ಷಣಗಳಿಂದ ಕೂಡಿದುವಾಗಿವೆ. ಕೀರ್ತನೆಗಳು ಸಂಗೀತಮಯತೆಯಿಂದ ಕರ್ನಾಟಕ ಸಂಗೀತಶಾಸ್ತ್ರಕ್ಕೆ ಹೊಸ ಕಾಂತಿಯನ್ನೂ ಮೇಲ್ಮೆಯನ್ನೂ ಪಾವಿತ್ರ್ಯವನ್ನೂ ತಂದುಕೊಟ್ಟವು.

ನರಹರಿತೀರ್ಥರ ಮತ್ತೊಂದು ಕೀರ್ತನೆಯಲ್ಲಿ ಮಧುರ ಭಕ್ತಿ ವ್ಯಕ್ತವಾಗಿದೆ. ಇದರಲ್ಲಿ ಭಕ್ತನು ಭಗವಂತನ ಮೇಲೆ ಸಖ್ಯಭಾವದಿಂದ, ಸಲುಗೆಯಿಂದ ತನ್ನ ಹೃದ್ಗತವನ್ನು ತೋಡಿಕೊಳ್ಳುತ್ತಾನೆ. ಭಕ್ತನಾದ ತನ್ನಲ್ಲಿ ಕರುಣೆಯನ್ನು ತೋರದೆ ಇರುವುದು ಸರಿಯೆ ? ಎಂದು ಹರಿಯನ್ನು ಆಕ್ಷೇಪಿಸಿ ನುಡಿಯುತ್ತಾನೆ. ಭಕ್ತನು ಪತಿತನೆಂದು ಶ್ರೀಪತಿಯು ರಕ್ಷಿಸದಿದ್ದರೆ ಆತನ ಪತಿತಪಾವನಕೀರ್ತಿಯು ಹಿತತ ವಹುದೆ ಎಂದು ಪ್ರಶ್ನಿಸುತ್ತಾನೆ. ಹಿಂದಕ್ಕೆ ಅಜಾಮಿಳನನ್ನು ಕಾಯಲಿಲ್ಲವೆ? ತಾನೇನು ಪರಕೀಯನೆ ? ತಾನೂ ಬಂಟನಲ್ಲವೆ ?— ಎಂದು ಮೊದಲಾಗಿ ಭಗವಂತನಲ್ಲಿ ಮೊರೆಯಿಟ್ಟು ಆತನನ್ನೆ ಒಂದು ಬಗೆಯಾಗಿ ಆರೋಪಕ್ಕೆ ಗುರಿಪಡಿಸುತ್ತಾನೆ. ನಿಂದಿಸುವ ರೀತಿಯಲ್ಲಿ ಭಗವಂತನನ್ನು ವಂದಿಸುವುದು ದಾಸರ ಕೀರ್ತನೆಗಳ ಒಂದು ವಿಶಿಷ್ಟ ಅಲಂಕಾರ.

ದಾಸಸಾಹಿತ್ಯವಾಹಿನಿಗೆ ನರಹರಿತೀರ್ಥರು ಉಗಮಸ್ಥಾನ ಮಾತ್ರ. ಆ ವಾಹಿನಿಯ ನಿಜಸ್ವರೂಪವು ಅದರ ಆಳವೈಶಾಲ್ಯಗಳು ಕಂಗೊಳಿಸುವದು ಶ್ರೀಪಾದರಾಯರಲ್ಲಿ. ಶ್ರೀಪಾದರಾಯರು ಸುಮಾರು 200 ವರ್ಷಗಳ ನಂತರ ಆಗಿಹೋದರು. ಈ 200 ವರ್ಷಗಳ ಅವಧಿ ದಾಸಸಾಹಿತ್ಯದ ಗುಪ್ತವಾಹಿನಿಯ ಕಾಲ ಎಂದರೂ ಈ ಕಾಲಕ್ಕೆ ತನ್ನ ಅಭಿನವ ದಶಕುಮಾರಚರಿತವನ್ನು ಪಂಢರಪುರದ ವಿಠ್ಠಲನ ಭಕ್ತನಾದ ಚೌಂಡರಸನು ರಚಿಸಿರುವುದನ್ನು ಇಲ್ಲಿ ನೆನೆದರೆ ಈ ಭಕ್ತಿಕಾವ್ಯವು ಈಗಿನ ಗುಪ್ತವಾಹಿನಿಯ ಒಂದು ಪ್ರಕಟವಾಹಿನಿ ಎನ್ನಲು ಅಡ್ಡಿ ಇಲ್ಲ. ಚೌಂಡರಸನ ಕಾಲವು ಕ್ರಿ. ಶ. 1225. ತನ್ನನ್ನು ಕವಿ 'ಪ್ರಸನ್ನ ಶ್ರೀ ಮದಭಂಗ ವಿಠ್ಠಲ ಪದಾಂಭೋಜ ಮತ್ತಮಧುಕರ' ಎಂದುಕೊಂಡಿದ್ದಾನೆ. ದಶಕುಮಾರಚರಿತೆಯ 14ನೇ ಆಶ್ವಾಸದಲ್ಲಿ ವಿಠ್ಠಲ ಸ್ತೋತ್ರವನ್ನು ಮಾಡಿದ್ದಾನೆ. ಚೌಂಡರಸನ ಕಾವ್ಯದಲ್ಲಿ ವೈಷ್ಣವ ಭಕ್ತಿಯು ಉತ್ಕಟವಾಗಿ ಪ್ರವಹಿಸಿದೆ. ಕೃಷ್ಣ ಭಕ್ತಿಯನ್ನು ಕುಮಾರವ್ಯಾಸನು ದಶಪರ್ವಗಳ ಉದ್ದಕ್ಕೂ ಸಾಲುಸಾಲಿಗೆ ಸೂಸಾಡಿದ್ದಾನೆ. ಈತನ ಕಾವ್ಯವು ಮುಂದಿನ ದಾಸರಿಗೆ ಭಕ್ತಿ, ಸ್ಫೂರ್ತಿಗಳ ಆಗರವೆನಿಸಿದ್ದಿರಬೇಕು.

ಅಂತೂ ಶ್ರೀಪಾದರಾಯರಿಂದ ದಾಸಸಾಹಿತ್ಯಕ್ಕೆ ಒಂದು ನೆಲೆ ದೊರಕುತ್ತದೆ.

## ಶ್ರೀಪಾದರಾಯರು

ಇವರು ಸುಮಾರು 98 ವರ್ಷಕಾಲ ಜೀವಿಸಿದ್ದರೆಂದು ತಿಳಿಯುತ್ತದೆ

(ಕ್ರಿ. ಶ. 1404 ರಿಂದ 1502) ಇವರು ಚೆನ್ನಪಟ್ಟಣದ ಅಬ್ಬೂರಿನಲ್ಲಿ ಜನಿಸಿ, ಬಾಲ್ಯವನ್ನು ಕಳೆದು ಶ್ರೀರಂಗಕ್ಷೇತ್ರದಲ್ಲಿ ಸ್ವರ್ಣವರ್ಣ ತೀರ್ಥರಿಂದ ಸಂನ್ಯಾಸ ವನ್ನು ಸ್ವೀಕರಿಸಿ ಹಲವು ಕಾಲ ಅಲ್ಲಿದ್ದು ಆ ಮಠದ ಅಧಿಕಾರವನ್ನು ವಹಿಸಿಕೊಂಡ ಬಳಿಕ ಮುಳಬಾಗಿಲಿಗೆ ಬಂದು ಅಲ್ಲಿ ಕಡೆವರೆಗೂ ನೆಲೆಯಾಗಿ ನಿಂತರು.* (ಇವರು ತಮ್ಮ ಬಾಲ್ಯದಲ್ಲಿ ಸ್ವರ್ಣವರ್ಣತೀರ್ಥರ ಕೃಪಾಕಟಾಕ್ಷಕ್ಕೆ ಹೇಗೆ ಗುರಿಯಾದರು ಎಂಬ ಸಂಗತಿಯನ್ನು ಶ್ರೀ ಬೇಲೂರ ಕೇಸವದಾಸರು ತಮ್ಮ 'ಕರ್ಣಾಟಕ ಭಕ್ತವಿಜಯ' ದಲ್ಲಿ ಮನೋರಂಜಕವಾಗಿ ವರ್ಣಿಸಿದ್ದಾರೆ) ದೈವಸಂಕಲ್ಪವಿದ್ದರೆ ಸ್ವರ್ಣವರ್ಣತೀರ್ಥರಿಗೆ ಬಾಲಯತಿಯಾಗಿ ದೊರಕಬಹುದೆಂಬ ಆಸೆಯನ್ನು ವ್ಯಕ್ತಪಡಿಸಿದರು. ಮುಂದೆ ಲಕ್ಷ್ಮೀನಾರಾಯಣನ ತಂದೆ ತಾಯಿಯರ ಮನವೊಲಿಸಿ ಬಾಲಕನನ್ನು ತಮ್ಮವನನ್ನಾಗಿ ಮಾಡಿಕೊಂಡರು, ಬಡ ತಂದೆ ತಾಯಿಗಳಿಗೆ ಮಠ ದಲ್ಲಿಯೆ ಆಶ್ರಯ ನೀಡಿದರು.

ಲಕ್ಷ್ಮೀನಾರಾಯಣನು ಮಾತಾಪಿತೃಗಳೊಂದಿಗೆ ಶ್ರೀರಂಗವನ್ನು ಸೇರಿದನು. ಬಾಲಕನಿಗೆ ಬ್ರಹ್ಮೋಪದೇಶವಾಯಿತು. ವಿದ್ಯಾವ್ಯಾಸಂಗವಾಯಿತು. ಶ್ರೀಪಾದಂಗಳ ಉತ್ತರಾಧಿಕಾರಿಯಾಗಿ ಸನ್ಯಾಸದೀಕ್ಷೆಯೂ ದೊರಕಿತು. ದ್ವೈತ ಸಿದ್ಧಾಂತದ ಅಧ್ಯಯನವು ನಡಯಿತು. ಬಾಲಯತಿಯ ಈ ಅಪಾರವಿದ್ವತ್ತನ್ನು ಕಂಡ ಉತ್ತರಾಧಿ ಮಠದ ಶ್ರೀಗಳವರಾದ ಶ್ರೀ ರಘುನಾಥತೀರ್ಥರು ಶ್ರೀಪಾದರಾಜ ಎಂದು ಅಭಿಧಾನ ವನ್ನು ನೀಡಿ ಆಶೀರ್ವದಿಸಿದರು. ಲಕ್ಷ್ಮೀನಾರಾಯಣತೀರ್ಥರ ಜೀವನದಲ್ಲಿ ಇದೊಂದು ಅವಿಸ್ಮರಣೀಯವಾದ ಸುವರ್ಣಯೋಗ.

ಕಾಲಕ್ರಮೇಣ ಸ್ವರ್ಣವರ್ಣತೀರ್ಥರು ವೃಂದಾವನಸ್ಥರಾಗಲು ಶ್ರೀಪಾದ ರಾಜರು ಸಂಸ್ಥಾನದ ಅಧಿಕಾರವನ್ನು ವಹಿಸಿಕೊಂಡರು. ಮುಂದೆ ತಮ್ಮ ಮಠ ವನ್ನು ಶ್ರೀರಂಗದಿಂದ ಮೂಡಣ ಬಾಗಿಲಿನಂತಿದ್ದ ಮುಳಬಾಗಿಲಿಗೆ ಸ್ಥಾನಾಂತರಿಸಿ ದರು.

ಅಬ್ಬೂರಿನ ಬ್ರಹ್ಮಣ್ಯತೀರ್ಥರು ವೃಂದಾವನಸ್ಥರಾಗಲು ಅವರಿಂದ ಮೊದಲೆ ದೀಕ್ಷೆ ಪಡೆದಿದ್ದ ವ್ಯಾಸತೀರ್ಥರು ಮಠದ ಆಧಿಪತ್ಯವನ್ನು ನಿರ್ವಹಿಸಿಕೊಂಡಮೇಲೆ ಮುಳುಬಾಗಿಲಿಗೆ ಬಂದು ಶ್ರೀಪಾದರಾಜರ ಶಿಷ್ಯತ್ವವನ್ನು ವಹಿಸಿ ಅವರ ಅಡಿಯಲ್ಲಿ ವ್ಯಾಸಂಗ ಕೈಗೊಂಡರು. ಈ ಗುರುಶಿಷ್ಯ ಬಾಂಧವ್ಯವು ಅಪ್ರತಿಮವಾದದ್ದು ಶ್ರೀ ವ್ಯಾಸರಾಯರು ತಮ್ಮ ಗುರು ಶ್ರೀ ಪಾದರಾಜರ ವಿದ್ಯಾ ಪ್ರೌಢಿಮೆಯನ್ನು ಕುರಿತು ಹಾಡಿದ್ದಾರೆ.

---

* ಶ್ರೀಪಾದರಾಯರ ಕೃತಿಗಳು ಪುಟ. xii. ಡಾ॥ಶ. ವಾದರಾಜರಾವ್

ವಾದಿಗಜ ಮಸ್ತಕಾಂಕುಶ ಸುಜನ ಬುಧಗೇಯ
ಮೇದಿನೀಸುರವಂದ್ಯ ಶ್ರೀಪಾದರಾಯ
ಸಕಲಶಾಸ್ತ್ರಕಲಾಪ ಸಂನ್ಯಾಸಕುಲದೀಪ
ಸಕಲಸತ್ಯಸ್ಥಾಪ ಸುಜ್ಞಾನದೀಪ
ಪ್ರಕಟಪಾವನರೂಪ ಅರಿಕುಜನಮತಲೋಪ
ನಿಕಟವರ್ಜಿತಪಾಪ ಕೀರ್ತಿಪ್ರತಾಪ
ಹರಿಪದಾಂಭುಜಬ್ಭೃಂಗ ಪರಮತಾಹಿವಿಹಂಗ
ಪರಮಸುಗುಣಾಂತರಂಗ ಭವದುರಿತಭಂಗ
ಶರಣಕೀರ್ತಿತರಂಗ ಶತ್ರುತಿಮಿರಪತಂಗ
ಶರಣುಶುಭಚರಿತಾಂಗ ಷಟ್ಶಾಸ್ತ್ರಸಂಗ

ಸಿರಿಕೃಷ್ಣದಿವ್ಯಪಾದಾಬ್ಜ ಚಿಂತಾಲೋಲ
ವರಹೇಮವರ್ಣ ಮುನಿಪತಿಯ ಸುಕುಮಾರ
ಗುರುತಿಲಕ ಶ್ರೀಪಾದರಾಯ ಅಮಿತೋದ್ಧಾರ
ಶರಣಜನಸುರಧೇನು ಭಕ್ತಮಂದಾರ

ಶ್ರೀಪಾದರಾಜರು 'ಶತ್ರುತಿಮಿರಪತಂಗ' ಎಂದೂ 'ಷಟ್ಶಾಸ್ತ್ರಸಂಗ' ರೆಂದೂ ವರ್ಣಿಸುತ್ತಿದ್ದಾರೆ.

ಶ್ರೀಪಾದರಾಜರು ಸಮಕಾಲೀನ ಜನಸಾಮಾನ್ಯರ ಬುದ್ಧಿಮಟ್ಟವನ್ನು ನೋಡಿ ಅವರಲ್ಲಿ ಭಗವದ್ಭಕ್ತಿಯು ನೆಲೆಗೊಳ್ಳಬೇಕಾದರೆ ಗೀರ್ವಾಣ ಪಂಡಿತರ ಪಾಂಡಿತ್ಯ ಪ್ರದರ್ಶನವು ಸಹಾಯ ಮಾಡಲಾರದು, ಭಾಗವತ ಧರ್ಮದ ಪ್ರಚಾರವನ್ನು ಮಾಡುವುದರ ಸಲುವಾಗಿ ಕನ್ನಡದಲ್ಲಿಯೆ ಹರಿಕೀರ್ತನೆಗಳನ್ನು ರಚಿಸಿ ಭಾಗವತರಿಂದ ಹಾಡಿಸಬೇಕು ಎಂದು ಸಂಕಲ್ಪಿಸಿದರು. ವಾಕ್ಯಾರ್ಥ ಮಾಡಿ ವಾದಿನಿಗ್ರಹಮಾಡು ವುದರಿಂದ ಪಾಮರ ಸಮಾಜದ ಬುದ್ಧಿವಿಕಾಸ ಹೇಗಾಗಬೇಕು ? ಅವರಲ್ಲಿ ಭಕ್ತಿ ಹೇಗೆ ಉದ್ದೀಪನಗೊಳ್ಳಬೇಕು ? ಎಂದು ಚಿಂತಿಸಿ ಕನ್ನಡ ಕೀರ್ತನೆಗಳನ್ನು ರಚಿಸಲು ಯಶಸ್ವಿಯಾದ ಪ್ರಯತ್ನಮಾಡಿ ಸಫಲತೆ ಪಡೆದರು. ಇದರಿಂದ ಕನ್ನಡ ನಾಡಿನ ಸಂಸ್ಕೃತಿಯೂ ಬೆಳೆಯಲಿಕ್ಕೆ ಅವಕಾಶವಾಯಿತು. ಕೀರ್ತನೆಗಳ ಜೊತೆಗೆ ಕನ್ನಡ ದಲ್ಲಿಯೆ ಧರ್ಮಗ್ರಂಥಗಳನ್ನು ಪರಿವರ್ತನ ಮಾಡಿ ಪಾಮರರಿಗೆ ಜ್ಞಾನೋಪದೇಶ ವನ್ನು ನೀಡಬೇಕೆಂದು ಅಭಿಲಾಷೆ ಪಟ್ಟರು. ಅದಕ್ಕಾಗಿಯೆ ಭಾಗವತರ ಪಂಥ ವನ್ನೇರ್ಪಡಿಸಿದರು. ಪೂಜಾಕಾಲದಲ್ಲಿ ವೈದಿಕ ಪಂಡಿತರಿಂದ ವೇದಪಾರಾಯಣ ಮಾಡಿಸುವಂತೆ ಭಾಗವತರ ಮುಖದಿಂದ ಕನ್ನಡ ದೇವರ ನಾಮಗಳನ್ನು ಹಾಡಿಸಿದರು

ಅದುವರೆಗೆ ಯಾವ ಮಠದಲ್ಲೂ ಪ್ರಾಕೃತ ಪದಗಳನ್ನು ಪೂಜಾಕಾಲದಲ್ಲಿ ಹಾಡಿಸುವ ಸಂಪ್ರದಾಯವಿರಲಿಲ್ಲ. ಕನ್ನಡ ಮಾತನ್ನಾಡಿದರೇ ಮೈಲಿಗೆ ಎಂದು ತಿಳಿಯುವವರ ಕಾಲ. ಕನ್ನಡದ ಹಾಡಲ್ಲಿ ಬರಬೇಕು ? (ಶ್ರೀ ಕರ್ಣಾಟಕ ಭಕ್ತ ವಿಜಯ, ಪುಟ-24) ಶ್ರೀಪಾದರಾಜರು ಒಂದು ಕ್ರಾಂತಿಯನ್ನೆ ಎಸಗಿದರು. ತಿಳಿಗನ್ನಡ ಭಾಷೆಯಲ್ಲಿ ಕನ್ನಡ ದೇವರನಾಮಗಳನ್ನು ರಚಿಸಿ ತಮ್ಮ ಪೂಜಾ ಕಾಲದಲ್ಲಿ ಭಾಗವತರಿಂದ ಹಾಡಿಸಲು ಉಪಕ್ರಮಿಸಿದರು. ಪರಂಪರಾಬದ್ಧ ಇತರ ಮಠದ ಸ್ವಾಮಿಗಳಿಗೆ ಈ ಬಗೆಯ ಸುಧಾರಣೆಯು ಅಪಥ್ಯವೆನಿಸಿರಬೇಕು. ವಿರೋಧಗಳೂ ಬಂದಿರಬೇಕು. ಆದರೆ ಪಾಮರಜನತಾಕೋಟಿ ಭಕ್ತಿರಸನಿರ್ಭರವಾದ ಅವರ 'ಭ್ರಮರಗೀತೆ', 'ವೇಣು ಗೀತೆ', 'ಗೋಪಿಗೀತೆ' ಗಳನ್ನು ಕೇಳಿ ನಲಿದಾಡಿ ಸಂತೋಷಿಸಿದಾಗ ಶ್ರೀಪಾದರಾಜರಿಗೆ ತಮ್ಮ ಸಾಹಸವು ಸಫಲವೆನಿಸಿತು. ಇದರಿಂದ ಉತ್ತೇಜಿತರಾಗಿ ಅವರು ಸ್ವತಃ ರಾತ್ರಿಯ ಮಂಗಳಾರತಿಯ ಕಾಲದಲ್ಲಿ ದೇವರೆದುರಿಗೆ ಭಾಗವತಸೇವೆಗೆ ನಿಲ್ಲುತ್ತಿದ್ದರಂತೆ, ಭಾಗವತರು ನರ್ತನ ಮಾಡುತ್ತಿದ್ದರಂತೆ. ಈ ದಿವ್ಯ ನೋಟಕ್ಕೆ ನೆರೆದ ಸಾವಿರಾರು ಜನ ಮುಗ್ಧರಾಗಿ ಹೋಗುತ್ತಿದ್ದರಂತೆ. ಹೀಗ ಶ್ರೀಪಾದರಾಜರಿಂದ ಕನ್ನಡ ಹರಿದಾಸ ಕೀರ್ತನೆಯ ಹೊಸತವನ ಚೈತ್ರವು ಉದಯಿಸಿತು.

ಶ್ರೀಪಾದರಾಜರು ಚಂದ್ರಗಿರಿಯನ್ನಾಳುತ್ತಿದ್ದ ಸಾಳುವ ನರಸಿಂಹರಾಜನನ್ನು (ಸುಮಾರು 1470) ಬ್ರಹ್ಮಹತ್ಯಾದೋಷದಿಂದ ಮುಕ್ತರಾಗುವಂತೆ ಆತನಿಂದ ಶಾಂತಿ ಕರ್ಮಗಳನ್ನು ಮಾಡಿಸಿದರು. ಇದರಿಂದ ಪಾಪಮುಕ್ತನಾದ ರಾಜನು ಶ್ರೀಪಾದ ರಾಯರನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಕನಕಾಭಿಷೇಕ ಮಾಡಿಸಿದನಂತೆ. ವ್ಯಾಸ ರಾಯರು ರಚಿಸಿರುವ 'ಶ್ರೀಪಾದರಾಜಾಷ್ಟಕ' ಎಂಬ ಸ್ತೋತ್ರದಲ್ಲಿ ಇದರ ಪ್ರಸಕ್ತಿ ಬರುತ್ತದೆ.

ಸಂತುಷ್ಟನಾದ ಸಾಳುವ ರಾಜನು ಶ್ರೀಪಾದರಾಜರ ಕಾಶೀ ಯಾತ್ರೆಗೆ ಅನುಕೂಲ ಮಾಡಿಕೊಟ್ಟನು. ಸ್ವಾಮಿಗಳೊಂದಿಗೆ ನೂರಾರು ಜನ ವಿದ್ವಜ್ಜನರೂ, ಪರಿವಾರ ದವರೂ ಓಂಬಾಲಿಸಿದರು. ಕಾಶೀ ಪಟ್ಟಣದ ವಿದ್ವತ್ಸಭೆಗಳೆಂದರೆ ಕೇವಲ ಪಾಂಡಿತ್ಯ ಪ್ರದರ್ಶನ. ಇಂಥಲ್ಲಿಯೂ ಶ್ರೀಪಾದರಾಜರು ತರ್ಕವಾಕ್ಯಾರ್ಥಗಳಿಗೆ ಮಹತ್ವ ಕೊಡದೆ ಭಕ್ತಿಪೂರ್ವಕವಾದ ಭಾಗವತ ಧರ್ಮವನ್ನೇ ಬೋಧಿಸಿದರು. ತರ್ಕ ವ್ಯಾಕರಣ ಗಳು ಇವರಿಗೆ ಮಾನ್ಯವಿಲ್ಲವೆಂದು ಕಾಶಿಯ ವಿದ್ವಜ್ಜನರಲ್ಲಿ ಗುಲ್ಲೆದ್ದಿತು. ವೇದಾಂತ ಪ್ರತಿಪಾದನೆಯಲ್ಲಿ ತರ್ಕ, ವ್ಯಾಕರಣಗಳಿಗೆ ಅವಕಾಶವಿಲ್ಲವೆಂದು ಶ್ರೀಪಾದರಾಯರು ವಾದಿಸಿದರು. ಪ್ರತ್ಯೇಕವಾಗಿ ಏರ್ಪಟ್ಟ ವಿದ್ವತ್ಸಭೆಯೊಂದಕ್ಕೆ ಕಾಶಿ ರಾಜನೆ ಅಧ್ಯಕ್ಷ ನಾಗಿ ಸಭೆಯನ್ನು ನಡೆಸಿದ. ಸ್ವಾಮಿಗಳ ಹೃದಯವನ್ನು ಕರಗಿಸುವಂತಹ ವರ್ಚಸ್ವಿ ವಿವೇಚನೆಯಿಂದ ವಾದಮಾಡಿ ಶ್ರೀಪಾದರಾಜರು ಜಯಶಾಲಿಗಳಾದರು.

ತಮ್ಮ ವಿಜಯಯಾತ್ರೆಯನ್ನು ಮುಗಿಸಿ ಮುಳುಬಾಗಿಲಿಗೆ ಹಿಂತಿರುಗಿದ ಸ್ವಾಮಿಗಳು ಸಾಕಷ್ಟು ಕಾಲ ಕೀರ್ತನೆಗಳ ರಚನೆಗಳಲ್ಲಿ ತೊಡಗಿರಬೇಕು. ವ್ಯಾಸರಾಯರ ಶ್ರೀಪಾದರಾಜರ ಸಂಬಂಧವು ಒಂದು ರಸಮಯವಾದ ರೀತಿಯಲ್ಲಿ ಇಲ್ಲಿ ಬೆಳೆದು ಬಂತು. ಗುರುಗಳೆಂದು ಸಂಪೂರ್ಣ ನಂಬಿ ಬಂದಿದ್ದ ವ್ಯಾಸರ ಶಿಷ್ಯತ್ವವನ್ನು ಅಂಗೀಕರಿಸಿದ ಗುರು ಶ್ರೀಪಾದರಾಜರು ವ್ಯಾಸರಾಯರ ಮೇಲೆ ಅತೀವ ವ್ಯಾತ್ಸಲ್ಯವನ್ನು ತೋರಿದರು. ಒಂದು ಸಂದರ್ಭದಲ್ಲಿ ಸಂಸ್ಥಾನದ ಪೂಜಾ ಕಾರ್ಯವನ್ನು ಗುರುಗಳ ಅನುಜ್ಞೆಯ ಮೇರೆಗೆ ವ್ಯಾಸರಾಯರು ಕೈಕೊಂಡರು. ಪಂಢರಪುರದ ಭೀಮಾ ತೀರದಲ್ಲಿ ಶ್ರೀಪಾದರಾಜರಿಗೆ ದೊರೆತಿದ್ದ ಎರಡು ದೇವತಾ ಸಂಪುಟಗಳಲ್ಲಿ ಒಂದು ರಂಗವಿಠ್ಠಲ, ಇನ್ನೊಂದು ವೇಣುಗೋಪಾಲ ಮೂರ್ತಿಗಳಿದ್ದವು. ರಂಗವಿಠ್ಠಲನ ಅನುಗ್ರಹವನ್ನು ಪಡೆದಿದ್ದ ಶ್ರೀಪಾದರಾಜರು ವೇಣುಗೋಪಾಲನ ಸಂಪುಟವನ್ನು ಉದ್ಘಾಟಿಸಿರಲಿಲ್ಲ. ವ್ಯಾಸರಾಯರು ತಮ್ಮ ಪೂಜಾ ಕಾರ್ಯದಲ್ಲಿ ವೇಣುಗೋಪಾಲನ ಸಂಪುಟವನ್ನು ತೆರೆದಾಗ ಸಂಪುಟದ ಮೂರ್ತಿಯು ಸಾಕ್ಷಾತ್ಕಾರವಾಗಿ ವೇಣುಗೋಪಾಲನೆ ನಿಂತುಬಿಟ್ಟಿದ್ದನು. ವ್ಯಾಸರಾಯರು ಭಕ್ತಿಯ ಆವೇಶದಲ್ಲಿ, ಮೈಮರೆತು ಅಲ್ಲಿದ್ದ ಶಾಲಗ್ರಾಮಗಳನ್ನೆ ತಾಳದಂತೆ ಬಾರಿಸುತ್ತ ಕುಣಿಯುತೊಡಗಿದರು. ಇದನ್ನು ಕೂಡ ಶ್ರೀಪಾದರಾಜರು ಅತ್ಯಂತ ಸಂತುಷ್ಟರಾಗಿ ಶಿಷ್ಯನ ಮಹಿಮೆಯನ್ನು ಕೊಂಡಾಡಿದರು. ತಮಗೆ ರಂಗವಿಠ್ಠಲನು ಮಾತ್ರ ಪ್ರಸನ್ನನಾಗಿದ್ದನೆಂದು ತಮ್ಮ ಶಿಷ್ಯನಿಗೆ ವೇಣುಗೋಪಾಲರು ಪ್ರಸನ್ನನಾದನೆಂದು ಉದ್ಗಾರ ತೆಗೆದರು. ಈ ಸಂದರ್ಭವನ್ನು ಶ್ರೀಪಾದರಾಯರು ಒಂದು ಉಗಾಭೋಗದಲ್ಲಿ ಧ್ವನಿಸಿದ್ದಾರೆ.

ಪಾಲಿಸಯ್ಯ ಸ್ವಾಮಿ ಕೃಷ್ಣ ಪಾಲಿಸಯ್ಯ ಎನ್ನ ನೀನು
ಪಾಲಿಸಯ್ಯ ಭಾಗ್ಯವಿತ್ತು ಭಕ್ತವತ್ಸಲ
ನಿತ್ಯಾಪೂರ್ಣ ಮಂಗಳವಿತ್ತು ನಿತ್ಯದಿ ಕಲ್ಯಾಣವಿತ್ತು
ನಿತ್ಯ ಸಲಹೊ ವ್ಯಾಸಮುನಿವಂದ್ಯ ಗೋಪಿನಾಥನೆ
ತುರುಬಿನ ಮ್ಯಾಲೆ ತುರುಬಿದ ಮೊಲ್ಲೆ ಮಲ್ಲಿಗೆ ಕುಸುಮಗಳ ರಂಗಾ
ಕೊರಳಲ್ಲಿ ಕಂಠೀಸರ ವನಮಾಲೆ ವರಕಲ್ಪತರುವನೆನ್ನೀ ರಂಗಾ (?)
ಕರದಲ್ಲಿ ವೇಣು ಬೆರಳಲ್ಲಿ ಮೀಟುತ ಮರಿದುಂಬಿ ಝೇಂಕಾರ ರಂಗಾ

ಶ್ರೀಪಾದರಾಯರು ತಮ್ಮ ಕೀರ್ತನೆಗಳ ಕೊನೆಗೆ ಶ್ರೀರಂಗವಿಠ್ಠಲ ಎಂಬ ಅಂಕಿತವನ್ನು ಇಟ್ಟುಕೊಂಡಿದ್ದಾರೆ. (ಇದರಲ್ಲಿ ಶ್ರೀರಂಗದ ಸಂಬಂಧದೊಡನೆ ಪಂಢರಪುರದ ವಿಠ್ಠಲನ ಸಂಬಂಧದ ಸೂಚನೆ ಇದೆ.) ಶ್ರೀಪಾದರಾಯರು ಉಭಯ ಭಾಷಾವಿಶಾರದರು. ಸಂಸ್ಕೃತದಲ್ಲಿ ರಚಿಸಿದ 'ವಾಗ್ವಜ್ರ' ಎಂಬ ಗ್ರಂಥವು ಇವರ

ಸಂಸ್ಕೃತ ಭಾಷಾ ಪ್ರಭುತ್ವಕ್ಕೆ ನಿದರ್ಶನ ಗ್ರಂಥ. ಟೀಕಾರಾಯರ ಸುಧಾ ಗ್ರಂಥದಲ್ಲಿ ಅಡಕವಾಗಿದ್ದ ಸಿದ್ಧಾಂತವನ್ನು ಅವಲಂಬಿಸಿ ಇದನ್ನು ಬರೆದುದಾಗಿ ತಿಳಿಯುತ್ತದೆ. ಇದು 3500 ಶ್ಲೋಕಗಳುಳ್ಳ ಸುಸ್ಪಷ್ಟ ಚಿತ್ತಾಕರ್ಷಕ ವ್ಯಾಖ್ಯಾನ ಗ್ರಂಥ. ವಿಚಾರ ಪ್ರತಿಪಾದನೆ ಪರಿಪೂರ್ಣವಾಗಿದೆ. ಶೈಲಿ ಮನೋಹರವಾಗಿದೆ."[1]

ಶ್ರೀಪಾದರಾಯರು ದಾಸಸಾಹಿತ್ಯದ ಬಾಹ್ಯಾಂತರ ಸ್ವರೂಪಗಳಿಗೆ ತಮ್ಮದೇ ಆದ ಒಂದು ಶೈಲಿಯನ್ನೂ, ಛಂದೋರೂಪವನ್ನೂ ಕೊಟ್ಟರು. ಕೀರ್ತನೆಗಳ ಒಕ್ಕಣೆಯೂ ಕೂಡ ಶ್ರೀಪಾದರಾಯರಿಂದಲೆ ಒಂದು ರೂಪವನ್ನು ತಾಳಿತು ಎನ್ನಬಹುದು. ಅವರ ಕೀರ್ತನೆಗಳೆಲ್ಲವೂ ಅಂತರಂಗ ಭಾವಗೀತಗಳಿದ್ದಂತೆ. ಭಕ್ತನು ಭವಸಾಗರದಲ್ಲಿ ತೊಳಲಾಡಿ ಭಗವಂತನ ಅಡಿಗಳಲ್ಲಿ ಮೊರೆ ಹೊಕ್ಕು ಆತನ ಕರುಣೆಗಾಗಿ ಹಂಬಲಿಸಿ ಮೊರೆಯಿಡುತ್ತಾನೆ. ಈ ಹಂಬಲ, ಹಾರೈಕೆಗಳನ್ನು ನಾನಾ ರೀತಿಯ ಕರುಣೆ, ಕನಿಕರದ ಮಾತುಗಳಲ್ಲಿ ಅಭಿವ್ಯಕ್ತಪಡಿಸುತ್ತಾನೆ. ಸಖ್ಯಭಾವದಿಂದ, ವ್ಯಾಜದಿಂದ, ದಾಸ್ಯಭಾವದಿಂದ ಭಗವಂತನ ಕೃಪೆಯನ್ನು ಕೋರುತ್ತಾನೆ. ತಾನು ಜೀವನದಲ್ಲಿ ಅನಂತ ಅಪರಾಧಗಳನ್ನು ಎಸಗಿದ್ದೇನೆ ಎಂಬ ಅರಿವು ಭಕ್ತನಿಗೆ ಇದೆ. ಪಶ್ಚಾತ್ತಾಪದಿಂದ ಪೂರ್ವಕೃತ ಪಾಪಕರ್ಮಗಳಿಂದ ಪರಿಮಾರ್ಜನೆ ಹೊಂದಬೇಕೆಂದು ಬಯಸಿ ಭಗವಂತನಲ್ಲಿ ಪ್ರಾರ್ಥಿಸುತ್ತಾನೆ. ಆತನ ಆತ್ಮಶೋಧ, ಆತ್ಮನಿವೇದನಗಳು ಭಕ್ತಿಯ ಗೀತೆಗಳಲ್ಲಿ ಸುಳಾದಿಗಳಾಗಿಯೊ, ಉಗಾಭೋಗಗಳಾಗಿಯೊ, ಕೀರ್ತನೆಗಳಾಗಿಯೊ ಹೊರಹೊಮ್ಮಿವೆ.

ಅನಂತ ಕಾಲದಲ್ಲಿ ನಿನ್ನ ನಾನರಿಯದೆ ಭವಗಳಲ್ಲಿ ಬಂದೆನೊ
ಅನಂತ ಕಾಲದಲ್ಲಿ ನಿನ್ನವನೆನಿಸದೆ ಮೂರುಖನಾದೆನೊ
ಅನಂತ ಕಾಲದಲ್ಲಿ ನಿನ್ನ ಚರಣರತಿಯಿಲ್ಲದೆ ನೊಂದೆನೊ
ಅನಂತ ಕಾಲದಲ್ಲಿ ಅದಾವ ಪುಣ್ಯದಿಂದ ಬಂದು ಇಂದು
ನಿನ್ನವನೆನಿಸಿದೆ ಅದಾವ ಪುಣ್ಯದಿಂದಲೆನ್ನ ಮನ
ನಿನ್ನಲ್ಲೆರಗಿತೊ ನೋಯದಂತೆ
ಎನ್ನ ಪೊರೆದು ಪಾಲಿಸೊ ದೀನನಾಥ ಶ್ರೀರಂಗವಿಠಲ

ಭಕ್ತನು ಭಗವಂತನ ಅಡಿದಾವರೆಗಳಲ್ಲಿ ಸರ್ವಸಮರ್ಪಣೆ ಮಾಡಿದ ಮೇಲೆ ಆತನಿಗೆ ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಕೊಟ್ಟು ಕರುಣಿಸಬೇಕಾದವನು ರಂಗ

---

1. ಶ್ರೀಪಾದರಾಜರ ಕೃತಿಗಳು ಪುಟ–13

ವಿಠ್ಠಲನೇ. ಅಂತೆಯೇ ತನಗೆ ಸಾಧನ ಮಾರ್ಗದಲ್ಲಿ ಪರಮಾತ್ಮನು ಯೋಗ್ಯಬುದ್ಧಿಯನ್ನು ಕೊಡದಿದ್ದರೆ ತಾನು ನಡೆದುಕೊಳ್ಳುವುದು ಹೇಗೆ? ಪರಮಾತ್ಮನ ಪಾದ ಕಮಲಗಳನ್ನು ನಂಬಿ ಭಜಿಸುವುದಾದರೂ ಹೇಗೆ?

ಇದನಾದರು ಕೊಡದಿದ್ದರೆ ನಿನ್ನ
ಪದಕಮಲವ ನಂಬಿ ಭಜಿಸುವದೆಂತೊ ॥

ಗ್ರಾಸವಾಸಗಳಿಗೆ ಇಲ್ಲವೆಂದು ನಿನ್ನ
ಬೇಸರಿಸಿ ಬೇಡಬಂದುದಿಲ್ಲ
ವಾಸುದೇವನೆ ನಿನ್ನ ದಾಸರ ದಾಸರ
ದಾಸರ ದಾಸ್ಯವ ಕೊಡು ಸಾಕೆಂದರೆ–

ಸತಿಸುತರುಗಳ ಸಹಿತನಾಗಿ ನಾ
ಹಿತದಿಂದ ಇರಬೇಕೆಂಬೊದಿಲ್ಲ
ಇತರ ವಿಷಯಂಗಳಿಗೆರಗಿಸದೆ ಮನಕೆ ನಿನ್ನ
ಕಥಾಮೃತವನೆ ಕೊಡು ಸಾಕೆಂದರೆ–

ಸಾಲವಾಯಿತೆಂದು ಸಂಬಳ ಎನಗೆ
ಸಾಲದೆಂದು ಬೇಡಬಂದುದಿಲ್ಲ
ನಾಲಗೆಯಲ್ಲಿ ನಿನ್ನ ನಾಮದುಚ್ಚರಣೆಯ
ಪಾಲಿಸಬೇಕೆಂದು ಬೇಡಿದೆನಲ್ಲದೆ–

ಒಡವೆಗಳಿಲ್ಲ ಒಡ್ಯಾಣಗಳಿಲ್ಲೆಂದು
ಬಡವನೆಂದು ಬೇಡಬಂದುದಿಲ್ಲ
ಒಡೆಯ ನಿನ್ನಡಿಗಳಿಗೆರಗುವುದಕೆ ಮನ
ಬಿಡದೆಹದೊಂದನು ಕೊಡು ಸಾಕೆಂದರೆ–

ಆಗಬೇಕು ರಾಜ್ಯಭೋಗಗಳೆನಗೆಂದು
ಈಗ ನಾನು ಬೇಡಬಂದುದಿಲ್ಲ
ನಾಗಶಯನ ರಂಗವಿಠಲ ನಾ ನಿನ್ನ
ಬಾಗಿಲ ಕಾಯುವ ಭಾಗ್ಯ ಸಾಕೆಂದರೆ–

ಪರಮಾತ್ಮನ ಸಾನ್ನಿಧ್ಯವನ್ನು ಬಯಸಿ ಆತನ ಕರುಣೆ ದೊರೆಯುದಿದ್ದರೆ ಸಂತಾಪಕ್ಕೆ

ಗುರಿಯಾಗಿ ಭಕ್ತನು ಪರಿಪರಿಯಿಂದ ತನ್ನನ್ನೆ ತಾನು ಶಪಿಸಿಕೊಳ್ಳುತ್ತಾನೆ. ಈ ಕ್ಷಣ ಪ್ರಾಣವನ್ನು ಕಳೆದುಕೊಂಡು ಬಿಡಬೇಕು ಎಂದು ಪರಿತಪಿಸುತ್ತಾನೆ. ಸಂಸಾರದ ಹೇಸಿಕೆಯಲ್ಲಿ ಇರುವುದು ಅಸಹ್ಯವಾಗಿ

ಉರಿಯೊಳಗೆ ಬಿದ್ದು ಶರೀರವನು ಕಳೆಯಲೊ
ಪರುವತವನೇರುರಳಲೋ ಕೃಷ್ಣ
ಗರಳ ಮಡುವನು ಧುಮುಕಿ ಉರಗಫಣ ತುಳಿಯಲೊ
ಎರಡೊಂದು ಶೂಲಕ್ಕುಯಲೊ ಕೃಷ್ಣ
ಕೊರಳಿಗ್ಗುಗ್ಗವ ಹಾಕಿ – ಮರವೇರಿ ಕರಬಿಡಲೊ
ಗರಗಸಕೆ ಶಿರ ಒಡ್ಡಲೆಕೃಷ್ಣಊ
ಕರುಣವಾರಿಧಿಯೆನ್ನ ಕರಪಿಡಿದು ಸಲಹದಿರೆ
ಧರೆಯೊಳುದ್ಧರಿಪರಾರೋ ಕೃಷ್ಣ

ಕರುಣೆಯೆಂದು ಮೊರೆಹೊಕ್ಕವನ ಮೇಲೆ ಕರುಣಾಕರನಾದ ವಿಠ್ಠಲನ ನಿಷ್ಕರುಣೆ ಯಾಗುವುದುಂಟೆ ? ಹಾಗಿದ್ದ ಮೇಲೆ ಆತನಿಗೆ ಕರುಣಾನಿಧಿ ಎಂಬ ಬಿರುದು ಯಾತಕ್ಕೆ ? ಈ ನಿಂದೆಯಲ್ಲಿಯೂ ನಾರಾಯಣನ ಸ್ತುತಿಯೆ ಇದೆ. ಹೀಗೆ ಭಕ್ತನ ಉದ್ಧಾರಕ್ಕೆ ಒದಗದ ವಿಠ್ಠಲನು ತನ್ನನ್ನು ಹುಟ್ಟಿಸಿದ್ದಾದರೂ ಯಾತಕ್ಕೆ ? "ಯಾಕೆ ಪುಟ್ಟಿಸಿದೆ ನೀ ಸಾಕಲಾರದೆ ಜಗದೇಕಕಾರಣ ಪುರುಷನೆ ಕೃಷ್ಣ" ಎಂದು ಆರ್ತನಾಗಿ ಆರ್ತಿಯಿಂದ ಮೊರೆಯಿಡುತ್ತಾನೆ. ಕೊನೆಗೆ ತನಗೆ ಸಾಧು ಯಾವುದು ? ಅಸಾಧು ಯಾವುದು ? ಎಂಬುದರ ಜ್ಞಾನವುಂಟಾಗಿ ಇಟ್ಹಾಂಗೆ ಇರುವೆನು ಎಂದು ಸಮಾಧಾನ ಪಡೆಯುತ್ತಾನೆ.

ಇಟ್ಹಾಂಗೆ ಇರುವೆನೋ ಹರಿಯೇ ಎನ್ನದೊರೆಯೇ
ಸೃಷ್ಟಿವಂದಿತ ಪಾದಪದುಮ ಶ್ರೀಹರಿಯೇ
ಸಣ್ಣ ಶಾಲ್ಯೋದನ ಬೆಣ್ಣೆ ಕಾಸಿದ ತುಪ್ಪ
ಚಿನ್ನದ ಹರಿವಾಣದಲಿ ಭೋಜನ
ಘನ್ನ ಮಹಿಮ ನಿನ್ನ ಕರುಣ ತಪ್ಪಿದಮ್ಯಾಲೆ ಕ
ದನ್ನ ಕಾಣದೆ ಬಾಯ್ಬಿಡಿಸುವಿ ಹರಿಯೇ

ಕೆಂಪಿಲಿ ಪೊಳೆವ ಪೀತಾಂಬರ ಉಡಿಸುವಿ
ಸೊಂಪಿನಂಚಿನ ಶಾಲು ಹೊದಿಸುವಿಯೋ
ಕಪಿಲಹರೇ ನಿನ್ನ ಕೃಪೆಯು ತಪ್ಪಿದ ಮ್ಯಾಲೆ
ಕಪರ್ದಕ ಕೌಪೀನವು ದೊರೆಯದೊ ಹರಿಯೇ

ಚಂದ್ರಶಾಲೆಲಿ ಚಂದ್ರಕಿರಣದಂತೊಪ್ಪುವ
ಚಂದದ ಮಂಚದೊಳ್ಮಲಗಿಸುವಿ
ಮಂದರೋದ್ಧರ ನಿನ್ನ ಮಮತೆ ತಪ್ಪಲ ಧುರ್ಮ
ಮಂದಿರದೊಳು ತೊಳ್ತಲೆಗಿಂಬು ಹರಿಯೇ

ನರಯಾನದೊಳು ಕ್ಷಣ ನರವರನೆನಿಸುವಿ
ವರಛತ್ರ ಚಾಮರ ಹಾಕಿಸುವಿ
ಕರುಣಾನಿಧೇ ನಿನ್ನ ಕರುಣ ತಪ್ಪಿದ ಮ್ಯಾಲೆ
ಚರಣರಕ್ಷೆಯು ದೊರೆಯದು ಶ್ರೀಹರಿಯೇ

ಗಂಗಾಜನಕ ಪಾಂಡುರಂಗ ನಿನ್ನಯ ಭಕ್ತರ
ಸಂಗವಿರಲಿ ದುಷ್ಟ ಸಂಗ ಬ್ಯಾಡ
ಅನಂಗನೆಯರ ಕೂಡಿ ಅನಂಗಬಾಣಕೆ ಸಿಲುಕಿ
ಭಂಗವ ಪಡಲಾರೆ ಶ್ರೀರಂಗವಿಠ್ಠಲ ಹರಿಯೇ

ಜೀವನದಲ್ಲಿ ಸಿರಿವಂತಿಕೆ, ಬಡತನ, ಮಾನ ಅವಮಾನ, ಮೇಲ್ಮೆಯ ಸ್ಥಾನ ಕೀಳ್ಮೆಯ ಸ್ಥಾನ, ಸೋಲು ಗೆಲವು, ಪ್ರಸಿದ್ಧಿ ಅಜ್ಞಾತತೆ ಇವು ಇದ್ದವೇ. ಇಂತಹ ದ್ವಂದ್ವಗಳಲ್ಲಿ ಮನುಷ್ಯನು ನಡುವಣ ಒಂದು ತೂಕ ಹಿಡಿದು ಇರಬೇಕಾಗುತ್ತದೆ. ಇದಕ್ಕೆ ಭಗವದ್ಗೀತೆಯಲ್ಲಿ ಸಮಭಾವ ಇಲ್ಲವೆ ಸಮತ್ವ ಎಂದು ಕರೆಯುತ್ತಾರೆ. 'ಸಮತ್ವಂ ಯೋಗ ಉಚ್ಯತೆ।' ಶ್ರೀಪಾದರಾಯರು ಮೇಲಿನ ಕೀರ್ತನೆಯಲ್ಲಿ ಸುಖ ದುಃಖ ಸಮನ್ವಯದ ಯೋಗ ಮಾರ್ಗವನ್ನು ಬಹು ಸರಳವಾದ ಮಾತಿನಲ್ಲಿ ಮಂಡಿಸಿದ್ದಾರೆ. 'ಇಟ್ಟಾಂಗೆ ಇರುವೆನೊ ಹರಿಯೇ ಎನ್ನ ದೊರೆಯೇ' ಎಂಬ ಮಾತಿನಲ್ಲಿ ಭಕ್ತಿಯ ಉತ್ಕಟತೆಯ ಜೊತೆಗೆ ಸಮಾಧಾನದ ನಿಲುವೂ ಇದೆ. ಹರಿಯ ಕೃಪೆ ಯೊಂದಿದ್ದರೆ ಸಾಕು ಭಕ್ತನಿಗೆ ಜೀವನದಲ್ಲಿ ಇನ್ನೇನೂ ಬೇಕಾಗಿಲ್ಲ. ಒಂದು ದಿನ ಪೀತಾಂಬರವನ್ನುಟ್ಟು ವೈಭವದಿಂದ ಮೆರೆದ ವ್ಯಕ್ತಿ ಶ್ರೀಹರಿಯ ಕೃಪೆಗೆ ಎರವಾಗಿ ಕಪರ್ದಕ ಕೌಪೀನವನ್ನು ಧರಿಸುವಂತಾಗಬಹುದು. ಇಂದು ಸಣ್ಣ ಶಾಲ್ಯೋದನ ಉಂಡ ಮೈಗೆ ನಾಳೆ ಕದನ್ನವನ್ನು ಜೀರ್ಣಿಸಿಕೊಳ್ಳುವ ಪ್ರಸಂಗ ಬರಬಹುದು. ಅದಕ್ಕಾಗಿ "ಪಾಂಡುರಂಗಾ ನಿನ್ನ ಭಕ್ತರ ಸಂಗವಿರಲಿ, ದುಷ್ಟರ ಸಂಗ ಬೇಡ" ಎಂದು ಪರಿಪರಿಯಿಂದ ಮೊರೆಯಿಟ್ಟಿದ್ದಾರೆ.

ಹರಿಭಕ್ತನಾದ ಮೇಲೆ ನಾಮಸ್ಮರಣೆ ಬೇಕು. ಪೂಜೆ ಪುರಸ್ಕಾರ ಬೇಕು.

ಧ್ಯಾನಬೇಕು, ಗ್ರಂಥಪಠನ ಬೇಕು. ಅವುಗಳ ತತ್ವಗಳ ಮನನ ಬೇಕು. ಇಂತಹ ಸದಾಚಾರವನ್ನು ತಪ್ಪಿಸಿಕೊಂಡ ಭಕ್ತನು ಪಶ್ಚಾತ್ತಾಪದಿಂದ ನೊಂದುಕೊಂಡು ನುಡಿಯುತ್ತಾನೆ :

ಹರಿನಾರಾಯಣನೆಂದು ಕರವೆತ್ತಿ ಮುಗಿದೊಮ್ಮೆ ಮೈ
ಮರೆದು ನಟಿಸಲಿಲ್ಲ ಕೃಷ್ಣ
ಹರಿಸ್ಮರಣೆ ಸ್ಮರಿಸಿ ಸಿತತುಳಸಿ ಪುಷ್ಪವನು
ಕರವೆತ್ತಿ ನೀಡಲಿಲ್ಲ ಕೃಷ್ಣ
ಸರ್ವಜ್ಞರಾಯರು ವಿರಚಿಸಿದ ಗ್ರಂಥವನು
ದರುಶನವೆ ಮಾಡಲಿಲ್ಲ ಕೃಷ್ಣ
ಸ್ಮರಿಸಲಾರದ ಪಾಪ ಸ್ಮರಣೆ ಪೂರ್ವಕ ಮಾಡಿ
ಸ್ಥಿರಭಾವನಾದೆನಲ್ಲೋ ಕೃಷ್ಣ

ಪಶ್ಚಾತ್ತಾಪಭಾವನೆ ಪ್ರಪತ್ತಿಯ ಮೊದಲ ಹೆಜ್ಜೆ. ಶ್ರೀಪಾದರಾಯರ ಭಕ್ತಿ ಮಾರ್ಗವು ನವವಿಧಗಳಲ್ಲಿ ಹಾಯ್ದು ಬಂದಿದೆ. ಇದರಲ್ಲಿ ಆತ್ಮನಿವೇದನೆಯ ದಾಸ್ಯ ಭಾವಕ್ಕೆ ಅಗ್ರಸ್ಥಾನವಿದೆ. ಅದುವೆ ದಾಸಕೂಟದ ಹೆಗ್ಗುರುತು. ಭಕ್ತಿಮಾರ್ಗದಿಂದ ಮುಕ್ತಿಯನ್ನು ಸಾಧಿಸಬೇಕೆನ್ನುವವನಿಗೆ ಏನೇನು ಬೇಕು ಎಂಬುದನ್ನು ಶ್ರೀಪಾದ ರಾಜರು 'ಭಕ್ತಿ ಬೇಕು, ವಿರಕ್ತಿ ಬೇಕು, ಸರ್ವ ಶಕ್ತಿ ಬೇಕು, ಮುಂದೆ ಮುಕ್ತಿಯ ಬಯಸುವಗೆ' ಎಂಬ ಹಾಡಿನಲ್ಲಿ ಹೇಳುತ್ತಾರೆ :

ಸತಿ ಅನುಕೂಲ ಬೇಕು ಸುತನಲ್ಲಿ ಗುಣಬೇಕು
ಮಡಿವಂತನಾಗಬೇಕು ಮಠ ಒಂದಾಗಿರಬೇಕು
ಜಪದ ಜಾಣುವೆ ಬೇಕು ತಪದ ನೇಮವೆ ಬೇಕು
ಉಪವಾಸ ವ್ರತ ಬೇಕು ಉಪಶಾಂತವಿರಬೇಕು
ಸುಸಂಗ ಹಿಡಿಯಲಿಬೇಕು ದುಸ್ಸಂಗ ಬಿಡಲಿಬೇಕು
ರಂಗವಿಠಲನ್ನೆ ಬಿಡದೆ ನೆರ ನಂಬಿರಬೇಕು

ಶ್ರೀಪಾದರಾಜರ ಕೀರ್ತನೆಗಳಲ್ಲಿ ಭಕ್ತನ ಅಂತರಂಗದ ಅಲ್ಲೋಲಕಲ್ಲೋಲ ವನ್ನು ಚಿತ್ರಿಸುವ ಆತ್ಮನಿವೇದನೆಯ ಗೀತಗಳು – ಇವುಗಳಲ್ಲಿ ಭಕ್ತನು ಭಗವಂತನಿ ಗಾಗಿ ಪಡುತ್ತಿರುವ ಉತ್ಕಟ ಹಂಬಲ ಅದರೊಂದಿಗೆ ಕಷ್ಟಕೋಟಿಗಳ ಬೇಗುದಿ. "ಎಷ್ಟು ಹೇಳಲಿ ಎನ್ನ ಕಷ್ಟ ಕೋಟಿಗಳನ್ನು? (ಅವು) ಸುಟ್ಟೀಗ ಬೇಯಿಸುತಿಹವು ಕೃಷ್ಣ.

ಕಷ್ಟಪಟ್ಟ ಮಗನೆಂದು ದೃಷ್ಟಿ ನೀರೊರೆಸು, ಎನ್ನ ಪೊಟ್ಟೆಯೊಳ್ ಪಿಡಿವರಾರೋ ಕೃಷ್ಣ" ಎಂಬ ಆರ್ತಧ್ವನಿ ಶ್ರೀಕೃಷ್ಣನ ಲೀಲಾವೈಭವ, ಗೋಪಿಯರ ಮತ್ತು ಶ್ರೀಕೃಷ್ಣನ ಮಧುರಬಾಂಧವ್ಯ, ಅಕ್ರೂರನು ಕೃಷ್ಣನನ್ನು ಮಧುರೆಗೆ ಕರೆದುಕೊಂಡು ಹೋಗಲು ಬಂದನೆಂಬ ವಾರ್ತೆಯನ್ನು ಕೇಳಿದಾಗ ಗೋಪಿಯರಲ್ಲಿ ಉಂಟಾಗುವ ವಿರಹ ಕೋಲಾಹಲದ ಕಲ್ಲೋಲ, ಯಮುನಾ ತೀರದಲ್ಲಿ ಕೃಷ್ಣನೊಡನೆ 'ಆಡಲು ಹೋಗುವ ಬಾ' ಎಂದು ಕರೆಯುವ ಸಖ್ಯ ಭಾವ, ಯಶೋದೆಯು ಬಾಲಗೋಪಾಲನ ಮೇಲೆ ತೋರಿಸುವ ವಾತ್ಸಲ್ಯ ಭಾವ, ಇಂತಹ ಬಗೆಗಳನ್ನು ಬಣ್ಣಿಸುವ ಕೀರ್ತನೆಗಳು ವರ್ಣನಾವೈಖರಿಯಿಂದ ಶೃಂಗಾರ ರಸಮಯ ಶೈಲಿಯಿಂದ ಮನೋಜ್ಞ ವಾಗಿವೆ. ಕಲಿಯುಗದಲ್ಲಿ ಸಂಗೀತ ಭಕ್ತಿ ಶ್ರೇಷ್ಠವಾದುದು ಎಂಬ ಈ ಚಿಕ್ಕ ಉಗಾಭೋಗವನ್ನು ನೋಡಬಹುದಾಗಿದೆ :

ಧ್ಯಾನವು ಕೃತಯುಗದಿ
ಯಜನ ಯಜ್ಞವು ತ್ರೇತಾಯುಗದಿ
ದಾನವಾಂತಕನ ದೇವತಾರ್ಚನೆ ದ್ವಾಪರ ಯುಗದಿ
ಆ ಮಾನವರಿಗೆಷ್ಟು ಫಲವೊ ಅಷ್ಟು ಫಲವು
ಕಲಿಯುಗದಿ ಗಾನದಲಿ ಕೇಶವಯೆನಲು
ಕೈಗೊಡುವನು ರಂಗವಿಠಲ

ಭ್ರಮರ ಗೀತದಲ್ಲಿ ವ್ಯಕ್ತವಾಗಿರುವ, ಭಾಗವತದಲ್ಲಿ ಉಕ್ತವಾಗಿರುವ ಲಲಿತ ಶೈಲಿಯ ಕನ್ನಡಾನುವಾದವಾಗಿದ್ದು ಕೆಲವು ಸ್ವಂತ ಸಾಲುಗಳೂ ಸೃಷ್ಟಿಯಾಗಿವೆ. ಗೋಕುಲದಲ್ಲಿ ಝೇಂಕರಿಸುತ್ತ ಬರುವ ಭ್ರಮರವೊಂದನ್ನು ನೋಡಿ ಗೋಪಿಯು ಅದು ಕೃಷ್ಣವರ್ಣನಾಗಿರುವ ಶ್ರೀಕೃಷ್ಣನ ದೂತನಾಗಿರಬೇಕೆಂದು ಭ್ರಮಿಸಿ ಆ ಭ್ರಮರಕ್ಕೆ ತನ್ನ ಸಂದೇಶವನ್ನು ನೀಡುತ್ತಾಳೆ. ಇದೊಂದು ಸುಂದರ ಖಂಡಕಾವ್ಯವಿದ್ದಂತೆ. ಈ ಭಂಗವನ್ನು ನೋಡಿದೊಡನೆಯೆ ಅದರ ಸೊಗಸುಗಾರಿಕೆಯನ್ನು ನೆನೆದು ಅದರ ರಸಿಕತೆಗೆ ಮುಗ್ಧಳಾಗಿ ಗೋಪಿ"ನಿನ್ನ ನೋಡೆ ನಮ್ಮ ಅಚ್ಯುತನ ಕಂಡಂತಾಯಿತಮ್ಮಾ" ಎಂದು ನುಡಿಯುತ್ತಾಳೆ. ಈ ಗೀತದ ಕೆಲವು ಸಾಲುಗಳನ್ನು ಕಪಿವಾಣಿಯಲ್ಲಿ ನೋಡಬಹುದು.

ಭೃಂಗ ನಿನ್ನಟ್ಟಿದನೇ ಶ್ರೀರಂಗ ಮಧುರೆಲಿ ನಿಂದು
ಅಂಗಜಲುಬ್ಧಕ ಪೂಗೋಲಂಗಳ ತದೆಯನಿಕ್ಕಿ

ಅಂಗನೇರೆಂಬೋ ಹುಲ್ಲೆ ಮೃಗಂಗಳಿಗೆ ಗುರಿಯೆಚ್ಚು
ಹಿಂಗಿಸುತೈಧಾನೆ ಅಸುವ ಹೇ ಕಿತವಾ

ನಿನ್ನ ನೋಡೆ ನಮ್ಮ ಅಚ್ಯುತನ್ನ ಕಂಡಂತಾಯಿತಯ್ಯಾ
ಚನ್ನಿಗರರಸ ಕುಶಲೋನ್ನತಿಯಲಿಹನೇನೋ
ಚಿಣ್ಣತನ ಮೊದಲಾಗವನ್ನ ಕಿತವ ಬಲ್ಲೆವೋ
ಗನ್ನಗಾರಚಿತ್ತ ಚೋರನ್ನ ಶ್ರೀ ಹರಿಯಾ
ಮನ್ನಣೆಗೆ ಮೆಚ್ಚಿ ತನುವನ್ನೊಪ್ಪಿಸಿದ ಮುಗುದೆ–
ವೆಣ್ಣುಗಳ ವಿರಹಾಬ್ಧಿಯನ್ನೆ ದಾಟಿಸುವೆನೆಂದು
ತನ್ನ ನೇಹವೆಂಬೋ ನಾವೆಯನ್ನೇರಿಸಿ ಮೋಸದಿ
ನಡುನೀರೊಳು ತೊ [ರೆದ್ಹೋದನೆ ಹೇ ಕಿತವಾ]

ಶ್ರೀಪಾದರಾಯರು ರಚಿಸಿರುವ ಕೀರ್ತನೆಗಳ ಸಂಖ್ಯೆಯು ಇಷ್ಟೇ ಎಂದು ಖಚಿತವಾಗಿ ಹೇಳಲು ಬರುವಂತಿಲ್ಲ. ದೊರೆತಿರುವುದು ಸುಮಾರು 100 ರಷ್ಟು ಮಾತ್ರ. ಇದರಲ್ಲಿ ಭ್ರಮರಗೀತೆ ಶ್ರೀ ಲಕ್ಷ್ಮೀನೃಸಿಂಹ ಪ್ರಾದುರ್ಭಾವದಂಡಕ (?) ಗಳಂತಹ ಸುದೀರ್ಘ ಕೀರ್ತನೆಗಳು ಒಂದು ಮಾದರಿಯಾದರೆ, ಉಗಾಭೋಗಗಳು ಮತ್ತೊಂದು ಮಾದರಿ. ಉಳಿದ ಕೀರ್ತನೆಗಳು ಮುಖ್ಯ ಮೊತ್ತ. ಹರಿದಾಸರ ಕೀರ್ತನೆಗಳನ್ನು ಅವಲೋಕಿಸಿದರೆ ಸಾಮಾನ್ಯವಾಗಿ ಸಾಮಯಿಕವೆನಿಸುವಂತಹ ವರ್ಣನೆಗಳು ಕಂಡುಬರುತ್ತವೆ. ಎಲ್ಲ ಹರಿದಾಸರು ತಮ್ಮ ಆತ್ಮನಿವೇದನೆಯಲ್ಲಿ ತಾವೇ ಸರ್ವಪಾಪಿಯೆಂದೂ ತನ್ನಷ್ಟು ಮೂಢ, ಅಜ್ಞಾನಿ, ಸ್ವಾರ್ಥಪರ ಯಾರೂ ಇಲ್ಲವೆಂದೂ ಸಂಸಾರದಲ್ಲಿ ಬಹುವಿಧ ಸಂಕಟಗಳಿಗೆ ತುತ್ತಾಗಿ ಈ ದೇಹವನ್ನು ಪೊರೆಯುವುದೆ ಕಷ್ಟವಾಗಿ ತನ್ನನ್ನೆ ತಾನು ಹೊದ್ದುಕೊಳ್ಳಬೇಕೆಂಬ ಮಟ್ಟಕ್ಕಿಳಿದು ಆಗ ಭಗವಂತನಲ್ಲಿ ಮೊರೆಹೊಕ್ಕು ತನ್ನನ್ನು ಕಾಯಬೇಕೆಂದೂ ಕೇಳಿಕೊಳ್ಳುತ್ತಾನೆ. ಶ್ರೀಪಾದರಾಯರಿಂದ ಮೊದಲುಗೊಂಡು ಆಧುನಿಕ ದಾಸರವರೆಗೂ ಈ ಭಕ್ತಕವಿಗಳು ಸಾಮಯಿಕವಾಗಿ ಅನುಭವ ಕಥನವನ್ನು ಮಾಡಿದರು. ವೈಯಕ್ತಿಕ ಅನುಭವಗಳು ಅಲ್ಲಲ್ಲಿ ಮಿಂಚಿರುವುದುಂಟು. ಅನುಭವವು ಉನ್ನತ ಮಟ್ಟಕ್ಕೇರಿದಾಗ ಅನುಭಾವ ವಾಗಿ ಪರಿವರ್ತಿತವಾಗುವುದುಂಟು. (ಶ್ರೀಪಾದರಾಯರಲ್ಲಿಯಂತೆ ಉಳಿದ ಅನೇಕ ದಾಸರ ಕೀರ್ತನೆಗಳಲ್ಲಿಯೂ ಅನುಭವ ಅನುಭಾವಗಳೆರಡೂ ಕಾಣಿಸಿಕೊಂಡಿವೆ. ಶ್ರೀಪಾದರಾಯರು ತಮ್ಮ ಸಾಧುಜೀವನದಲ್ಲಿ ಅನೇಕ ಪವಾಡಗಳನ್ನು ಮೆರೆದಿದ್ದಾರೆ. ಈ ಪವಾಡಗಳು ಐತಿಹಾಸಿಕ ಸಂಗತಿಗಳು ಎಂದು ಎಣಿಸಲು ಬರುವುದಿಲ್ಲ. ಆದರೆ ಅವುಗಳ ಹಿಂದೆ ಆಯಾ ಸಾಧುಸಂತರ ಮಹಿಮೆ, ಲೋಕಪ್ರಿಯತೆಗಳು ಪ್ರತಿಬಿಂಬಿತ

ವಾಗುತ್ತವೆ. ಶ್ರೀಪಾದರಾಯರ ಬಗ್ಗೆ ಹೇಳುವ ಈ ಮಾತುಗಳು ಪುರಂದರದಾಸರ ಬಗ್ಗೆಯೂ ಅನ್ವಯಿಸುತ್ತವೆ, ಮಹಿಪತಿದಾಸರ ಬಗ್ಗೆಯೂ ಅನ್ವಯಿಸುತ್ತವೆ, ಗೋಪಾಲದಾಸರ ಬಗ್ಗೆಯೂ ಅನ್ವಯಿಸುತ್ತವೆ, ಜಗನ್ನಾಥದಾಸರ ಬಗ್ಗೆಯೂ ಅನ್ವಯಿಸುತ್ತವೆ.)

ಶ್ರೀಪಾದರಾಯರ ವೈಶಿಷ್ಟ್ಯವೆಂದರೆ ಭಾಗವತ ಭಾರತಗಳ ಪ್ರಭಾವದಿಂದಾಗಿ ಅವರ ಕೀರ್ತನೆಗಳಲ್ಲಿ ಮೂಡಿರುವ ಪ್ರಬಲ ಪಾಂಡಿತ್ಯ. ಅದರೊಂದಿಗೆ ಕವಿಯ ಕಲ್ಪನಾವಿಲಾಸವೂ ಸೇರಿ ಕೀರ್ತನೆಗೆ ಒಂದು ಉಜ್ವಲ ಕಾಂತಿ ದೊರಕೊಳ್ಳುತ್ತದ. ಒಂದು ಕೀರ್ತನೆಯಲ್ಲಿ ರುಕ್ಮಿಣಿ ಸತ್ಯಭಾಮೆಯರು ಎಷ್ಟು ರಸಿಕತೆಯಿಂದ, ಎಷ್ಟು ಸರಸವಾಗಿ ಜಗಳಾಡಬಲ್ಲರು ಎಂಬುದನ್ನು ಮೋಹಕವಾಗಿ ಚಿತ್ರಿಸಿದ್ದಾರೆ, ಇಬ್ಬರೂ ಶ್ರೀಕೃಷ್ಣನಿಗೆ ಅಚ್ಚುಮೆಚ್ಚಿನ ಮಡದಿಯರೇ. ಇಬ್ಬರೂ ಉತ್ತಮ ಕುಲದವರೇ. ರುಕ್ಮಿಣಿಯನ್ನು ಮೆಚ್ಚಿ ಅಪಹರಿಸಿ ತಂದಿದ್ದರೆ ಸತ್ಯಭಾಮೆಯನ್ನು ತಂದೆಯಾದ ಸತ್ರಾಜಿತನು ಕೃಷ್ಣನು ಸಾಹಸಪಟ್ಟು ಶಮಂತಕಮಣಿಯನ್ನು ಹುಡುಕಿಕೊಟ್ಟಿದ್ದರ ಕೃತಜ್ಞತೆಗಾಗಿ ಧಾರೆಯೆರೆದು ಕೊಡುತ್ತಾನೆ. ರುಕ್ಮಿಣಿಗೆ ತಾನೆ ಅಧಿಕಳೆಂದೂ ಸತ್ಯಭಾಮೆಯು ಕಡಿಮೆಯವಳೆಂದೂ ಭಾವನೆ. ಆದರೆ ಪತಿಯ ಪ್ರೀತಿ ತನ್ನ ಮೇಲೇ ಅತಿಶಯ ಎಂಬ ಹೆಮ್ಮೆ ಸತ್ಯಭಾಮೆಗೆ. ಅವರ ಸಂಭಾಷಣೆಯ ರೀತಿಯನ್ನು ಈ ಕವಿವಾಣಿಯಲ್ಲಿನ ಕೀರ್ತನೆಯಲ್ಲಿ ನೋಡಬಹುದು.

ಧರೆಯ ಮ್ಯಾಲೆ ಹಿರಿಯಳು ನಾ-
ನಿರಲು ಲಜ್ಜೆ ತೊರೆದು ನೀನು
ಸರಸವಾಡೋರೆ ಮುರಹರನ
ಕರೆದು ಭಾವಿಸಿ ಸುಗುಣೆ ಕಾಮಿನಿ

ಪತಿಯ ಪ್ರೀತಿ ಎನ್ನ ಮ್ಯಾಲೆ
ಅತಿಶಯದಿ ಇರಲು ಜ್ಯೇಷ್ಠ
ಸತಿಯಳೇನೇ ನೀನು ನೋಡು
ಮತಿಯ ರುಕ್ಮಿಣಿ ಸುಪದ್ಮಗಂಧಿನಿ

ಒಂದು ಕಾಲದಲ್ಲಿ ದಾಸಿ-
ಯಿಂದ ಪತಿಯು ಸರಸವಾಡಲು
ಬಂದಳೇನೇ ಅರಸಿ ಸಮ-
ಳೆಂದು ಭಾಮಿನಿ ಸುಗುಣೆ ಕಾಮಿನಿ

ದಾಸಿಸಮಳು ನಾನು ಅಲ್ಲ
ದೋಷವಮಾತನಾಡಬೇಡ
ಶ್ರೀಯುನ ದಯದಾಳಿ ಇರಲು
ದಾಸಿಯೆ ರುಗ್ಮಿಣಿ ಸುಪದ್ಮಗಂಧಿನಿ

ಅಲ್ಲಿ ಸಂಗೀತ ಸಂಭಾಷಣೆಯೂ ಹೃದ್ಯವಾಗಿ ಮುಂದುವರಿಯುತ್ತದೆ. ಶ್ರೀಪಾದರಾಯರು ಕನ್ನಡ ಸಾಹಿತ್ಯಕ್ಕೆ ನೀಡಿದ ಕಾಣಿಕೆ ಅಮೋಘವಾದದ್ದು. ಮಾಧ್ವ ವಿಚಾರ ಪ್ರಣಾಲಿಯನ್ನು ಜನಸಾಮಾನ್ಯರಲ್ಲಿ, ಪಾಮರ ವರ್ಗದಲ್ಲಿ ಹರಡಿದ ಕೀರ್ತಿ ಅವರದು. ಮುಂದಿನ ಮಾಧ್ವ ಭಾಗವತರಾದ ದಾಸವರ್ಗಕ್ಕೆ ಶ್ರೀಪಾದರಾಯರು ಮಾರ್ಗದರ್ಶಿಯಾಗಿದ್ದಾರೆ.

## ಶ್ರೀ ವ್ಯಾಸತೀರ್ಥರು

ಶ್ರೀಪಾದರಾಯರ ಶಿಷ್ಯರು ವ್ಯಾಸತೀರ್ಥರು. ವ್ಯಾಸತೀರ್ಥರು ದಾಸ ಸಾಹಿತ್ಯದ ಇತಿಹಾಸದಲ್ಲಿ ವಿಶೇಷ ಮಹತ್ವದ ಸ್ಥಾನವನ್ನು ಪಡೆದಿದ್ದಾರೆ. ವಿಜಯನಗರದ ಘನತೆಯ ಕಾಲದ ಕೃಷ್ಣದೇವರಾಯನ ರಾಜಮರ್ಯಾದೆಯನ್ನು ಸಂಪಾದಿಸಿದವರು. ಶ್ರೀಪಾದರಾಯರ ಶಿಷ್ಯರಾದಂತೆಯೆ ದಾಸಪರಂಪರೆಯಲ್ಲಿಯೆ ಪರಾಕಾಷ್ಠೆಯೆನಿಸಿದ ಪುರಂದರದಾಸರಿಗೆ ಗುರುಗಳು. ತಮ್ಮ ಗುರುಗಳ ಮಹಿಮೆಯನ್ನು ಕೊಂಡಾಡಿದಂತೆಯೆ 'ದಾಸರೆಂದರೆ ಪುರಂದರದಾಸರಯ್ಯಾ' ಎಂದು ತಮ್ಮ ಶಿಷ್ಯನ ಹಿರಿಮೆಯನ್ನು ಕೂಡಾ ಹಿಂದೆ ಮುಂದೆ ನೋಡದೆ ಹೊಗಳಿದ್ದಾರೆ. ಪುರಂದರದಾಸರಂತೆ ಕನಕದಾಸರಿಗೂ ವ್ಯಾಸತೀರ್ಥರು ಗುರುಗಳು. 'ಗುಣಾಃ ಪೂಜಾಸ್ಥಾನಂ' ಎಂಬ ವಿಶಾಲ ಮನೋಭಾವ ವ್ಯಾಸರಾಯರದಾಗಿತ್ತು. ವ್ಯಾಸತೀರ್ಥರಿಗೆ ವ್ಯಾಸರಾಯರು ಎಂಬ ಹೆಸರು ಬರಲಿಕ್ಕೆ ಕೃಷ್ಣದೇವರಾಯನು ಅವರಿಗೆ ಸಲ್ಲಿಸಿದ ರಾಜಮರ್ಯಾದೆಯೆ ಕಾರಣ. ಕೃಷ್ಣದೇವರಾಯನನ್ನು ಕುಹೂಯೋಗ ಎಂಬ ವಿಪತ್ತಿನಿಂದ ಪಾರು ಮಾಡಿದ್ದಕ್ಕಾಗಿ ರಾಜನು ಅವರನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಸತ್ಕರಿಸಿದನು. ವ್ಯಾಸತೀರ್ಥರನ್ನು ವಿಜಯನಗರ ಸಂಸ್ಥಾಪನೆಗೆ ಮುಖ್ಯ ಕಾರಣರಾದ ವಿದ್ಯಾರಣ್ಯರಿಗೆ ಹೋಲಿಸುತ್ತಾರೆ. ಶಂಕರಾಚಾರ್ಯರ ಮಹಾಪೀಠದಲ್ಲಿ ಕುಳಿತು ವಿದ್ಯಾರಣ್ಯರು ಗ್ರಂಥ ರಚನೆಯನ್ನು ಮಾಡಿದರೆ ವ್ಯಾಸತೀರ್ಥರು ಮಧ್ವಾಚಾರ್ಯರ ಮಹಾಪೀಠದಲ್ಲಿ ಕುಳಿತು ಗ್ರಂಥಗಳನ್ನು ರಚಿಸಿ ಲೋಕೋಪಕಾರ, ಲೋಕೋದ್ಧಾರ ಮಾಡಿದರು.

ಸೋಮನಾಥನೆಂಬ ಸಂಸ್ಕೃತ ಕವಿ (ಕ್ರಿ. ಶ. 1535) ವ್ಯಾಸರಾಯರ ಚರಿತ್ರೆಯನ್ನು ರಚಿಸಿದ್ದಾನೆ. ಕವಿಯು ವ್ಯಾಸರಾಯರ ಸಮಕಾಲೀನ. ಕವಿಯು ಪ್ರತಿಭೆ,

ಪ್ರತ್ಯುತ್ಪನ್ನ ಮತಿಗಳಿಗೆ ಮೆಚ್ಚಿ ಸೋಮನಾಥನನ್ನು ಕೆಲಕಾಲ ತಮ್ಮ ಸನ್ನಿಧಾನ ದಲ್ಲಿಯೆ ನಿಲ್ಲಿಸಿಕೊಂಡರಂತೆ.

ಆಕರ್ಣ್ಯ ಹರ್ಷಮುಷೇನ ತೇನ ಭಗವತಾ ಶ್ಲಾಘಾಶಿರಃ ಕಂಪನೈಃ
ಅನಿತರಸುಲಭೈರುಪಲಾಲಿತಸ್ಸಕವಿಃ ಪ್ರತ್ಯಹಂ ಪ್ರದರ್ಶಿತೇಷು
ಬಹುವಿಧಕಲಾವಿಧಾನಪಾಂಡಿತ್ಯೇಷು ಪ್ರತಿಪಾದಿತ್ಯೈಃ ಪಾರಿತೋಷಕ
ವಿಶೇಷೈರ್ಬಹುಮಾನ್ಯಮಾನಸ್ತತ್ರೈವ ವಾಸರಾಣಿ ಕತಿಚಿದವಾತ್ಸೀತ್ ॥

ಕವಿ ಸೋಮನಾಥನಿಗೆ ಅಸೂಯೆ ಮತ್ಸರಾದಿ ಆಸುರೀ ಶಕ್ತಿಗಳು ಬೆನ್ನಟ್ಟಿರು ವಾಗ ವ್ಯಾಸತೀರ್ಥರ ವಿಶಾಲ ಮನೋಭಾವ, ವಿದ್ಯಾಪಕ್ಷಪಾತ ಇವು ಕಾಪಾಡಿದವು. ಮತಕ್ಕೂ ಪಾಂಡಿತ್ಯಕ್ಕೂ ಯಾವ ಸಂಬಂಧವೂ ಇಲ್ಲ ಎಂಬುದನ್ನು ವ್ಯಾಸತೀರ್ಥರು ತೋರಿಸಿಕೊಟ್ಟರು, ಎಂಬ ಮಾತನ್ನು ಕೂಡ ಸೋಮನಾಥ ಕವಿ ವ್ಯಕ್ತಪಡಿಸುತ್ತಾನೆ

ಭೋ ಭೋ ಮತ್ಸರಕುತ್ಸಿತಾಸ್ಸುಮತಯೋದುರ್ವೈದುಷೀಗರ್ವಿತಾ ।
ನಾಕಾಶಾದವತಾರ ಭಾಗಿನ ಇವಾಹಂ ಯೂನ್ಸಮಾಘೌಕ್ಯಕಿಂ ॥
ಶ್ಲಾಘಾಕಂಪನಮೇಕಮೇವಶಿರಸಃ ಶ್ರೀವ್ಯಾಸಯೋಗೀಶಿತುಂ ।
ಮೇರೂಣಾಂ ಶತಮರ್ಹತಿ ಕ್ಷಿತಿತಲೇ ವಿದ್ಯಾಸು ವಿದ್ಯಾವತಾಂ ॥

ವ್ಯಾಸರಾಯರು ಕ್ರಿ. ಶ. 1447ನೆಯ ಏಪ್ರಿಲ್ 22ನೆಯ ದಿನಾಂಕದಂದು ಎಂದರೆ ಪ್ರಭವ ಸಂವತ್ಸರ ವೈಶಾಖ ಶುದ್ಧ ಸಪ್ತಮಿ ಭಾನುವಾರದಂದು ಅವತರಿ ಸಿದರೆಂದು ತಿಳಿಯುತ್ತದೆ. (ಶ್ರೀ ಕರ್ಣಾಟಕ ಭಕ್ತ ವಿಜಯ, ಪುಟ-48) ವಿಜಯ ದಾಸರು ಗುರು ಪರಂಪರೆಯನ್ನು ಸ್ತೋತ್ರ ಮಾಡುವ ಒಂದು ಉಪಯುಗಾಗದಲ್ಲಿ ವ್ಯಾಸರಾಯರ ಚರಿತ್ರಾಂಶಗಳನ್ನು ಚಿತ್ರಿಸಿದ್ದಾರೆ. "ವ್ಯಾಸರಾಯರ ಭಜಿಸಿ । ಏಸು ಜನುಮದ ಪಾಪ । ನಾಶವಾಗುವದು ನಿಮ್ಮಾಶೆ ಸಿದ್ಧಿಸುವದು ॥ ಲೇಸಾಗಿ ಸುಖಿಸಿ ಆನಂದ ವೈಕುಂಠಪುರ । ವಾಸವಾಗುವ ನಿಜಭಕುತಿಯಲ್ಲಿ" ಎಂದು ಮೊದಲಾಗುವ ಗೀತದಲ್ಲಿ ವ್ಯಾಸತೀರ್ಥರ ಚರಿತ್ರಾಂಶ ಬಂದಿದೆ.

ಬನ್ನೂರು ಗ್ರಾಮದಲಿ ಜನಿಸಿದನು ಭೂಸ್ಪರ್ಶ । ಮುನ್ನಪಿಲ್ಲದೆ ಬೆಳೆದು ವೃದ್ಧಮುನಿ ಸುಬ್ರಾಹ್ಮಣರನ್ನು ಪಾಲಿಸುವ ಪರಮಾನಂದ ಗುರು ಬ್ರಹ್ಮಣ್ಯತೀರ್ಥರ ದಿವ್ಯಕರಗಳಿಂದ ॥ ಚೆನ್ನಾಗಿ ಉಪನೀತನಾಗಿ ಪೋಷಿಸಿಕೊಂಡು । ಸಂನ್ಯಾಸ ಪಟ್ಟವನು ಧರಿಸಿ ಧರ್ಮದಲಿ ಸ । ತ್ಪುಣ್ಯ ಶ್ರೀಪಾದರಾಯಲ್ಲಿ ಓದಿ । ಘನ್ನ ಕೀರ್ತಿಯಲಿ ಮೆರೆದ—

ಯಂತ್ರೋದ್ಧಾರಕನ ಪ್ರತಿಷ್ಠಿಸಿ ವಿಜಯೀಂದ್ರ । ಸಂತತ ಕನಕ ವಾದಿರಾಜ ಪುರಂದರ । ಇಂತು ಶಿಷ್ಯರನ ಪಡೆದು ಉಪದೇಶಿಸಿ ಮಂತ್ರಸಿದ್ಧಿಯ ತೋರಿಸಿ ॥ ಭ್ರಾಂತಿಗೊಳಿಸುವ ಮಹಾ ಅನ್ಯಾಯ ಮತವೆಂಬ । ಕಾಂತಾರಪಾವಕವೆನಿಸಿ ವ್ಯಾಸಾಬ್ಧಿಯನೆ ಬಿಗಿದು । ಶಾಂತನಿಸ್ಸೀಮನೆಂದನೆಸಿದ ಶಿರೋರನ್ನ ಚಿಂತಿತಫಲ ದಾಯಕ.

ರಾಯಗದ್ದುಗೆಯೇರಿ ಅವರಿಗೆ ಬಂದ ಮಹಾ ಕುಹುಯೋಗವನೆ ನೂಕಿ ರಾಜ್ಯ ದೊಳಗಿದ್ದ । ಮಾಯಿಗಳ ಮರ್ದಿಸಿ ಮುದದಿಂದ ಸುವರ್ಣಛಾಯದಂಡದಿ ಒಪ್ಪುತಾ ॥ ನ್ಯಾಯಾಮೃತ ತರ್ಕತಾಂಡವ ಚಂದ್ರಿಕೆಯನ್ನು । ಈಯುವನಿಯೊಳ ಗೊರೆದು ಮುಕ್ತಿಗೆ ಪಥ ಮಾಡಿ । ಶ್ರೀಯರಸನೊಲಿಸಿ ನಾನಾ ವಿಧದಿ ಪೂಜಿಸಿ । ಸ್ಥಾಯಪಾಪರು ಪಂಪಕ್ಷೇತ್ರದಲ್ಲಿ ।

ಮಧ್ವಮತವೆಂಬ ದುಗ್ಧಾಬ್ಧಿ ಪೂರ್ಣೇಂದು । ಹೃದ್ವನಜದೊಳಗೆ ಶ್ರೀಕೃಷ್ಣನ ಪದಾಂಬುಜವ । ಚಿದ್ವಾಕ್ಯದಲಿ ನಿಲಿಸಿ ಕಾವ್ಯದಲಿ ಕೊಂಡಾಡಿ ನದ್ದಯದಿ ವೈಷ್ಣವರಿಗೆ ॥ ಸದ್ವಾರ್ತೆಯನು ಪೇಳಿ ತವಕದಿಂದಲಿ ತಾವು । ಸದ್ವೈಷ್ಣವಲೋಕ ಸೇರಿ ಮರಳ್ಳೈದಿದರು ಮಧ್ವವಲ್ಲಭ ನಮ್ಮ ವಿಜಯವಿಠಲನ ಪಾದದ್ವಯದಲ್ಲಿ ಭಕುತಿ ಯಲಿ ॥

ಸಾಧುಸಂತರ ಅವತಾರಗಳ ಹಿಂದೆ ರಾಜಕೀಯವಾದ ಒಂದೊಂದು ಸಂಧಿಕಾಲ ವನ್ನು ಕಾಣಬಹುದಾಗಿದೆ. ವಿದ್ಯಾರಣ್ಯರು, ರಾಮದಾಸರು ನರಹರಿತೀರ್ಥರಂತೆ ವ್ಯಾಸರಾಯರ ಅವತಾರದ ಹಿಂದೆಯೂ ರಾಜಕೀಯ ಹಿನ್ನೆಲೆ ಇದೆ. ವಿಜಯನಗರದ ನರಸಿಂಹ, ಕೃಷ್ಣದೇವರಾಯರ ಜೊತೆಯಲ್ಲಿ ದಂಡಯಾತ್ರೆ ಹೊರಟ ಕಲಿತನವೂ ವ್ಯಾಸತೀರ್ಥರದಾಗಿದೆ. ಸಂನ್ಯಾಸಿಗಳಾಗಿಯೂ ವಿದ್ಯಾರಣ್ಯರು ರಾಜ್ಯ ಕಟ್ಟುವ ಕಾರ್ಯಕ್ಕೆ ಟೊಂಕ ಕಟ್ಟಿದಂತೆ ವ್ಯಾಸರಾಯರೂ ಸಂನ್ಯಾಸಿಗಳಾಗಿಯೂ, ಧರ್ಮ ಪ್ರಚಾರದೊಡನೆ ರಾಜ್ಯದ ಯೋಗಕ್ಷೇಮವನ್ನು ವಹಿಸಿಕೊಂಡರು. ಇದೇ ರೀತಿ ಸಮರ್ಥ ರಾಮದಾಸರು ಛತ್ರಪತಿ ಶಿವಾಜಿಗೆ ಬೆಂಬಲಿಗರಾಗಿ ನಿಂತು ರಣಕ್ಷೇತ್ರದಲ್ಲಿ ಹೋರಾಡಿದರು.

ವ್ಯಾಸತೀರ್ಥರ ಜನನವೇ ಒಂದು ಅದ್ಭುತಪವಾಡವೆಂದು ವರ್ಣಿಸುತ್ತಾರೆ. ಮಾಧ್ವಮಠದ ಬ್ರಹ್ಮಣ್ಯತೀರ್ಥರ ಆಶ್ರಯದಲ್ಲಿ ವ್ಯಾಸತೀರ್ಥರು (ಮೂಲ ಹೆಸರು ಯತಿರಾಜ) ಬಾಲಯತಿಯಾಗಿಯೆ ವಿದ್ಯಾರ್ಜನೆಯನ್ನು ಮಾಡಿ ಜ್ಞಾನಿಗಳೆನಿಸಿದರು. ಯತಿರಾಯನ ಅಗಾಧ ಪಾಂಡಿತ್ಯ, ಅಪ್ರತಿಮ ಪ್ರತಿಭೆಗಳನ್ನು ನೋಡಿ ಮುಗ್ಧರಾದ ಬ್ರಹ್ಮಣ್ಯತೀರ್ಥರು ಇವರಿಗೆ ಹೆಚ್ಚಿನ ನ್ಯಾಯ, ವೇದಾಂತ, ಶಾಸ್ತ್ರ ಪ್ರವಚನಗಳ ಅವಶ್ಯಕತೆ ಇಲ್ಲವೆಂದು ನಿಶ್ಚಯಿಸಿ ಅವರಿಗೆ ಸಂನ್ಯಾಸ ದೀಕ್ಷೆಯನ್ನು ನೀಡಿದರು.

ಇಷ್ಟು ಚಿಕ್ಕ ವಯಸ್ಸಿನಲ್ಲಿಯೆ ವ್ಯಾಸತೀರ್ಥರು ಬ್ರಹ್ಮಸಮಾಧಿಯನ್ನು ಹೊಂದಿ ಭಗವಂತನ ಸಾಕ್ಷಾತ್ಕಾರವನ್ನು ಪಡೆದುದನ್ನು ಬ್ರಹ್ಮಣ್ಯತೀರ್ಥರು ಸಾಕ್ಷಾತ್ತಾಗಿ ಕಂಡುಕೊಂಡರು. ಶಿಷ್ಯನ ಪರಿಪಕ್ವ ದೆಸೆಯನ್ನು ತಿಳಿದು ಯತಿರಾಜನಿಗೆ ವ್ಯಾಸತೀರ್ಥರೆಂಬ ನಾಮಕರಣ ಮಾಡಿ ತುರೀಯಾಶ್ರಮವನ್ನು ಅನುಗ್ರಹಿಸಿದರು.

ಮುಂದೆ ಬ್ರಹ್ಮಣ್ಯತೀರ್ಥರು ಬೃಂದಾವನಸ್ಥರಾಗಲು ವ್ಯಾಸತೀರ್ಥರು ದೇಶಾಟನ ಕಾರ್ಯವನ್ನು ಕೈಗೊಂಡರು. ಹೋದಹೋದಲ್ಲೆಲ್ಲ ತಮ್ಮ ವಿದ್ವತ್ತಾಚುರ್ಯದಿಂದ ಪಂಡಿತರನ್ನು ಮೆಚ್ಚಿಸಿ ಅವರ ಪ್ರೇಮವನ್ನು ಗಳಿಸಿದರು, ವ್ಯಾಸರಾಯರ ಧರ್ಮಪ್ರಚಾರಕಾರ್ಯವು ಉತ್ತರ ಹಿಂದೂಸ್ತಾನದಲ್ಲಿ ವೈಭವಯುಕ್ತವಾಗಿ ನಡೆಯಿತು. ಈ ಮೊದಲೆ ಮಧ್ವಾಚಾರ್ಯರು ಬಂಗಾಲದಲ್ಲಿ ದ್ವೈತಧ್ವಜವನ್ನು ಮೆರೆಯಿಸಿದ್ದರು. ಉತ್ತರದ ಸಂಚಾರವನ್ನು ಮುಗಿಸಿಕೊಂಡು ವ್ಯಾಸರಾಯರು ದಕ್ಷಿಣದ ಕಂಚಿಯ ವಿದ್ಯಾಪೀಠಕ್ಕೆ ಬಂದರು. ಅಲ್ಲಿಯೂ ಅವರ ಪಾಂಡಿತ್ಯಕ್ಕೆ ಯೋಗ್ಯ ಪುರಸ್ಕಾರ ದೊರಕಿತು.

ವಿಜಯನಗರದ ಸಾಳುವ ನರಸಿಂಹನು ಮೊದಲು ಶ್ರೀಪಾದರಾಯರ ಪ್ರಭಾವಕ್ಕೆ ಮೆಚ್ಚಿ ಅವರನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಕನಕಾಭಿಷೇಕವನ್ನು ಮಾಡಿ ಸತ್ಕರಿಸಿದ್ದನು. ಮುಂದೆ ಶ್ರೀಪಾದರಾಯರ ಅನುಜ್ಞೆಯ ಮೇರೆಗೆ ಮುಳುಗಬಾಗಿಲಿನಲ್ಲಿ ಗುರುಸೇವಾನಿರತರಾಗಿದ್ದ ವ್ಯಾಸರಾಯರು ಸಾಳುವ ನರಸಿಂಹನ ರಾಜಧಾನಿಯಾಗಿದ್ದ ಚಂದ್ರಗಿರಿಗೆ ಪ್ರಯಾಣಮಾಡಿದರು. ಅಲ್ಲಿ ನರಸಿಂಹಭೂಪತಿಯಿಂದ ಇವರಿಗೆ ವಿಜೃಂಭಣೆಯ ವೈಭವದ ಸ್ವಾಗತವು ಕಾದಿತ್ತು. ಚಂದ್ರಗಿರಿಯಲ್ಲಿ ವ್ಯಾಸತೀರ್ಥರು ಬೀಡು ಬಿಟ್ಟ ಅವಧಿಯಲ್ಲಿ ರಾಜನು ಸ್ವಾಮಿಗಳ ಉಪದೇಶವನ್ನು ಪಡೆದು ಧನ್ಯನಾಗುತ್ತಿದ್ದನು. ರಾಜಪರಿವಾರದವರೆಲ್ಲರೂ ಗುರುದರ್ಶನದಿಂದ ಪುನೀತರಾಗುತ್ತಿದ್ದರು.

ಸಾಳುವ ನರಸಿಂಹನು 1493ರಲ್ಲಿ ಕಾಲವಾದ ನಂತರ ಅವನ ಮಗ ತಮ್ಮರಾಯನು ಪಟ್ಟಕ್ಕೆ ಬಂದನು. ವ್ಯಾಸರಾಯರು ತಿರುಪತಿಯ ಪೂಜಾನಿಮಿತ್ತವಾಗಿಯೂ ಹೊಸತಾಗಿ ಸಿಂಹಾಸನಾರೂಢನಾಗಿದ್ದ ರಾಜಕುಮಾರನ ನಿಮಿತ್ತವಾಗಿಯೂ ರಕ್ಷಕರಾಗಿ ಚಂದ್ರಗಿರಿಯಲ್ಲಿರಬೇಕಾಗಿತ್ತು. ಮುಂದೆ ರಾಜಮನೆತನದವರು ರಾಜಧಾನಿಯನ್ನು ಚಂದ್ರಗಿರಿಯಿಂದ ವಿಜಯನಗರಕ್ಕೆ ಸ್ಥಳಾಂತರಿಸಿದರು. 1498ರಲ್ಲಿ ವ್ಯಾಸರಾಯರು ತಿರುಪತಿಯ ಅರ್ಚನ ವ್ಯವಸ್ಥೆಯನ್ನು ಕ್ರಮಗೊಳಿಸಿ ವಿಜಯನಗರಕ್ಕೆ ವಿಜಯ ಮಾಡಿದರು. ಅಲ್ಪ ವಯಸ್ಕನಾದ ತಮ್ಮರಾಯನ ಹೆಸರಿನಲ್ಲಿ ಆತನ ಆಪ್ತಮಿತ್ರನಾಗಿದ್ದ ನರಸಬಲ್ಲಾಳನು ರಾಜ್ಯಭಾರ ನೋಡಿಕೊಳ್ಳುತ್ತಿದ್ದನು. ನರಸನಾಯಕನು ಸ್ವಾಮಿಗಳಿಗೆ ಮುದ್ರಾಸನ ಮರ್ಯಾದೆಯನ್ನು ಸಲ್ಲಿಸಿದನೆಂದು ತಿಳಿಯುತ್ತದೆ. "ಈ ಮುದ್ರಾಸನವೆಂದರೆ ವಿಜಯನಗರದ ಅರಸರು ರಾಜಕಾರಣಗಳನ್ನು ನಿರ್ಣಯಿಸಿ

ಆಜ್ಞಾಪತ್ರಗಳನ್ನು ಬರೆಯಿಸುವ ಸಿಂಹಾಸನಕ್ಕೆ ಎರಡನೆಯ ತರಗತಿಯ ಆಸನ." (ಶ್ರೀ ಕರ್ಣಾಟಕ ಭಕ್ತ ವಿಜಯ ಪುಟ - 81) ಮುದ್ರಾಸನಸ್ಥರಾದ ವ್ಯಾಸರಾಯರನ್ನು ಪೂಜಿಸಿದ ನರಸನಾಯಕನು ಬಾದರಾಯಣರನ್ನು ಪೂಜಿಸಿದ ಯುಧಿಷ್ಠಿರನಂತೆ ಕಂಡರಂತೆ.

ವ್ಯಾಸರಾಯರ ಮತ್ತು ವಿಜಯನಗರ ರಾಜ್ಯದ ಸಂಬಂಧದಲ್ಲಿ ವ್ಯಾಸರಾಯರು ವಿಜಯನಗರದ ಚಕ್ರತೀರ್ಥದ ಎದುರಿಗೆ ಯಂತ್ರೋದ್ಧಾರಕ ಮಾರುತಿಯ ಪ್ರತಿಷ್ಠಾಪನೆ ಮಾಡಿದ ಕಥೆಯು ಭಕ್ತಿಯ ನವಿರೇಳಿಸುವಂತಹದಿದೆ. ವ್ಯಾಸರಾಯರು ಈ ದೇವಸ್ಥಾನವನ್ನು ನಿರ್ಮಿಸಿ ಮೂರ್ತಿ ಪ್ರತಿಷ್ಠಾಪನೆಯನ್ನು ಮಾಡುವುದಕ್ಕೆ ಮುಂಚೆ ಇದೇ ಸ್ಥಳದಲ್ಲಿ ಪ್ರಾತಃಸ್ನಾನಮಾಡಿ ಜಪಕ್ಕೆ ಕುಳಿತಾಗಲೆಲ್ಲ ಮಾರುತಿಯ ದರ್ಶನ ಆಗುತ್ತಿರಲಿಲ್ಲ. ಇದರ ರಹಸ್ಯವನ್ನು ತಿಳಿಯಬೇಕೆಂದು ಸ್ವಾಮಿಗಳು ಅಂಜನಾಸುತನ ಸ್ತೋತ್ರವನ್ನು ಮಾಡಿದರು :

ನೀನೆ ವರಗುರು ಮುಖ್ಯಪ್ರಾಣಾ ।
ನಿರಂತರವು ನಂಬಿದನು ನಿಖಿಲ ಗುಣ ಪೂರ್ಣ ॥
ಜಾಣ ಕೋಮಲೆ ಭಾರತೀಶ ।
ನಿಖಿಲ ಪ್ರಾಣಿಗಳ ಹೃದಯದಲಿ ವಾಸಾ ಸುರೇಶ ॥
ವಾತಾಸುತನಾಗಿ ರಘು । ನಾಥಾ ಪ್ರಿಯದೂತ ಬಲು ।
ಯೂಥಲಂಕೆಯ ಪೊಕ್ಕು । ಖ್ಯಾತಿಯನೆ ಪಡೆದೇ ॥
ಸೀತೆಗುಂಗುರವಿತ್ತು । ವೀತಿಹೋತ್ರಗೆ ಪುರವ ।
ಪ್ರೀತ್ಯೆನಿಸಿದಾತ ದಿತಿ । ಜಾತರಿಗೆ ಭೀತಿಕರ ॥
ಲಂಡ ಕೀಚಕಬಕರ । ಮುಂಡೆಯನು ಒಡದು ಉ ।
ದ್ದಂಡ ಮಗಧಾಧಿಪನ ದಂಡವನು ಸೀಳಿ ॥
ಭಂಡ ಕೌರವರ ಶಿರ । ಚೆಂಡಾಡಿ ಪ್ರಬಲ ರಣ ।
ಮಂಡಲದಿ ಚಂಡ ರಿಪು ಪಂಡುಗಳ ಖಂಡಿಸಿದೆ ॥
ಸಂಗದಲಿ ಮಧ್ವಮತ । ದಂಗವನು ಏರ್ಪಡಿಸಿ ।
ಕಂಗೆಟ್ಟ ಕುಮತ ದುಸ್ಸಂಗಗಳನಳಿದು ॥
ಗಂಗೆಪಿತ ಕೃಷ್ಣಪದ । ಭೃಂಗ ಮೂಜಗದೊಳಗೆ ।
ತುಂಗಭವಭಂಗ ದಯಾಪಾಂಗ ಯತಿಪುಂಗವರ ॥

ಹೀಗೆ ಸ್ತೋತ್ರ ಮಾಡಿದ ರಾತ್ರಿ ಮಾರುತಿಯು ಮಧ್ವಾಚಾರ್ಯರ ರೂಪದಲ್ಲಿ

ಕಾಣಿಸಿಕೊಂಡು ಬರಿ ಸ್ತೋತ್ರ ಮಾಡಿದರೆ ಸಾಲದು ನನ್ನ ಮೂರ್ತಿಯ ಪ್ರತಿಷ್ಠಾಪನೆ ಮಾಡು ಎಂದು ಆದೇಶ ನೀಡಿದಂತಾಯಿತು. ಆ ಮೇರೆಗೆ ಸ್ವಾಮಿಗಳು ಮರುದಿನ ಬೆಳಗ್ಗೆ ಚಕ್ರತೀರ್ಥದಲ್ಲಿ ಸ್ನಾನ ಮಾಡಿ ತಮ್ಮ ಆಹ್ನಿಕಾದಿಗಳನ್ನು ಮುಗಿಸಿ ಮಾರುತಿಯ ಆಕೃತಿಯನ್ನು ಅಂಗಾರದಿಂದ ಸಮೀಪದ ಒಂದು ಬಂಡೆಗಲ್ಲ ಮೇಲೆ ಬರೆಯಲಾಗಿ ಚಿತ್ರಿತ ಆಕಾರವು ಸಾಕಾರ ರೂಪ ತಾಳಿ ಅದೃಶ್ಯವಾಯಿತಂತೆ. ಸ್ವಾಮಿಗಳು ಮತ್ತೆ ಬರೆದರು. ಆಕೃತಿಯು ಸಾಕಾರ ರೂಪ ತಾಳಿ ಮತ್ತೆ ಅದೃಶ್ಯವಾಯಿತು. ಆಮೇಲೆ ಸ್ವಾಮಿಗಳು ಕೊನೆಯದಾಗಿ ಮತ್ತೊಮ್ಮೆ ಪ್ರಾಣದೇವರ ಆಕೃತಿಯನ್ನು ಬರೆದು ಈ ಸಲ ಯಂತ್ರದಿಂದ ದಿಗ್ಬಂಧನ ಮಾಡಿ ಅನಂತರ ಮೂರ್ತಿಗೆ ದ್ವಾದಶನಾಮ ತಿಲಕಗಳನ್ನಿಟ್ಟರು. ಈ ಸಲ ಮಾತ್ರ ಆಕಾರವು ಸಾಕಾರವಾಗಿ ಅದೃಶ್ಯವಾಗಲಿಲ್ಲ. ಸ್ವಾಮಿಗಳು ಸಂತುಷ್ಟರಾದರು. ಅಂದೇ ಪ್ರಾಣದೇವರ ಪ್ರಾಣ ಪ್ರತಿಷ್ಠೆ ನಡೆಯಿತು. ವಿಜಯ ನಗರದ ಅರಸು ತಮ್ಮರಾಯನು ದೇವಸ್ಥಾನವನ್ನೂ ಗೋಪುರವನ್ನೂ ಕಟ್ಟಿಸಿ ಕೊಟ್ಟನು. ಯಂತ್ರೋದ್ಧಾರಕನ ಸ್ಥಾನವು ಜಾಗೃತ ಸ್ಥಾನವೆನಿಸಿತು. ಭಕ್ತರನ್ನು ತಂಡ ತಂಡವಾಗಿ ಆಕರ್ಷಿಸಿತು. ಇಂದಿಗೂ ವ್ಯಾಸರಾಯರು ತಮ್ಮ ತಪಃಶಕ್ತಿಯನ್ನು ಎರಕಹೊಯ್ದು ಎಚ್ಚರಿಸಿದ ಯಂತ್ರೋದ್ಧಾರಕ ಪ್ರಾಣದೇವರು ಜಾಗೃತ ಕೇಂದ್ರವಾಗಿದೆ. ಈ ಸಂಗತಿ ಜರುಗಿದುದು ಶಾಲಿವಾಹನ ಶಕ 1422ನೆಯ ರೌದ್ರಿ ಸಂವತ್ಸರದಲ್ಲಿ, ಕ್ರಿ. ಶ. 1500. ಇದೊಂದೆ ಸಂವತ್ಸರದಲ್ಲಿ ವ್ಯಾಸತೀರ್ಥರು 732 ಪ್ರಾಣದೇವರ ಮೂರ್ತಿಗಳನ್ನು ಪ್ರತಿಷ್ಠಾಪನೆ ಮಾಡಿದರೆಂದು ತಿಳಿಯುತ್ತದೆ.

ವ್ಯಾಸರಾಯರು ತಮ್ಮ ಕೀರ್ತನೆಗಳಿಗೆ ಶ್ರೀಕೃಷ್ಣ ಎಂಬ ಅಂಕಿತವನ್ನು ಇಟ್ಟಿದ್ದಾರೆ. ಇವರು ಸಾವಿರಾರು ಕೀರ್ತನೆಗಳನ್ನು ರಚಿಸಿದ್ದಾರೆಂಬ ಪ್ರತೀತಿ ಇದ್ದರೂ 100 ರಷ್ಟಾದರೂ ಸಂಖ್ಯೆಯಲ್ಲಿ ಅವು ಉಪಲಬ್ಧವಾಗಿರುವುದಿಲ್ಲ. ಮಾದರಿಗಾಗಿ ಈ ಒಂದು ಕೀರ್ತನೆಯನ್ನು ನೋಡಬಹುದು :

ಅಂತರಂಗದಲ್ಲಿ । ಹರಿಯ ಕಾಣದವ । ಹುಟ್ಟು ಕುರುಡನೋ ॥
ಸಂತತ ಶ್ರೀಕೃಷ್ಣ ಚರಿತೆ ಕೇಳದವ । ಜಡಮತಿ ಕಿವುಡನೋ । ಎಂದೆಂದಿಗು ॥
ಕುರುವೀರಸಖನಾದ । ಕೃಷ್ಣನ ಮುಂದೆ । ಕುಣಿಯದವನೆ ಕುಂಟನೋ ।
ನರಹರಿಚರಣೋದಕ । ಧರಿಸದ ಶಿರ । ನಾಯುಂಡ ಹೆಂಚು ಕಣೋ ॥
ಹರುಷದಿಂದಲಿ ನರಹರಿಯ ಪೂಜೆಯ ಮಾಡದವನೆ ಕೈ ಮುರುಕನೋ ।
ಸುರವರ್ಯ ಕೃಷ್ಣಪ್ರಸಾದವಲ್ಲದ ಊಟ । ಸೂಕರ ಭೋಜನವೋ । ಎಂದೆಂದಿಗು

ಅಮರೇಶ ಕೃಷ್ಣಗರ್ಪಿತವಲ್ಲದ ಕರ್ಮ । ಅಸತಿಯ ವ್ರತನೇಮವೋ ।
ರಮೆಯರಸಗೆ ಪ್ರೀತಿಯಿಲ್ಲದ ವಿತರಣೆ । ರಂಡೆ ಕೊರಳ ಸೂತ್ರವೋ ॥

ಕಮಲನಾಭನ ಪಾಡಿಪೊಗಳದ ಸಂಗೀತ । ಗಾರ್ಧಪರೋದನವೋ ।
ಮಮತೆಯಿಂದಲಿ ಕೇಶವಗೆ ನಮಸ್ಕಾರ । ಮಾಡದವನೆ ಮೃಗವೋ । ಎಂದೆಂದಿಗು

ಭಗವದ್ಗೀತೆಯನ್ನು ಬಳಿಕೆಯ ಕನ್ನಡದಲ್ಲಿ ಒಂದು ವಿಶಿಷ್ಟ ಛಂದೋಶೈಲಿಯ ವೃತ್ತನಾಮದಲ್ಲಿ ರಚಿಸಿರುವ ರೀತಿಯು ಬಹಳಸೊಗಸಾಗಿದೆ. ಶ್ರೀಕೃಷ್ಣನ ಗೀತೋಪದೇಶವು ಮನೆಮನೆಯ ಹೆಣ್ಣುಮಕ್ಕಳ ಬಾಯಲ್ಲಿ ಸುಲಭವಾಗಿ ನಿಲ್ಲುವಂತೆ ಇದನ್ನು ಸರಳವಾಗಿ ರಚಿಸಿರುವುದೆ ಈ ಗೀತದ ಮೇಲ್ಮೆಯಾಗಿದೆ. ಮೊದಲು ಹಾಡಿನ ಪಲ್ಲವಿ ಆಮೇಲೆ ವೃತ್ತಛಂದಸ್ಸಿನ ಶ್ಲೋಕ, ಪದ, ಆದಾದ ಮೇಲೆ ಶ್ಲೋಕ ಮತ್ತೆ ಪದ. ಹೀಗೆ ಒಂದನ್ನೊಂದು ಅನುಸರಿಸಿಕೊಂಡುಹೋಗುತ್ತವೆ. (ಅನುಬಂಧ 'ಕ' 6 ನೋಡಿರಿ)

ಕೃಷ್ಣದೇವರಾಯನ ಮರಣವು ಸುಮಾರು 1529ರಲ್ಲಿ ಸಂಭವಿಸಿತು. ವಿರಕ್ತರಾಗಿಯೂ ವ್ಯಾಸರಾಯರಿಗೆ ರಾಜನ ಮರಣವು ಮನಸ್ಸಿನಲ್ಲಿ ಕಲ್ಲೋಲವನ್ನು ಉಂಟುಮಾಡಿತು. ಕೃಷ್ಣದೇವರಾಯನ ತರುವಾಯ ಅಚ್ಯುತರಾಯನು ಪಟ್ಟಕ್ಕೆ ಬಂದನು. ಆದರೂ ವ್ಯಾಸತೀರ್ಥರಿಗೆ ಲೌಕಿಕದ ಬಗ್ಗೆ ಗಮನ ಹರಿಯಲಿಲ್ಲ. ಕೃಷ್ಣದೇವರಾಯನ ಅಳಿಯ ರಾಮರಾಯನು ದ್ಯೂತಸಂಗಿಯೂ, ವಿಷಯಲಂಪಟನೂ ಆಗಿದ್ದುದು ವ್ಯಾಸತೀರ್ಥರಿಗೆ ಮನಸ್ಸು ಮುದುರಿಕೊಳ್ಳಲು ವಿಶೇಷ ಕಾರಣವಾಗಿದ್ದಿರಬೇಕು. ಶಿಷ್ಯರಾದ ಪುರಂದರದಾಸ, ಕನಕದಾಸರ ಸಹವಾಸದಲ್ಲಿ ಒಂದಿಷ್ಟು ಸಮಾಧಾನವನ್ನು ಪಡೆದರು. ಈ ಸಂದರ್ಭದಲ್ಲಿ ಎಂದರೆ ಹರಿದಾಸತ್ರಯರು ಏಕತ್ರ ಮಿಲಿತರಾದ ಸಂದರ್ಭದಲ್ಲಿ ವ್ಯಾಸತೀರ್ಥರು ಈ ಕೆಳಗಿನ ಕೀರ್ತನೆಯನ್ನು ರಚಿಸಿರಬೇಕೆಂದು ತೋರುತ್ತದೆ. ಹರಿದಾಸಸಂಘಕ್ಕಿಂತ ಯಾವ ಅರಸೊತ್ತಿಗೆಯೂ ಹೆಚ್ಚಿನದಲ್ಲ, ಇಹದ ಬಗ್ಗೆ ಅವರ ಮನಸ್ಸಿನಲ್ಲಿ ಮೂಡಿದ್ದ ಜಿಗುಪ್ಸೆ ಇಲ್ಲಿ ಒಡೆದು ಕಾಣುತ್ತದೆ.

ಹರಿದಾಸರ ಸಂಗಕೆ ಸರಿಯುಂಟೆ । ಗುರು
ಕರುಣಕೆ ಇನ್ನು ಪಡಿಯುಂಟೆ ದೇವ

ದಾವಾನಲವ ತಪ್ಪಿಸಿ ಕಾಡಾನೆಯ । ದೇವಗಂಗೆಗೆ ತಂದು ಹೊಗಿಸಿದಂತೆ ।
ಆವರಿಸುವ ಷಡ್ವರ್ಗ ತಪ್ಪಿಸಿ । ಶ್ರೀ । ವರನ ಕರುಣಾರಸದಿ ತೋಯಿಸುವ ।

ಕಂದಿ ಬೇಸಗೆಯಲ್ಲಿ ನೊಂದ ಚಕೋರಕ್ಕೆ । ಇಂದುಬಿಂಬದಿ ತಂದು ಹೊಗಿಸಿದಂತೆ ।
ಕುಂದದೆ ಮಮತೆಯನೊಂದಿದೆ ಎನ್ನ । ಗೋವಿಂದನ ಪಾದ ಸನ್ನಿಧಿಯ ಸೇರಿಸುವ॥

ಬಲೆಯ ಹಾರಿದ ಎಳ ಹುಲ್ಲೆ ಮರಗಳಿಗೆ । ಬಲುಮೆಯಿಂದ ತಾಯ ತೋರಿಸಿದಂತೆ ।
ಹೊಲೆ ಇಂದ್ರಿಯಗಳ ನೆರೆಯ ಬಿಡಿಸಿ ಎನ್ನ । ನಳಿನನಾಭನ ಸನ್ನಿಧಿಗೆ ಸೇರಿಸುವ ॥

ಕುರುಡಗೆ ನಯನಾಂಜದಿಂದ ಕಣ್ಣಿತ್ತು । ಪರಿಪರಿ ನವನಿಧಿಗಳನಿತ್ತಂತೆ ।
ಪರಮ ಮೂಢನಾದೆನಗೆ ಜ್ಞಾನವನಿತ್ತು । ನರಹರಿ ಪಾದಸಂದರುಶನವೀವ ॥

ತಡೆಮೀರಿ ಹರಿಯುವ ತೊರೆಯಲ್ಲಿ ಪೋಪನ । ಪಿಡಿದೆತ್ತಿ ದಡಕೆ ಸೇರಿಸಿದಂತೆ ।
ಕಡಿಗೆಟ್ಟು ಸಂಸೃತಿಯೊಳಗೆ ಸಿಕ್ಕಿದ್ದನ್ನ । ಬಿಡದೆ ಶ್ರೀಕೃಷ್ಣನಂಘ್ರಿಗಳ ಸೇರಿಸುವ ॥

ಈ ಸಂಸಾರದ ಕಷ್ಟಗಳಲ್ಲಿ ಸಿಲುಕಿ ಪರಮಮೂಢನಾದ ಭಕ್ತನಿಗೆ ಜ್ಞಾನವನಿತ್ತು ನರಹರಿಯ ಪಾದ ಸಂದರುಶನ ದೊರಕುವಂತಾಗಬೇಕಾದರೆ ಹರಿದಾಸರ ಸಂಗ ಬೇಕು ಎಂದು ಇದರಲ್ಲಿ ಸತ್ಸಂಗದ ಮಹತ್ವವನ್ನು ಕೊಂಡಾಡಿದ್ದಾರೆ. ದೇಹಶಕ್ತಿ ಕುಂದಿದಂತೆಲ್ಲ ವ್ಯಾಸರಾಯರು ಶಿಷ್ಯ ಪುರಂದರದಾಸರೊಡನೆ ಭಗವಧ್ಯಾನದಲ್ಲಿಯೆ ಕಾಲ ಯಾಪನೆ ಮಾಡತೊಡಗಿದರು. ತನ್ನ ಹೃದಯಮಂಟಪದಲ್ಲಿರುವ ಪರಮಾತ್ಮನ ಬಿಂಬವನ್ನೆ ಪೂಜಿಸುವೆ ಎಂಬ ಭಾವನೆಯನ್ನು ಈ ಕೀರ್ತನೆಯಲ್ಲಿ ಮೂಡಿಸಿದ್ದಾರೆ.

ಎನ್ನ ಬಿಂಬ ಮೂರುತಿಯ ಪೂಜಿಸುವೆ ನಾನು ।
ಮನ ಮುಟ್ಟಿ ಅನುದಿನದಿ ಮರೆಯುವೇ ಜನರೇ ॥

ಗಾತ್ರವೇ ಮಂದಿರ । ಹೃದಯವೇ ಮಂಟಪ ।
ನೇತ್ರವೇ ಮಹದೀಪ । ಹಸ್ತಚಾಮರವು ।
ಯಾತ್ರೆ ಪ್ರದಕ್ಷಿಣೆ । ಶಯನ ನಮಸ್ಕಾರ ।
ಶಾಸ್ತ್ರ ಮಾತುಗಳೆಲ್ಲ ಮಂತ್ರಂಗಳು ॥

ಎನ್ನ ಸ್ವರೂಪವೆಂಬುದೆ ರನ್ನಗನ್ನಡಿ ।
ಎನ್ನ ಮನೋವೃತ್ತಿಯೆಂಬುದೇ ಛತ್ರಿಕೆ ।
ಇನ್ನು ನುಡಿವ ಹರಿನಾಮಾಮೃತವೆ ತೀರ್ಥ ।
ಎನ್ನ ಮನವೆಂಬುದೆ ಸಿಂಹಾಸನ ॥

ಅನ್ಯದೇವತೆಯಾಕೆ । ಅನ್ಯ ಪ್ರತಿಮೆಯಾಕೆ ।
ಅನ್ಯವಾದ ಮಂತ್ರತಂತ್ರವೇಕೆ ।
ಎನ್ನಲ್ಲಿ ಭರಿತ ಸಾದನೆಗಳು ಇರುತಿರಲು ।
ಚೆನ್ನಾಗಿ ಶ್ರೀಕೃಷ್ಣಸ್ವಾಮಿಯ ಪೂಜಿಸುವೆ ॥

ವ್ಯಾಸತೀರ್ಥರು ಶಾಂತಸ್ವಭಾವದವರು, ಕ್ಷಮಾಶೀಲರು. ಅಜ್ಞರನ್ನು ಪಾಪಿಗಳನ್ನು ಕಂಡರೆ ಅವರ ಬಗ್ಗೆ ಕರುಣೆ, ಸಹಾನುಭೂತಿ ಉಳ್ಳವರು. 'ಅಪಿಚೇತ್ ಸುದುರಾಚರೊ ಭಜತೇ ಮಾಮನನ್ಯಭಾಕ್ ಸಾಧುರೇವ ಸಮಂತವ್ಯಃ ಸಮ್ಯಕ್

ವ್ಯವಸಿತೋ ಹಿ ಸಃ' ಎಂದು ಗೀತೆಯಲ್ಲಿ ಹೇಳುವಂತೆ ಒಂದು ಉಗಾಭೋಗದಲ್ಲಿ ಹೀಗೆ ಹೇಳುತ್ತಾರೆ :

ಜಾರತ್ವವನು ಮಾಡಿದ ಪಾಪಗಳಿಗೆಲ್ಲ
ಗೋಪೀಜನಜಾರನೆಂದರೆ ಸಾಲದೆ ?
ಚೋರತ್ವವನು ಮಾಡಿದ ಪಾಪಗಳಿಗೆಲ್ಲ
ನವನೀತಚೋರನೆಂದರೆ ಸಾಲದೆ ?
ಕ್ರೂರತ್ವವನು ಮಾಡಿದ ಪಾಪಗಳಿಗೆಲ್ಲ
ಮಾವನ್ನ ಕೊಂದವನೆಂದರೆ ಸಾಲದೆ ?
ಪ್ರತಿದಿವಸ ಮಾಡಿದ ಪಾಪಂಗಳಿಗೆ ಎಲ್ಲಾ
ಪತಿತಪಾವನನೆಂದು ಕರೆದರೆ ಸಾಲದೆ ?
ಇಂತಪ್ಪ ಮಹಿಮೆಗಳೊಳೊಂದನ್ನಾದರೂ ಒಮ್ಮೆ
ಸಂತಸದಿ ನೆನೆಯೆ ಸಲಹುವ ನಮ್ಮ ಸಿರಿ ಕೃಷ್ಣ

ಕೊನೆಕೊನೆಯ ದಿನಗಳಲ್ಲಿ ವ್ಯಾಸರಾಯರು ಯಾವಾಗಲೂ ಸಮಾಧಿಯಲ್ಲಿಯೆ ಇರುತಿದ್ದರು. ಅಚ್ಯುತರಾಯನು ರಾಜಸಿಂಹಾಸನದಿಂದ ಇಳಿದು ಬಂದು ಚಕ್ರತೀರ್ಥ ದಲ್ಲಿ ಸಮಾಧಿಸ್ಥರಾಗಿರುತ್ತಿದ್ದ ಸ್ವಾಮಿಗಳ ದರ್ಶನವನ್ನು ಪಡೆದುಕೊಂಡು ಹೋಗು ತ್ತಿದ್ದನಂತೆ. ಪುರಂದರದಾಸ ಕನಕದಾಸರೊಂದಿಗೆ ಪಾರಲೌಕಿಕದ ಮಾತುಗಳನ್ನು ಆಡುತಿದ್ದರಂತೆ. 'ಕನಕಾ, ನಮ್ಮ ಗಂಟು ಕಟ್ಟಿದೆವು ನೀನೂ ಸವರಣೆ ಮಾಡಿಕೊ' ಎಂದು ಹೇಳುತ್ತಿದ್ದರಂತೆ. ಶಾಲಿವಾಹನ ಶಕೆ 1461ನೆಯ ವಿಳಂಬಿ ಸಂವತ್ಸರದ ಮಾಘ ಮಾಸ ವ್ಯಾಸರಾಯರು ವಿಜೃಂಭಣೆಯಿಂದ ಮಧ್ವನವಮಿಯನ್ನು ಜರುಗಿಸಿ ದರು. ಮುಂದೆ ಫಾಲ್ಗುಣ ಬಹುಳ ಚತುರ್ಥಿಯ ದಿನನಿತ್ಯದ ಪೂಜೆಪುರಸ್ಕಾರಗಳನ್ನು ಮುಗಿಸಿದ ಮೇಲೆ—

ಪುಟ್ಟಿ ನಾ ಭುಮಿಯೊಳಗೆ ಬಹುದಿನ ಕಳೆಯಿತೋ ।
ಪುಟ್ಟಿದಂತೆ ಮಾಡ ಸೃಷ್ಟೀಶ ಸಿರಿಕೃಷ್ಣ
ಪಟ್ಟಾಭಿರಾಮನೆ । ಪರಮ ಪುರುಷೋತ್ತಮನೆ ।
ಗಟ್ಯಾಗಿ ನಿನ್ನ ಪಾದಗಳ ನಂಬಿದೆ ದೇವ ॥

ಎಂದು ಕೀರ್ತನೆ ರಚಿಸುತ್ತ ಹಾಡುತ್ತಿರುವಾಗಲೇ ಪದ್ಮಾಸೀನರಾಗಿ "ನಾರಾಯಣ, ನಾರಾಯಣ, ನಾರಾಯಣ" ಎಂದು ಗಟ್ಟಿಯಾಗಿ ಭಗವಂತನ ಸ್ಮರಣೆಯನ್ನು ಮಾಡಿ ದರು. ಪಟಾತ್ತನೆ ಸಮಾಧಿಸ್ಥರಾದ ವ್ಯಾಸರಾಯರನ್ನು ಪುರಂದರದಾಸರು ನೋಡಿದರು. ಅವರ ಕಣ್ಣುಗಳಿಂದ ನೀರು ಧಾರಾಕಾರವಾಗಿ ಹರಿಯಿತು.

"ಚಿತ್ತೈಸಿದ ವ್ಯಾಸರಾಯ । ಚಿತ್ತಜನೈಯನ ಸಭೆಗೆ
ಮುಕ್ತ ಮುತ್ತೈದೆಯರೆಲ್ಲಾ । ರತ್ನದಾರುತಿಯತ್ತೆ
ಏರಿ ರತ್ನದ ತೇರ ಸೂರ್ಯ ಮಂಡಲಗೀರಿ । ಸಾರೆ ಸತ್ಯಲೋಕಕೆ ಸಂಭ್ರಮದೀ।
ಭೋರೆಂಬ ವಾದ್ಯ ಕಹಳೆ ಸುರಿವಾ ಹೂವಿ । ನಾರುತಿಯೆತಿದರ್ಮುಕ್ತಿ
ಕನ್ನೆಯರು" ॥

ಎಂದು ಹಾಡುತ್ತಾ ಕಂಬನಿ ಸುರಿಸಿದರು.

ಕ್ರಿ. ಶ. 22-4-1447 ರಿಂದ 8-3-1539 ರವರೆಗೆ ಎಂದರೆ 92 ವರ್ಷ ದೀರ್ಘಕಾಲ ವ್ಯಾಸರಾಯರು ಬಾಳಿದರು. ಈ ಅವಧಿಯಲ್ಲಿ ಮಠದ ಸಂಸ್ಥಾನಾಧಿಪತ್ಯ, ಧರ್ಮಗ್ರಂಥಗಳ ರಚನೆ, ಪರವಾದಿ ನಿಗ್ರಹ, ದ್ವೈತ ದಿಗ್ವಿಜಯ, ವಿಜಯನಗರ ಸಾಮ್ರಾಜ್ಯದ ಧರ್ಮರಕ್ಷಣೆ ಇವೆಲ್ಲ ಸತ್ಕಾರ್ಯಗಳನ್ನು ಜರುಗಿಸಿ ಲೋಕಕಲ್ಯಾಣಕಾರಕರಾಗಿಯೂ 'ದಾಸರ ದಾಸನು ನಾನು ದೋಷಿಗಳೆಗ್ರಸರ ನಾನು' ಎಂದು ನೈಚಾನುಸಂಧಾನ ಮಾಡಿಕೊಂಡು ನುಡಿಯುತ್ತಿದ್ದರಂತೆ.

ವಿಜಯನಗರದ ಇತಿಹಾಸದಲ್ಲಿ ಧರ್ಮಸಂಸ್ಥಾಪನೆಯ ಕಾರ್ಯವು ಜರುಗಿ ವಿದ್ಯಾರಣ್ಯರಿಂದ ವ್ಯಾಸತೀರ್ಥ, ಪುರಂದರದಾಸರವರೆಗೆ ಹರಿದಾಸರು ಆಗಿಹೋಗಿರುವುದು ಒಂದು ಮಹತ್ವದ ಸಂಗತಿ. "ವಿಜಯನಗರದ ಉನ್ನತಿಯ ಕಾಲದಲ್ಲಿ ಮಧ್ವಮತಸ್ಥ ಮಠಗಳ ಪ್ರಾಬಲ್ಯ ಹೆಚ್ಚಾಗಿದ್ದಂತೆ ಕಂಡುಬರುತ್ತದೆ. ವ್ಯಾಸರಾಯರು ವಿಜಯನಗರಸಾಮ್ರಾಜ್ಯರಕ್ಷಕರಾಗಿ ನಿಂತ ಮೇಲಂತೂ ವಿದ್ಯಾಸಿಂಹಾಸನಾಧಿಪತ್ಯವು ಬೇಡಬೇಡವೆಂದರೂ ಮಹಾರಾಜರ ಪದವಿಯಾಯಿತು. ಯತಿಗಳ ದರ್ಶನ ಭಾಷಣಗಳಲ್ಲಿ ಸಹ ರಾಜಪದ್ಧತಿಗಳು ರೂಢಿಗೆ ಬಂದವು." (ಶ್ರೀ ಕರ್ನಾಟಕ ಭಕ್ತ ವಿಜಯ, ಪುಟ-88) ಹೀಗೆ ಹರಿದಾಸ ಸಾಹಿತ್ಯದ ಊರ್ಜಿತವೂ ವಿಜಯನಗರದ ಅರಸೊತ್ತಿಗೆಯ ಊರ್ಜಿತವೂ ಏಕಕಾಲಕ್ಕೆ ಸಂಭವಿಸಿರುವುದು ದೈವೀಸಂಕಲ್ಪವಿದ್ದಂತೆ ತೋರುತ್ತದೆ.

## ವಾದಿರಾಜರು

ವ್ಯಾಸರಾಯರ ತರುವಾಯ ಉಲ್ಲೇಖಿಸ ಬಹುದಾದ ಹರಿದಾಸ ಸಾಹಿತ್ಯದ ಹಿರಿಯ ಹೆಸರು ಶ್ರೀ ವಾದಿರಾಜರು. ಇವರು ಶಾಲಿವಾಹನ ಶಕೆ 1402 ಶಾರ್ವರಿ ಸಂವತ್ಸರದಲ್ಲಿ ಎಂದರೆ ಕ್ರಿ. ಶ. 1480ರಲ್ಲಿ ಅವತರಿಸಿದರು. ಇವರು 120 ವರ್ಷ ಧೀರ್ಘಕಾಲ ಸಾರ್ಥಕವಾದ ಜೀವನವನ್ನು ನಡೆಸಿದರು. ಸಂಸ್ಕೃತ, ಕನ್ನಡ ಎರಡರಲ್ಲಿಯೂ ಗ್ರಂಥಗಳನ್ನು, ಕೀರ್ತನೆಗಳನ್ನು ರಚಿಸಿದರು. ಸಂಸ್ಕೃತ ಗ್ರಂಥಗಳಲ್ಲಿ 'ಯುಕ್ತಿಮಲ್ಲಿಕಾ', 'ತಾತ್ಪರ್ಯನಿರ್ಣಾಯ ಟೀಕಾ', 'ಸರಸಭಾರತೀ ವಿಲಾಸ'

ಮೊದಲಾದುವು ಪ್ರಮುಖವಾಗಿದೆ. ಕನ್ನಡ ಗ್ರಂಥಗಳಲ್ಲಿ 'ಕನ್ನಡ ತಾತ್ಪರ್ಯ ನಿರ್ಣಯ', 'ಸ್ವಪ್ನಗದ್ಯ' ಮೊದಲಾದುವಲ್ಲದೆ ಸಾವಿರಾರು ದೇವರ ನಾಮಗಳನ್ನು ರಚಿಸಿದ್ದಾರೆಂದು ಪ್ರತೀತಿ.

ಉಡುಪಿಯ ಅಷ್ಟಮಠಗಳಲ್ಲಿ ಒಂದಾದ ಸೋದೆಯ ಮಠಕ್ಕೆ ಮೂಲ ಪುರುಷರು ಶ್ರೀ ವಿಷ್ಣುತೀರ್ಥರು. ವಾದಿರಾಜರು ಈ ಮಠದ ಪರಂಪರೆಯಲ್ಲಿ 18ನೇ ಯವರು. ವಾದಿರಾಜರಿಗೆ ತಮ್ಮ ಹಿಂದಿನ ಶ್ರೀಗಳವರಾದ ಶ್ರೀ ವಾಗೀಶರು ಬಾಲ ಯತಿದೀಕ್ಷೆಯನ್ನು ನೀಡಿ ವಿದ್ಯೆಯನ್ನು ಅನುಗ್ರಹಿಸಿದರು. ಹಯಗ್ರೀವ ಮಂತ್ರೋಪ ದೇಶವನ್ನು ನೀಡಿ ಅದರ ಪ್ರಭಾವದಿಂದ ವಿದ್ಯಾಪ್ರೌಢಿಮೆಯೂ, ವಾಕ್ಪಟುತ್ವವೂ ದೊರೆಕೊಳ್ಳುವಂತೆ ಅನುಗ್ರಹಿಸಿದರು.

ವಾದಿರಾಜರ ಮೂಲ ಹೆಸರು ಭೂವರ. ಭೂವರನ ತಂದೆ-ತಾಯಿಗಳು ವಾಗೀಶರ ಆಶೀರ್ವಾದದಿಂದ ಪುತ್ರನನ್ನು ಪಡೆದ ಮೇಲೆ ಪೂರ್ವ ವಚನದಂತೆ ಮಗು ವನ್ನು ಶ್ರೀಗಳವರ ಆಶ್ರಯದಲ್ಲಿ ಇಟ್ಟರು. ಒಮ್ಮೆ ವಾಗೀಶರು ತಮ್ಮ ಸಕಲ ಶಿಷ್ಯರನ್ನು ಒಂದೆಡೆಗೆ ಸೇರಿಸಿ ಫಲವಸ್ತ್ರಗಳನ್ನು ರಾಶಿ ಹಾಕಿ ಬೇಕಾದವರು ತಗೆದು ಕೊಳ್ಳಬಹುದು ಎಂದು ಹೇಳಿದಾಗ ಸಹಪಾಠಿಗಳು ಆತುರತೆಯಿಂದ ಅಲ್ಲಿ ರಾಶಿ ಹಾಕಿದ ಫಲವಸ್ತ್ರಗಳನ್ನು ಎತ್ತಿಕೊಂಡರು. ವಾದಿರಾಜರು ಮಾತ್ರ ಯಾವುದನ್ನೂ ಮುಟ್ಟಲಿಲ್ಲ. ಎಲ್ಲರಿಗೂ ಆಶ್ಚರ್ಯ. ಇದಕ್ಕೆ ಕಾರಣ ? ಈ ಕೆಳಗಿನ ಉಗಾಭೋಗ.

ಗುರುಭಕುತಿ ಬೇಕು । ಹಿರಿಯರ ಕರುಣ ಬೇಕು । ಹರಿಕಥೆಗಳ ನಿತ್ಯ ಕೇಳು ತಿರಬೇಕು । ವಿರಕುತಿ ಬೇಕು । ವಿಷ್ಣುವಿನಾರಾಧನೆ ಬೇಕು । ವರ ಮಂತ್ರ ಜಪ ಬೇಕು । ತಪ ಬೇಕು ಪರಗತಿಗೆ । ಶಿರಿ ಹಯವದನನ ಪರಮಾನುಗ್ರಹ ಬೇಕು । ವಿಷಯನಿಗ್ರಹ ಬೇಕು

ಸಾಧಕನಿಗೆ ಬೇಕಾದುದು ವಿಷಯನಿಗ್ರಹ. ಲೋಲುಪತೆಯ ವಸ್ತುಗಳಲ್ಲ ಎಂಬುದು ಇದರಿಂದ ಸ್ಪಷ್ಟವಾಯಿತು. ತಮ್ಮ ಪೂರ್ವಾಶ್ರಮದಿಂದಲೆ ವಾದಿರಾಜರು ಉಗಾಭೋಗ, ಕೀರ್ತನೆಗಳನ್ನು ರಚಿಸಲು ಪ್ರಾರಂಭ ಮಾಡಿದರು. 'ಹಯವದನ' ಎಂಬುದು ಇವರ ಅಂಕಿತ. ಭೂವರನಿಗೆ ವಾಗೀಶ ಯತಿಗಳು ವಾದಿರಾಜತೀರ್ಥ ರೆಂದು ನಾಮಕರಣ ಮಾಡಿ ಸಂನ್ಯಾಶ್ರಮವನ್ನು ದಯಪಾಲಿಸಿದರು.

ವಾಗೀಶತೀರ್ಥರು ವೃಂದಾವನಸ್ಥರಾದ ಮೇಲೆ ವಾದಿರಾಜತೀರ್ಥರು ವಿಜಯ ನಗರದಲ್ಲಿ ಖ್ಯಾತಿವೆತ್ತ ರಾಜಮರ್ಯಾದಿತಯತಿಗಳಾದ ವ್ಯಾಸತೀರ್ಥರಡಿಯಲ್ಲಿ ಪ್ರೌಢವಿದ್ಯಾಭ್ಯಾಸ ಮಾಡಬೇಕೆಂದು ಅಪೇಕ್ಷಿಸಿ ವಿಜಯನಗರಕ್ಕೆ ನಡೆತಂದರು. ಅಲ್ಲಿ ಸಂನ್ಯಾಸಿಗಳದೆ ಒಂದು ವರ್ಗಮಾಡಿ ನ್ಯಾಯಸುಧಾ, ನ್ಯಾಯಾಮೃತ, ತರ್ಕತಾಂಡವ,

ಚಂದ್ರಿಕಾ ಎಂಬ ಪ್ರೌಢಗ್ರಂಥಗಳ ಅಧ್ಯಯನವನ್ನು ಮಾಡಿದರು. ವಾದಿರಾಜರ ವಿದ್ಯಾಪ್ರೌಢಿಮೆಯನ್ನು ಮೆಚ್ಚಿ ವಿಜಯನಗರದ ದೊರೆ ಕೃಷ್ಣದೇವರಾಯನು ಪ್ರಸಂಗಾಭರಣತೀರ್ಥ ಎಂಬ ಬಿರುದಿನಿಂದ ಅವರನ್ನು ಗೌರವಿಸಿದನು.

ವಾದಿರಾಜರು ತಮ್ಮ ಜೀವಿತ ಕಾಲದಲ್ಲಿ ಅನೇಕ ಪವಾಡಗಳನ್ನು ಉಂಟು ಮಾಡುವಂತಹ ಪ್ರಸಂಗಗಳು ಬಂದವು. ಅವರು ಪವಾಡಗಳನ್ನು ಮಾಡಬೇಕೆಂದು ಹೊರಟವರಲ್ಲ. ಆದರೆ ಯಾವ ಪರಿಸ್ಥಿತಿಯಲ್ಲಿ ಅವರು ಸಿಲುಕಿಕೊಳ್ಳುತ್ತಿದ್ದರೂ ಅದರಿಂದ ಮುಕ್ತರಾಗಲು ಪವಾಡಗಳನ್ನು ಎಸಗಬೇಕಾಯಿತು. ಈ ಪವಾಡಗಳು ಭಗವಂತನ ಪ್ರೇರಣೆಯ ಮೇರೆಗೆ ನಡೆಯುತ್ತಿದ್ದವೆಂಬುದನ್ನು ಮರೆಯಲಾಗದು. ಒಂದು ಸಂದರ್ಭದಲ್ಲಿ ವಾದಿರಾಜರು ಪುಣೆಯ ಚಾತುರ್ಮಾಸ ವಾಸ್ತವ್ಯವನ್ನು ಮುಗಿಸಿಕೊಂಡು ಪಂಡರಪುರಕ್ಕೆ ತೆರಳಿದಾಗ ಆಯುಧಪಾಣಿಗಳಾದ ಪಠಾಣರು ಎದುರಾದರು. ವಾದಿರಾಜರು ದೇಶಪರ್ಯಟನಕಾಲಕ್ಕೆ ಮಠದ ಖಜಾನೆ ಅನೇಕ ಸಹಸ್ರದ್ರವ್ಯ, ಬೆಲೆಯುಳ್ಳ ದೇವತಾಮೂರ್ತಿಗಳು ಇರುತ್ತಿದ್ದವು. ಸ್ವಾಮಿಗಳ ಕಾವಲಿನವರು ಪಠಾಣರನ್ನು ಕಂಡು ಅಂಜಿ ಓಡಿಹೋದರು. ಸ್ವಾಮಿಗಳ ಪ್ರಾಣಕ್ಕೇ ಗಂಡಾಂತರ ಒದಗಿತ್ತು. ಏಕಾಂಗಿಯಾಗಿದ್ದರೂ ವಾದಿರಾಜರು ಎದೆಗುಂದಲಿಲ್ಲ. ಸುಲಿಗೆಗಾರರನ್ನು ಬನ್ನಿರೆಂದು ಸ್ವಾಗತಿಸಿದರು. ಇವರ ಧೈರ್ಯಕ್ಕೆ ತುರುಷ್ಕರು ನಿಬ್ಬೆರಗಾದರು. ಮುಂದೆ ನಡೆದ ಪವಾಡ ಅದ್ಭುತ. ಖಡ್ಗಪಾಣಿಗಳಾದ ನೂರಾರು ಜನ ಕುದುರೆಯ ಸವಾರರು ಕಳ್ಳರನ್ನು ಸುತ್ತುಗಟ್ಟಿದರು. ಇದರಿಂದ ಕಳ್ಳರು ಕಂಗೆಟ್ಟು ಓಡಿಹೋದರು. ಕುದುರೆಯ ಮೇಲೆ ಬಂದವರು ವಿಜಯನಗರದ ಸೈನಿಕರೆಂದು ಭಯಗೊಂಡಿದ್ದರು. ತಿರುಗಿ ಕಳ್ಳರು ಸ್ವಾಮಿಗಳಿಗೇ ಶರಣು ಬಂದು ತಮಗೆ ಪ್ರಾಣದಾನ ನೀಡಬೇಕೆಂದು ಬೇಡಿಕೊಂಡರು. ಇದು ಭಗವಂತನ ಪವಾಡವೆಂದೆ ನಂಬಿ ವಾದಿರಾಜರು ಕಳ್ಳರಿಗೆ ಕೃಪೆ ತೋರಿದರು. ಇಷ್ಟೇ ಅಲ್ಲ ತಮ್ಮ ಸೇವಕರು ಓಡಿಹೋದುದರಿಂದ ಕಳ್ಳರ ಮೇಲೆಯೆ ತಮ್ಮ ಖಜಾನೆ ಪಲ್ಲಕ್ಕಿಗಳನ್ನು ಹೊರಿಸಿಕೊಂಡು ಪಂಡರಪುರಕ್ಕೆ ಬಂದರು.

ಉಡುಪಿಯ ಅಷ್ಟಮಠಗಳಲ್ಲಿ ಎರಡೆರಡು ವರ್ಷಗಳ ಪರ್ಯಾಯ ಪದ್ಧತಿಯನ್ನು ರೂಢಿಗೆ ತಂದವರು ವಾದಿರಾಜರು. ಪೂಜಾಕಾಲದಲ್ಲಿ ಭಾಗವತ ಭಜನ ಪದ್ಧತಿಯನ್ನು ಎಲ್ಲ ಮಠಗಳಲ್ಲಿಯೂ ಆಚರಣೆಯಲ್ಲಿ ತಂದರು. ಇಂದಿಗೂ ಇದೇ ಪರಿಪಾಠ ನಡೆದುಕೊಂಡು ಬಂದಿದೆ. ಇಲ್ಲಿ ಮುಖ್ಯವಾಗಿ ವಾದಿರಾಜರ ಕೀರ್ತನೆಗಳನ್ನೆ ಹಾಡುತ್ತಾರೆ. ಇವುಗಳಲ್ಲಿ 'ಲಕ್ಷ್ಮೀನಾರಾಯಣ ಜಯಲಕ್ಷ್ಮೀನಾರಾಯಣ' ಎಂಬ ಕೀರ್ತನೆಯು ಮಹತ್ವದ್ದಾಗಿದೆ. 24 ನುಡಿಗಳ ಈ ಹಾಡಿನಲ್ಲಿ ಶ್ರೀಕೃಷ್ಣನ

ಬಾಲಲೀಲೆಗಳನ್ನು ಅತನ ದುಷ್ಟಸಂಹಾರಕ ಮತ್ತು ಶಿಷ್ಟ ಪರಿಪಾಲನ ಕಾರ್ಯಗಳನ್ನು ಬಣ್ಣಿಸಲಾಗಿದೆ. (ಅನುಬಂಧ 'ಕ' ನೋಡಿರಿ)

ವಾದಿರಾಜರು ಹಯಗ್ರೀವೋಪಾಸಕರಾಗಿದ್ದರು. ನಿತ್ಯವೂ ಪೂಜಾಕಾಲದಲ್ಲಿ ಒಂದು ಹರಿವಾಣದ ತುಂಬ ಕಡಲೆಯ ಹೂರಣ ಮಾಡಿಸಿ ಅದನ್ನು ತಮ್ಮ ತಲೆಯ ಮೇಲೆ ಧರಿಸಿ ಏಕಾಂತಸ್ಥಳದಲ್ಲಿ ಕುಳಿತು ಧ್ಯಾನ ಮಾಡುತ್ತಿದ್ದರು. ಪರಮಾತ್ಮನು ಶ್ವೇತಾಶ್ವರೂಪದಲ್ಲಿ ಕಾಣಿಸಿಕೊಂಡು ತನ್ನೆರಡೂ ಖುರಗಳನ್ನು ವಾದಿರಾಜರ ಹೆಗಲ ಮೇಲಿಟ್ಟು ಆ ಹರಿವಾಣದ ಹೂರಣವನ್ನು ಸ್ವೀಕರಿಸುತ್ತಿದ್ದನು. ಅದರಲ್ಲಿ ಹಯಗ್ರೀವ ಪ್ರಸಾದವೆಂದು ಅಶ್ವರೂಪೀ ಪರಮಾತ್ಮನು ಉಳಿಸಿದ ಅವಶೇಷವನ್ನು ವಾದಿರಾಜರು ಸ್ವೀಕರಿಸುತ್ತಿದ್ದರು. ಒಮ್ಮೆ ವಾದಿರಾಜರು ಉಡುಪಿಯಲ್ಲಿ ಪೂಜಿಸುತಿದ್ದ ಹಯಗ್ರೀವದ ಕುತ್ತಿಗೆಯಲ್ಲಿ ಸ್ವಲ್ಪ ಭಾಗವು ಹಸಿರು ಬಣ್ಣದಿಂದ ಕೂಡಿದುದನ್ನು ಕಂಡರು. ಇದರ ಕಾರಣ ದ್ವೇಷಿಗಳ ಅಸೂಯೆ. ಅವರ ವಿದ್ಯಾ ಪಾಂಡಿತ್ಯಕ್ಕೂ, ಭಕ್ತಿಪಾರಮ್ಯಕ್ಕೂ ಅಸಹನೆಯಿಂದ ವಿಷಕಾರುತ್ತಿದ್ದ ದ್ವೇಷಿಗಳು ಒಮ್ಮೆ ಭಗವತ್ಪ್ರಸಾದವಾದ ಹಯಗ್ರೀವದಲ್ಲಿ ವಿಷ ಮಿಶ್ರಣ ಮಾಡಿದರು. ಅಂದಿನ ಪ್ರಸಾದವನ್ನು ಸ್ವೀಕರಿಸಿದ ಹಯವದನನು ತನ್ನ ಭಕ್ತನಿಗೆ ಶೇಷಪ್ರಸಾದವನ್ನು ಉಳಿಸಿರಲಿಲ್ಲ. ಭಕ್ತನಿಗೆ ಖೇದವಾಗುತ್ತದೆ. "ಸ್ವಾಮಿ, ನನಗೇಕೆ ಪ್ರಸಾದವನ್ನು ಉಳಿಸಲಿಲ್ಲ ? ನಿನ್ನ ಕತ್ತಿನಲ್ಲಿ ಕಾಣುವ ಹಸಿರು ಏತರದು" ಎಂದು ಆರ್ತಭಾವದಿಂದ ಪ್ರಾರ್ಥಿಸಲಾಗಿ, ಸ್ವಾಮಿ ಹಯವದನ ಭಕ್ತನಿಗೆ ನಡೆದ ಸಂಗತಿಯನ್ನು ವಿವರಿಸುತ್ತ ವಿಷಪ್ರಾಶನದಿಂದುಟಾದ ಈ ಹಸಿರು ಅಳಿಯಲು 48 ದಿನಗಳು ಬೇಕೆಂದೂ ಅದುವರೆಗೆ ಗುಳ್ಳದಕಾಯಿಯ ಪಲ್ಲ್ಯೆಯ ನೈವೇದ್ಯವನ್ನು ಮಾಡಬೇಕೆಂದೂ ಆದೇಶಿಸಿದನು. ಈ ಗುಳ್ಳವನ್ನು ಸಮೀಪದ ಮಟ್ಟು ಎಂಬ ಗ್ರಾಮದಲ್ಲಿ ಅಲ್ಲಿಯ ಗ್ರಾಮಸ್ಥರಿಂದಲೇ ಅದನ್ನು ಬೆಳೆಯಿಸಿ ಕರ್ಮಭ್ರಷ್ಟರಾದ ಅವರನ್ನು ಪುನೀತಗೊಳಿಸುವ ಕಾರ್ಯ ಮಾಡಬೇಕೆಂದು ಆದೇಶಿಸಿದರು. ಆ ಮೇರೆಗೆ ವಾದಿರಾಜರು ಗುಳ್ಳದಕಾಯಿ ಬೆಳೆಯಿಸಿ ಹಯವದನನಿಗೆ ನಿವೇದಿಸುತ್ತ ಬಂದರು. ಇಂತಹ ಹಲವಾರು ಪವಾಡಗಳು ವಾದಿರಾಜರ ವಿಷಯದಲ್ಲಿ ನಿರೂಪಿತವಾಗಿವೆ. ಪ್ರಯಾಗ ಕ್ಷೇತ್ರದಲ್ಲಿ ವಾದಿರಾಜರು ವ್ಯಾಸೋಪಾಸನೆ ಮಾಡಿ ವ್ಯಾಸ ಭಗವಾನರ ಪ್ರತ್ಯಕ್ಷ ದರ್ಶನವನ್ನು ಪಡೆದು – "ಮಧ್ವಾಂತರ್ಗತ ವೇದವ್ಯಾಸ । ಕಾಯೋ । ಶುದ್ಧ ಮಾರುತಿಯ ಸರ್ವೇಶ ॥" ಎಂದು ಸ್ತೋತ್ರ ಮಾಡಿದರು. ಪ್ರತ್ಯಕ್ಷರಾದ ಬಾದರಾಯಣರು ವಾದಿರಾಜರನ್ನು ಬದರಿಯವರೆಗೂ ಕರೆದುಕೊಂಡು ಹೋಗಿ ಅಲ್ಲಿ ಶ್ರೀಮಧ್ವಾಚಾರ್ಯರ ದರ್ಶನವನ್ನು ಮಾಡಿಸಿದರಂತೆ. ವಾದಿರಾಜರು ತಮ್ಮ ಉಪಾಸನೆಯ ಫಲವಾಗಿ ರುಜುಪದಸ್ಥ ಸ್ಥಾನವನ್ನು ಪಡೆದ

ರೆಂದೂ ಮುಂದೆ ಈಗಿನ ವಾಯುದೇವರು ಬ್ರಹ್ಮಪದವಿಗೇರಿದ ಮೇಲೆ ವಾದಿರಾಜರು ವಾಯುಪದಕ್ಕೆ ಬರುವರೆಂದೂ ನಂಬುಗೆ.

ವಿಜಯದಾಸರು ವಾದಿರಾಜರನ್ನು ವಾಯುಪದಾರ್ಹರುಜುಗಳೆಂದು ತಮ್ಮ ಸುಳಾದಿಗಳಲ್ಲಿ ಕೊಂಡಾಡಿರುವರು. ಮಧ್ವಮತದ ಪ್ರಕಾರ ಬ್ರಹ್ಮಪದಾರ್ಹಜೀವರನ್ನು ರುಜುಪದಸ್ಥರು ಎಂದು ಕರೆಯುತ್ತಾರೆ. ವಾದಿರಾಜರು ಬದರಿಕಾಶ್ರಮದಿಂದಲೆ ತ್ರಿವಿಕ್ರಮಮೂರ್ತಿಯನ್ನು ಸಂಪಾದಿಸಿಕೊಂಡು ಬಂದು ಸೋದೆಯ ಮಠದಲ್ಲಿ ಪ್ರತಿಷ್ಠಾಪಿಸಿದ್ದಾರೆಂದೂ ಇಂದಿಗೂ ಆ ಮಠದಲ್ಲಿರುವುದು ಅದೇ ಮೂರ್ತಿಯೆಂದೂ ಪ್ರತೀತಿಯಿದೆ.

ಇಂದಿಗೂ ಧರ್ಮಸ್ಥಳದಲ್ಲಿ ಜಾತಿ–ಮತಗಳ ವಿಚಾರವಿಲ್ಲದೆ ರೀತಿಯನ್ನು ಮೀರದೆ ಅನ್ನದಾನಪದ್ಧತಿಯು ನಡೆದುಕೊಂಡು ಬಂದಿದೆಯಷ್ಟೇ. ಇದನ್ನು ಪ್ರತಿಷ್ಠಾಪಿಸಿದವರು ಶ್ರೀ ವಾದಿರಾಜರೆಂದೇ ಹೇಳುತ್ತಾರೆ. ಧರ್ಮಸ್ಥಳದ ಭೂತಕ್ಷೇತ್ರವನ್ನು ವಾದಿರಾಜರು ಮಂಜುನಾಥದೇವರ ಪರಮಪಾವನಕ್ಷೇತ್ರವನ್ನಾಗಿ ಮಾಡಿದರು. ಧರ್ಮಸ್ಥಳವು ಶಿವಕ್ಷೇತ್ರ. ಅಲ್ಲಿಯ ಧರ್ಮದರ್ಶಿಗಳು ಜೈನಮತಸ್ಥ ಮಹಂತರು. ಇದು ಈ ಅನ್ಯೋನ್ಯ ಮತಸಾಮರಸ್ಯವು ಧರ್ಮಸ್ಥಳದ ಒಂದು ವೈಶಿಷ್ಟ್ಯವಾಗಿರುವುದೂ ವಾದಿರಾಜರ ಪ್ರಭಾವದಿಂದಾಗಿ.

ವಾದಿರಾಜರು ಉಡುಪಿಯಲ್ಲಿದ್ದಾಗ ಮಹಾಭಾರತ ತಾತ್ಪರ್ಯನಿರ್ಣಯವನ್ನು ಕನ್ನಡ ವಚನಗಳನ್ನಾಗಿ ಬರೆದರು ಮತ್ತು ಮಧ್ವಾಚಾರ್ಯರ ಮೂಲ ಗ್ರಂಥಗಳನ್ನು ಕನ್ನಡ ಗೀತರೂಪವಾಗಿ ಅನುವಾದಿಸಿದರು. 'ವೈಕುಂಠ ವರ್ಣನೆ' ಎಂಬ ಗ್ರಂಥವನ್ನೂ ಇಲ್ಲಿಯೆ ರಚಿಸಿದರೆಂದೂ ತಿಳಿಯುತ್ತದೆ. ಇದರಲ್ಲಿ ಜಗತ್ತಿನ ಸೃಷ್ಟಿ, ಸ್ಥಿತಿ, ಲಯ, ಮೋಕ್ಷಗಳ ವಿವರಣೆಯನ್ನು ವಿವೇಚಿಸಿದ್ದಾರೆ. ಇದರಲ್ಲಿ ಭಾಗವತ, ಪಂಚರಾತ್ರಾಗಮ ಮತ್ತು ಸ್ಮೃತಿಗಳ ಪ್ರಮಾಣವನ್ನು ಅನುಸರಿಸಿ ಅವುಗಳನ್ನು ಕನ್ನಡ ನುಡಿಗಳನ್ನಾಗಿ ಮಾಡಿದ್ದಾರೆ. "ತತ್ತ್ವಸಾರದ ಸೊಬಗ ಧರೆಯೊಳು ಬಿತ್ತರಿಸಬೇಕೆನುತ ಮುನಿಕುಲ । ದತ್ತ ಶ್ರೀಗುರು ವಾದಿರಾಜನು ಶ್ರುತಿಪುರಾಣಗಳ॥ ಮೊತ್ತವನು ನೆರೆ ಮಥಿಸಿ ಮೇಲಣ । ಮುಕ್ತಿ ಸೃಷ್ಟಿ ಸ್ಥಿತಿ ಲಯಂಗಳ । ಅರ್ಥಿಯಲಿ ಬಣ್ಣಿಸಿದ ಕಥೆಯನು ಕೇಳಿ ಸಜ್ಜನರು."

ವಾದಿರಾಜರಿಗೆ ಒಬ್ಬ ತಮ್ಮನೂ ಇದ್ದ. ಕೆಲವು ಕಾಲದ ನಂತರ ಆತನಿಗೆ ಸಂನ್ಯಾಸ ಕೊಟ್ಟು 'ಸುರೋತ್ತಮತೀರ್ಥ' ಎಂದು ನಾಮಕರಣ ಮಾಡಿದರು. ಉಡುಪಿಯ ಪರ್ಯಾಯಕ್ಕೆ ಪುನರ್ವ್ಯವಸ್ಥೆಯನ್ನು ಏರ್ಪಡಿಸಿದ ವಾದಿರಾಜರು ನಾಲ್ಕು ಪರ್ಯಾಯಗಳನ್ನು ದಾಟಿ ಕೊನೆಯ ಪರ್ಯಾಯಕ್ಕೆ ತಮ್ಮ ಶಿಷ್ಯನನ್ನೇ ಪ್ರತಿನಿಧಿಯಾಗಿ ಪಟ್ಟಗಟ್ಟಿದರು. ಪರ್ಯಾಯಪೀಠದಲ್ಲಿದ್ದಾಗ

ಕಡಗೋಲು ಕೃಷ್ಣನ ಪೂಜಾಸೇವೆಯನ್ನು ನಡೆಸುತ್ತ ಮುಂದಿನ ಸರತಿ ಬರುವವರೆಗೆ ದೇಶಸಂಚಾರವನ್ನು ಕೈಗೊಳ್ಳುವ ರೂಢಿಯಿತ್ತು. ಇವರು ನಡೆಸಿದ ಪರ್ಯಾಯಗಳು 1548, 1564, 1580 ಮತ್ತು 1596 ಈ ವರ್ಷಗಳಲ್ಲಿ.

ಹೊಯ್ಸಳ ವಿಷ್ಣುವರ್ಧನನ ರಾಜಧಾನಿಯಾಗಿದ್ದ ಬೇಲೂರನ್ನು ಸಂದರ್ಶಿಸಿದ ವಾದಿರಾಜರು ವೇಲಾಪುರದ ಚೆನ್ನಿಗರಾಯನನ್ನು ಸ್ತೋತ್ರ ಮಾಡಿದರು. "ಬೇಗ ಬಾರೋ, ಬೇಗ ಬಾರೋ, ವೇಲಾಪುರದ ಚೆನ್ನ ಬೇಗ ಬಾರೋ" ಎಂದು ಹಾಡು ತ್ತಿದ್ದಾಗ ಜೊತೆಯಲ್ಲಿದ್ದ ವೈಕುಂಠದಾಸರು ಓಡಿ ಬಂದು ನರ್ತನ ಮಾಡಿದರಂತೆ. ವೇಲಾಪುರಿಯನ್ನು ಬಿಟ್ಟು ಪ್ರಯಾಣ ಮಾಡುವಾಗ ಕೇಶವಸ್ವಾಮಿಯ ಮೇಲೆ ಒಂದು ಮಂಗಳವನ್ನೂ ಹಾಡಿದರು. "ಆನಂದಮಯಗೆ ಚಿನ್ಮಯಗೆ ಶ್ರೀ ನಾರಾಯಣಗೆ ಆರತಿಯೆತ್ತಿರೆ" ಎಂದು ಮೊದಲಾಗುವ ಈ ಗೀತದಲ್ಲಿ ದಶಾವತಾರದ ವರ್ಣನೆ "ವೇದವ ತಂದು ಬೆಟ್ಟವ ಪೊತ್ತು ಧರಣೀಯ ಸಾಧಿಸಿ ಕಂಭದೊಳೊಡೆದವಗೆ। ಭೂದಾನವ ಬೇಡಿ ನೃಪರ ಸಂಪರಿಸಿದ ಆದಿಮೂರುತಿಗಾರತಿಯೆತ್ತಿರೆ" ಎಂದು ಸಂಕ್ಷಿಪ್ತ ದಲ್ಲಿಯೆ ಮಹಾವಿಷ್ಣುವಿನ ದಶಾವತಾರಗಳ ವರ್ಣನೆ ಬರುತ್ತದೆ.

ವಾದಿರಾಜರಷ್ಟು ದೀರ್ಘಕಾಲ ಪೀಠಾಧಿಪತ್ಯವನ್ನು ಇತರರಾರೂ ಮಾಡಲಿಲ್ಲ. ಅವರು ಎಷ್ಟೋ ಕಾಲ ಗೃಹಸ್ಥಾಶ್ರಮಿಯಾಗಿದ್ದು ಅನಂತರ ಸಂನ್ಯಾಸ ಸ್ವೀಕರಿಸಿದರು. ವಾದಿರಾಜರು ತಮ್ಮ ಕೊನೆಯ ದಿನಗಳನ್ನು ಸೋದೆಯಲ್ಲಿ ಕಳೆದರು. ಆಗ ಸೋದೆಯು ಅರಸಪ್ಪನಾಯಕನ ಅಳ್ವಿಕೆಗೆ ಒಳಪಟ್ಟಿತ್ತು. ಅರಸಪ್ಪನಾಯಕನು ಐಂದ್ರಜಾಲಿಕನಾದ ಒಬ್ಬ ಗುರುವಿನ ದುಷ್ಟಭಾವದಿಂದ ಮೊದಲಿಗೆ ಸ್ವಾಮಿಗಳಿಗೆ ಹಿಂಸೆ ಕೊಟ್ಟನು. ಮುಂದೆ ಪಶ್ಚಾತ್ತಾಪವಾಗಿ ಮಾಯೆಯಿಂದ ಮುಕ್ತನಾಗಿ ವಾದಿರಾಜರಿಗೆ ಶರಣು ಬಂದನು. ವಾದಿರಾಜರು ಆತನನ್ನು ಕ್ಷಮಿಸಿದರಷ್ಟೆ ಅಲ್ಲ, 108 ನುಡಿಗಳ ಲಕ್ಷ್ಮೀ ಶೋಭಾನೆಯನ್ನು ಹಾಡಿ ಪರಮಾತ್ಮನನ್ನು ಪ್ರಾರ್ಥಿಸಿ ರಾಜನ ಅಳಿಯನನ್ನು ರಕ್ಷಿಸಿದರು.

ಲಕ್ಷ್ಮೀ ಶೋಭಾನೆಯ ಒಂದೆರಡು ನುಡಿಗಳು ಹೀಗಿವೆ :

ಶೋಭನವೆನ್ನಿರೆ ಸುರರೊಳು ಸುಭಗನಿಗೆ ।
ಶೋಭನವೆನ್ನಿ ಸುರಪ್ರಿಯರಿಗೆ ।
ಶೋಭನವೆನ್ನಿ ತ್ರಿವಿಕ್ರಮರಾಯಗೆ ।
ಶೋಭನವೆನ್ನಿ ಸುಗುಣನಿಗೆ ॥ ಶೋಭಾನೆ ॥

ಲಕ್ಷ್ಮೀನಾರಾಯಣರ ಚರಣಕ್ಕೆ ಶರಣೆಂಬೆ ।
ಪಕ್ಷಿವಾಹನ್ನಗೆರಗುವೆ ।

ಪಕ್ಷಿವಾಹನನ್ನ ಗೆರಗುವೆನನುದಿನ ।
ರಕ್ಷಿಸಲಿ ನಮ್ಮ ವಧೂವರರ ॥

ಸ್ವಾದಿಯಲ್ಲಿ ಬದರಿಕಾಶ್ರಮದ ತ್ರಿವಿಕ್ರಮಮೂರ್ತಿಯನ್ನು ಪ್ರತಿಷ್ಠಾಪಿಸಿ ದೇವಸ್ಥಾನವನ್ನು ಕಟ್ಟಿಸಬೇಕೆಂಬ ವಾದಿರಾಜರು ಉತ್ಕಟ ಅಭಿಲಾಷೆಯಿಂದ ಶಾಲಿವಾಹನ ಶಕೆ 1504ರ ಚಿತ್ರಭಾನು ಸಂವತ್ಸರದ ವೈಶಾಖ ಶುದ್ಧ ಪೂರ್ಣಿಮೆಯಂದು ಸಂಕಲ್ಪಿಸಿದರು. ಇದಕ್ಕೆ ಅರಸಪ್ಪನಾಯಕನಿಂದ ನೆರವೂ ದೊರಕಿತು. ದೇವಸ್ಥಾನವನ್ನು ರಚಿಸುವಲ್ಲಿ ಎತ್ತಲಿಕ್ಕಾಗದ ಒಂದು ಶಿಲೆಯನ್ನು ಸ್ವತಃ ವಾದಿರಾಜರೆ ಮೇಲಕ್ಕೆ ಎತ್ತರಿಸಿದರಂತೆ. ಸೋದೆಯಲ್ಲಿ ಇಂದಿಗೂ ಆ ಶಿಲೆಯನ್ನು ತೋರಿಸುತ್ತಾರೆ. ದೇವಾಲಯದ ಉತ್ತರ ದಿಕ್ಕಿಗೆ ಧವಳ ಗಂಗೆಯೆಂಬ ದಿವ್ಯ ಸರೋವರವೂ ನಿರ್ಮಿತವಾಯಿತು.

ವಾದಿರಾಜರು ತಮ್ಮ ವೃಂದಾವನಸ್ಥಿತಿಯ ದಿನವನ್ನು ಎದುರು ನೋಡುತ್ತಿದ್ದಂತೆ ಈ ಕೆಳಗಿನ ಕೀರ್ತನೆಯಿಂದ ಗೊತ್ತಾಗುತ್ತದೆ. ಈ ಹೊತ್ತಿಗೆ ಅವರ ದೃಷ್ಟಿಯೂ ಮಂದವಾಗುತ್ತ ಬಂದಿದ್ದಿತು.

ಈಗಲೋ ಇನ್ನಾವಾಗಲೋ । ಈ ತನುವು ಪೋಗದಿರದು ॥
ಭೋಗದಾಸೆಯ ಬಿಡಿಸಯ್ಯ । ನಾಗಶಯನ ನಳಿನ ನಯನ ॥

ಎಂಭತ್ತು ನಾಲಕು ಲಕ್ಷ । ಯೋನಿಗಳಲ್ಲಿ ಜನಿಸಿ ।
ಅಂಬುಜಾಕ್ಷ ನೊಂದೆನಯ್ಯ । ಒಂದೆ ಮಾಡಿದಘದಿಂದ ।
ಕುಂಭೀಪಾಕ ಮೊದಲಾದ । ಕುತ್ಸಿತ ನರಕದಿ ಬಿದ್ದು ।
ಉಂಬ ದುಃಖವ ಬಿಡಿಸಯ್ಯ । ಉದಧಿಸದ್ಮನ ಉರಗಶಯನ ॥

ಹೊನ್ನುಮಣ್ಣಿನಾಶೆ ಬಿಡದೋ । ಪುಣ್ಯಕೀ ಮನ ಒಡಂಬಡದೋ ।
ಎನ್ನದೆಂಬೋ ಮಮತೆ ತಗ್ಗದೂ । ಧನ್ಯ ಜನಕೇ ಶಿರವು ಬಾಗದು ।
ನಿನ್ನ ವಾರ್ತೆ ಕರ್ಣ ಕೇಳದು । ಅನ್ಯವಾರ್ತೆಗೆ ಹೊತ್ತು ಸಾಲದು ।
ಇನ್ನು ಇದರೊಳು ಹೇಸಿಕೆ ಬಾರದು । ಮುನ್ನಿನ ಗತಿಗೆ ಸಾಧನ ತೋರದು ॥

ವೃದ್ಧನಾದೆನು ಪಲ್ಲಗಳಿಲ್ಲವು । ಬಿದ್ದವು ಕಣ್ಣು ಕಾಣಲೊಲ್ಲವು ।
ಎದ್ದು ನಿಲ್ಲಲಾರೆನಯ್ಯಾ । ಉದ್ಧರಿಸೋ ಹಯವದನ ।
ಬುದ್ಧಿ ನಿನ್ನ ದಿವ್ಯಪಾದ । ಪದ್ಮವ ನೆನೆವಂತೆ ಮಾಡೊ ।
ಹೊದ್ದಿದವರ ಪೊರೆವ ಕರುಣಾಬ್ಧಿಯೇ ನೀನೆನಗೆ ಬಂಧು ॥

ಹೀಗೆ ಸ್ತೋತ್ರ ಮಾಡುತ್ತ ವಾದಿರಾಜರು ಉಡುಪಿಯನ್ನು ಸೇರಿ ಕೃಷ್ಣನೆದುರು ಬಂದು ನಿಂತರು. ಆಗ ಮಂದವಾದ ಅವರ ದೃಷ್ಟಿಯು ಸ್ಫುಟವಾಗಿ ಶ್ರೀ ಕೃಷ್ಣನ

ವಿಶ್ವರೂಪದ ದಿವ್ಯದರ್ಶನವೆ ಅವರಿಗೆ ಒದಗಿತು. ಉಡುಪಿಯನ್ನು ಬಿಟ್ಟು ಅಂತಿಮ ಕಾಲವನ್ನು ಸ್ವಾದಿಯಲ್ಲಿ ಕಳೆಯಬೇಕೆಂದು ನಿಶ್ಚಯಿಸಿ ಮತ್ತೆ ಹಿಂತಿರುಗಿದರು. ಶಾಲಿವಾಹನ ಶಕೆ 1522 ಶಾರ್ವರೀ ಸಂವತ್ಸರ ಫಾಲ್ಗುಣ ಬಹುಳ ತೃತೀಯೆ ಯಂದು (ಕ್ರಿ. ಶ. 1600) ವಾದಿರಾಜರು ಸಶರೀರರಾಗಿ ವೃಂದಾವನವನ್ನು ಪ್ರವೇಶ ಮಾಡಿದರು. (ಭಾರತೀಯ ಯತಿಗಳ ಇತಿಹಾಸದಲ್ಲಿ ಸಶರೀರಿಗಳಾಗಿ ವೃಂದಾವನಸ್ಥರಾದವರು ಸೋದೆಯ ವಾದಿರಾಜರು ಮತ್ತು ಅವರ ತರುವಾಯ ಮಂತ್ರಾಲಯದ ರಾಘವೇಂದ್ರ ಯತಿಗಳು)

## ಪುರಂದರದಾಸರು

ವ್ಯಾಸತೀರ್ಥರು ಶ್ರೀಪಾದರಾಯರ ಶಿಷ್ಯರಾಗಿದ್ದಂತೆ ಪುರಂದರದಾಸರಿಗೆ ಗುರುವಾಗಿದ್ದರು. ಶಿಷ್ಯರಾಗಿ ಗುರುವಿನ ಮೇಲ್ಮೆಯನ್ನು ಹೊಗಳಿದ ಬಾಯಿಯಿಂದಲೆ ಶಿಷ್ಯನ ಹಿರಿಮೆಯನ್ನೂ ಕೊಂಡಾಡಿದ ದೊಡ್ಡ ಮನಸ್ಸು ಇವರದು. "ದಾಸರೆಂದರೆ ಪುರಂದರದಾಸರಯ್ಯಾ । ವಾಸುದೇವ ಕೃಷ್ಣನ್ನ ಸೂಸಿ ಪೂಜಿಸುವ" ಎಂದು ಹೊಗ ಳುತ್ತ ಅವರನ್ನು ಪೂತಾತ್ಮ ಪುರಂದರದಾಸರು ಎಂದು ಕರೆದಿದ್ದಾರೆ. ಹೀಗೆ ಗುರುವೇ ಶಿಷ್ಯನನ್ನು ಕೊಂಡಾಡಿರುವುದು ಅತ್ಯಂತ ಅಪರೂಪದ ಸಂಗತಿ. ಪುರಂದರದಾಸರು ಬಾಳಿದ ಕಾಲವೆಂದರೆ ದಾಸಸಾಹಿತ್ಯದ ಒಂದು ಉಚ್ಛ್ರಾಯ ಕಾಲ. ಇವರ ಕಾಲವು ಕ್ರಿ. ಶ. 1480 ರಿಂದ 1565ರವರೆಗೆ ಎಂದು ಡಾ॥ ದಿವಾಣಜಿ ನಿರ್ಧರಿಸಿದ್ದಾರೆ. (ಪ್ರಸಾದ ಯೋಗ, ಪುಟ-35). ಈ ಕಾಲಕ್ಕೆ ಕರ್ನಾಟಕದಲ್ಲಿ ಭಾಗವತ-ಸಾಹಿತ್ಯವು ಬೆಳೆದಂತೆ ಮಹಾರಾಷ್ಟ್ರದಲ್ಲಿ, ಗುಜರಾಥದಲ್ಲಿ, ಬಂಗಾಲದಲ್ಲಿ, ಉತ್ತರ ಹಿಂದುಸ್ಥಾನ ದಲ್ಲಿ ಬೆಳೆದುಕೊಂಡು ಬಂದಿದೆ. ಕಬೀರ, ಗುರುನಾನಕ, ಸೂರದಾಸ್, ಮೀರಾಬಾಯಿ ಇವರೆಲ್ಲರೂ 15–16ನೆಯ ಶತಮಾನಗಳಲ್ಲಿ ಆಗಿಹೋದವರು : (ಅನುಬಂಧ 'ಕ' 8-12 ನೋಡಿರಿ) ಮಹಾರಾಷ್ಟ್ರದಲ್ಲಿ ಸಂತಜ್ಞಾನೇಶ್ವರ, ನಾಮದೇವ, ತುಕಾರಾಮ, ರಾಮದಾಸ್, ಏಕನಾಥ್ ಮೊದಲಾದ ಸಾಧುಸಂತರು ಸುಮಾರಾಗಿ ಇದೇ ಕಾಲಕ್ಕೆಯೆ ಭಾಗವತ ಧರ್ಮವನ್ನು ಬೆಳಗಿ ಬೆಳೆಯಿಸಿದರು. ಆಂಧ್ರದಲ್ಲಿಯೂ ಇದೇ ಸಮಯಕ್ಕೆ ಭಕ್ತಿ ಸಾಹಿತ್ಯ ಬೆಳೆದುಬಂತು. ತೆಲುಗಿನಲ್ಲಿಯ 'ಅನ್ನಮಾಂಕಚರಿತವು' ಪುರಂದರದಾಸರ ಬಗ್ಗೆ ಕೆಲವೊಂದು ಸಂಗತಿಗಳನ್ನು ಒದಗಿಸುತ್ತದೆ. ಅನ್ನಮಾಚಾರ್ಯರು ಪುರಂದರದಾಸರಂತೆಯೆ ಕೀರ್ತನಗಳನ್ನು ರಚಿಸಿದವರು. 'ಅನ್ನಮಾರ್ಯಚರಿತಮು' ಎಂಬ ಗ್ರಂಥವನ್ನು ರಚಿಸಿದ ತಾಳ್ಳಪಾಕ, ಚಿನ್ನಯಸೂರಿ ಅನ್ನಮಾಚಾರ್ಯರ ಮೊಮ್ಮಗ, ಚಿನ್ನಯಸೂರಿ ದ್ವಿಪದಿ ಕಾವ್ಯಕ್ಕೆ ತೆಲುಗಿನಲ್ಲಿ ಹೆಸರಾದ ಕವಿ. ಪುರಂದರ ದಾಸರು ಅನ್ನಮಾರ್ಯರ ಕೀರ್ತನೆಗಳನ್ನು ಅನುಸರಿಸಿ ಕನ್ನಡದಲ್ಲಿ ಅನೇಕ

ಕೀರ್ತನೆಗಳನ್ನು ರಚಿಸಿದರು, ಎಂದು ಅನ್ನಮಾರ್ಯಚರಿತ ಉಪೋದ್ಘಾತದಲ್ಲಿ ಕಾಣಿಸಲಾಗಿದೆ. ಇದೇ ಉಪೋದ್ಘಾತದಿಂದ ಇನ್ನೂ ಕೆಲವು ಅಂಶಗಳು ತಿಳಿದು ಬರುತ್ತವೆ. ಅವೇನೆಂದರೆ— ಪುರಂದರದಾಸರ ಹೆಸರಿಗೆ ಅಂಟಿಕೊಂಡಿರುವ ಕೃಷ್ಣಪ್ಪನಾಯಕರ ಕಥೆ, ಅವರ ಹೆಂಡತಿಯ ಕಿವಿಯೋಲೆಯ ಕತೆ ಇವು ಸ್ಪಷ್ಟವಾಗಿ ಕಟ್ಟು ಕಥೆಗಳು. ಅನ್ನಮಾಚಾರ್ಯರ ಕಾಲ, ವಯಸ್ಸು, ಪುರಂದರರ ವ್ಯಾಸತೀರ್ಥರ ಕಾಲ ಈ ಭೇಟಿಯ ಸಂದರ್ಭಗಳನ್ನು ಲೆಕ್ಕ ಹಾಕಿದರೆ ಪುರಂದರದಾಸರು ಆಗ 18–20 ವರ್ಷದವರಾಗಿರಬೇಕು. ಇನ್ನೂ 5–10 ವರ್ಷ ಹೆಚ್ಚಾದರೂ ಅವರು ಭಕ್ತರಾಗಿ ಅನ್ನಮಾಚಾರ್ಯರಿಂದ ವಿಠಲನ ಅವತಾರ ಎನಿಸಿಕೊಳ್ಳುವ ಮಟ್ಟಕ್ಕೆ ಮುಟ್ಟಿರಬೇಕಾದರೆ ಅವರು ಬಾಲ್ಯದಿಂದಲೂ ಭಕ್ತರಾಗಿದ್ದಿರಬೇಕು ಎನಿಸುತ್ತದೆ. ಆದರೆ ಈ ಊಹೆ ಸಮಂಜಸವಾಗಿ ತೋರುವುದಿಲ್ಲ. ಅನ್ನಮಾಚಾರ್ಯರ ಬಗ್ಗೆ ಅವರ ಮೊಮ್ಮಗ ಚಿನ್ನಯಸೂರಿ ಜನರ ಬಾಯಿಂದ ಕೇಳಿ ಬರೆದಿರಬೇಕು. ಅಲ್ಲದೆ ಅದು ಸಮಕಾಲಿಕ ಗ್ರಂಥವಲ್ಲ. ಪರಸ್ಪರರು (ಅನ್ನಮಾಚಾರ್ಯರು) ವೆಂಕಟೇಶ್ವರರ ಅವತಾರವೆಂದು (ಪುರಂದರದಾಸರು) ಪಾಂಡುರಂಗ ವಿಠಲನ ಅವತಾರವೆಂದೂ ಜನರಲ್ಲಿ ಪ್ರತೀತಿಯನ್ನು ಹುಟ್ಟಿಸುವುದು ಆ ಭೇಟಿಯ ಫಲವೆಂದು ತಿಳಿಯುವ ಇರಡು. ಆದರೆ ಹೀಗೆ ಪರಸ್ಪರ ಪ್ರಶಂಸೆಯನ್ನು ಮಾಡಿಕೊಳ್ಳುವುದು ಸಮಂಜಸವೆನಿಸಲಾರದು.

'ಪುರಂದರದಾಸ ಮಹಾತ್ಮೆ' ಎಂಬ ಸಂಸ್ಕೃತ ಕಾವ್ಯವು 'ಭಕ್ತಿವಿಜಯ' ಎಂಬ ಮರಾಠೀ ಮಹಿಪತಿ ಎಂಬ ಕವಿವಿರಚಿತ ಪುರಂದರದಾಸರ ಚರಿತ್ರೆಯ ಮೇಲೆ ಬೆಳಕನ್ನು ಕೆಡವಿದರೂ ಅದರದೂ ವಿಸಂಗತಿಗಳನ್ನೊಳಗೊಂಡ ಬಣ್ಣಬಣ್ಣಗಳ ಬೆಳಕು. ಸ್ವತಃ ಪುರಂದರದಾಸರಿಂದ ರಚಿಸಲ್ಪಟ್ಟ ಹಲವಾರು ಕೀರ್ತನೆಗಳು ದಾಸರ ಜೀವನದ ಬಗ್ಗೆ ಒಂದೊಂದು ಇಣುಕುನೋಟವನ್ನು ಬೀರುತ್ತವೆ, "ಆದದ್ದೆಲ್ಲ ಒಳಿತೆ ಆಯಿತು ನಮ್ಮ ಶ್ರೀಧರನ ಸೇವೆಗೆ ಸಾಧನಸಂಪತ್ತಾಯಿತು" ಎಂಬ ಕೀರ್ತನೆಯು ದಾಸರು ಗೋಪಾಲಬುಟ್ಟಿಯನ್ನು ಹಿಡಿದು ತುಳಸೀಮಾಲೆ ಹಾಕಿಕೊಂಡು ದಂಡಿಗೆ ಬೆತ್ತವನ್ನು ಧರಿಸಿದ ಮೇಲೆ ಈ ಪರಿವರ್ತನೆಯನ್ನು ಕುರಿತು ಅವರು ಹಾಡಿರಬೇಕೆಂದು ಊಹಿಸಬಹುದಾಗಿದೆ. ವಿಜಯದಾಸರು ಪುರಂದರದಾಸರನ್ನು ಕುರಿತು ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ವಿಜಯದಾಸರು ಪುರಂದರದಾಸರ ತರುವಾಯದವರು. ಸುಮಾರು 4-5 ತಲೆಮಾರಿನ ನಂತರ ವಿಜಯದಾಸರು ಆಗಿಹೋಗಿದ್ದು ಆ ಅವಧಿಯಲ್ಲಿ ಜನಜನಿತವಾದ ಪುರಂದರದಾಸರ ಬಗೆಗಿನ ಪವಾಡಗಳನ್ನೂ, ಸಂಗತಿಗಳನ್ನೂ ಕೇಳಿಕೊಂಡು ತಮ್ಮ ಕೀರ್ತನೆಗಳಲ್ಲಿ ಹಾಡಿರಬೇಕು, ವಿಜಯದಾಸರ ಭಾಷೆಯಲ್ಲಿಯೆ ಅವರ ಜೀವನ ಪರಿವರ್ತನೆಗೆ ಸಂಬಂಧಿಸಿದ ಅಂಶಗಳನ್ನು ಹೀಗೆ ಸಂಗ್ರಹಿಸಬಹುದು: ಪುರಂದರಗಡದಲ್ಲಿ ಸಾಹುಕಾರನೆನಿಸಿ ಸೌಖ್ಯದಿಂದ ಇರುತಿರಲು ನರಹರಿ ತ್ವರಿತದಲಿ

ಅವರ ಉದ್ಧರಿಸಲೋಸುಗ ಪುರಂದರರ ಮನೆಗೆ ಹೋದ. ಯಜಮಾನ ಜರಿದು ಬ್ರಾಹ್ಮಣನನ್ನು ಹೊರಗೆ ಹಾಕಿದ. ಬೇಸರಿರದ ಆ ಬ್ರಾಹ್ಮಣ ಆರು ತಿಂಗಳವರೆಗೆ ಒಂದೆ ಸಮನೆ ಬಂದು ಕಾಡುತ್ತಿರಲು ನಾಯಕನು ಎರಡು ಹೇರು ರೊಕ್ಕ ಮುಂದೆ ಸುರುವಿ ಒಂದು ದುಡ್ಡು ಆರಿಸಿಕೋ ಎಂದು ಹೇಳಿದನು. ಬ್ರಾಹ್ಮಣನು ಹಿತ್ತಲ ಬಾಗಿಲಿಗೆ ಹೋಗಿ ಪುರಂದರನ ಮಡದಿಗೆ ಮಗನ ಮುಂಜಿ ವಿತ್ತವನ್ನು ತಾ ಎಂದ. ಆಕೆ ಎತ್ತಣ ದ್ರವ್ಯ ನನಗೆ ಎಂದಳು. ವಿಪ್ರ ನಿನ್ನ ಮುತ್ತಿನ ಮೂಗುತಿಯ ತಾ ಎಂದ. ಉತ್ತಮಳು ಆ ಕ್ಷಣ ತೆಗೆದಿಟ್ಟಳು. ವಿಪ್ರ ಅದನ್ನು ಅವಳ ಗಂಡನ ಕಣ್ಣಿಗೆ ಹಾಕಿದ. ನಾಯಕನು ಅದು ನಮ್ಮ ಪ್ರಿಯಳದು ಎಂದು ಗುರುತಿಸಿ ಸರಪರಿಗೆ ಇದರ ಬೆಲೆ ಹೇಳು ಎಂದು ಕೇಳುತ್ತಾನೆ. 400 ಹಾಕಿ ವಿಪ್ರ ಕೊಡು ಎಂದು ಹೇಳಿ ಹೋದ ಬ್ರಾಹ್ಮಣ ಹಿಂತಿರುಗಿ ಬರಲಿಲ್ಲ. ನಾಯಕ ನಾಸಿಕದ ಮೂಗುತಿಯಲ್ಲಿ ? ಎಂದು ಹೆಂಡತಿಯನ್ನು ಕೇಳಲು ಅದು ಮುರಿದಿಹುದು ಎಂದು ಉತ್ತರ. "ಒಳಗ ಹೋಗಿ ನೀ ತಾರದಿರೆ ಅರಿವೆ ನಿನ್ನಯ ಜೀವವನು" ಎಂದು ಗಂಡನು ಬೆದರಿಸುತ್ತಾನೆ. ಅವಳು ವಿಷವ ಕೊಂಬೆನೆಂದು ಬಟ್ಟಲ ಕರದಿ ಧರಿಸಿದಾಕ್ಷಣ ತ್ವರಿತದಿ ಹರಿ ಮೂಗುತಿ ಅದರೊಳು ಹಾಕಿದ. ಹರುಷದಿಂ ಮೂಗುತಿಯನೊಯ್ದು ಪುರುಷನ ಕೈಯೊಳಿಟ್ಟಳು. ಬೆರಗಾದ ನಾಯಕ ನಿಜ ಹೇಳು ಎಂದು ಮಡದಿಯನ್ನು ಕೇಳಲು ಆಕೆ ನಡೆದ ಸಂಗತಿ ಹೇಳಿದಳು. ದೇವದೇವನೆ ವೃದ್ಧ ಬ್ರಾಹ್ಮಣನಾಗಿ ಬಂದಿದ್ದ ಎಂದು ಅವರು ಭಾವಿಸಿ ವೈರಾಗ್ಯ ತಾಳಿ ವ್ಯಾಸರಾಯರಿಂದ ಅಂಕಿತಗೊಂಡು ಪದಗಳ ಹೇಳುತ್ತ ಪ್ರತಿದಿವಸದಲ್ಲಿ ಪಕ್ಷಿವಾಹನ ನಾಟ್ಯವಾಡುತ್ತ ಮೋಕ್ಷವನೈದಿದರು. (ಪ್ರಸಾದಯೋಗ, ಪುಟ–26) ನಾರದರೆ ಪುರಂದರದಾಸರಾಗಿ ಅವತಾರ ಮಾಡಿದರೆಂದು ವಿಜಯದಾಸರು ಹೇಳುತ್ತಾರೆ. ಕಲಿ ಹೆಚ್ಚಿದ ಯುಗದಲ್ಲಿ ಸಲ್ಲಿಸುವ ಕೀರ್ತಿಗಳ ಬಿಚ್ಚಿ ತೋರಿಸುವೆನೆಂದು ವೈಕುಂಠಪತಿಯಲ್ಲಿ ಬೇಡಿಕೊಂಡು—

ವರ ಪಡೆದು ನಾರದರು ಇರುತಿರಲು ಇತ್ತಲಾ
ಬರಲು ಕಲಿ ದೊರೆತನವು ಕಾಲಾಂತರಕ್ಕೆ
ವರನ ದಯದಿಂದಲ್ಲಿ ಜನಿತರಾದರು ಪುರಂದರವೆಂಬ ನಗರಿಯಲ್ಲಿ ॥
ಚರಿಸಿದರು ಕೆಲವು ದಿನ ಸಂಸಾರ ವೃತ್ತಿಯಲಿ
ಜರಿದು ವೈರಾಗ್ಯವನು ತೊಟ್ಟು ದೃಢಮನಸಿನಲಿ
ತರುಣಿ ಮಕ್ಕಳು ಸಹಿತ ಸೇರಿದರು ಕಿಷ್ಕಿಂಧಗಿರಿತುಂಗ ಪಂಪದಲ್ಲಿ ॥

ಬಳ್ಳಾರಿ ಜಿಲ್ಲೆಯ ಕಮಲಾಪುರದಲ್ಲಿ ದೊರೆತ ಕ್ರಿ. ಶ. 1526ನೆಯ ವರ್ಷದಲ್ಲಿ ಲಿಖಿತವಾದ ತಾಮ್ರಶಾಸನದಲ್ಲಿ "ಧೀಮಾನ್ ಲಕ್ಷ್ಮಣದಾಸಾಖ್ಯಃ ಶ್ರೀಪುರಂದರ

ದಾಸಜಃ ವಸಿಷ್ಠ ಗೋತ್ರಜೋ ವೃತ್ತಿದ್ವಯ ಮತ್ರ್ಯೈಹಿ ಯಾಜುಷಃ ವಸಿಷ್ಠಾನ್ವಯ ಸಂಭೂತಃ ಶ್ರೀ ಪುರಂದರದಾಸಜಃ ದ್ವಿಜೋ ಹೇಬಣದಾಸಾಖ್ಯೋ ಯಾಜುಷೋತ್ರ ದ್ವಿವೃತ್ತಿಕಃ ವಸಿಷ್ಠಗೋತ್ರ ಸಂಭೂತಃ ಶ್ರೀ ಪುರಂದರದಾಸಜಃ ಧೀಮಾನ್ ಮಧ್ವ ಪದಾನಾಖ್ಯೋ ಯಾಜುಷೋತ್ರ ದ್ವಿವೃತ್ತಿಕಃ" ಎಂಬ ಮೂರು ಹೆಸರುಗಳು ಮತ್ತು ವಸಿಷ್ಠ ಗೋತ್ರದ ಉಲ್ಲೇಖವು ದೊರೆಯುತ್ತದೆ.

ಪುರಂದರದಾಸರ ಜನ್ಮಸ್ಥಳವು ಪುರಂದರಗಡ ಎಂದು ನಂಬಲಾಗಿದ್ದು ಮಹಾರಾಷ್ಟ್ರದ ಪೂನಾದ ಬಳಿ ಇರುವ ಪುರಂದರಗಡವೇ ಇದು ಎಂದು ನಂಬುವುದು ಸಾಧ್ಯವಾಗಿ ತೋರುವುದಿಲ್ಲ. ಆ ಸ್ಥಳದಲ್ಲಿ ಆ ಕಾಲಕ್ಕೆ ಕನ್ನಡ ಭಾಷೆ, ಕರ್ನಾಟಕ ಸಂಗೀತ ಬಳಕೆಯಲ್ಲಿರುವುದು ಸಾಧ್ಯವಿಲ್ಲ. ಅದೇ ರೀತಿ ಅದು ರತ್ನಪಡಿ ವ್ಯಾಪಾರ ಕೇಂದ್ರವಾಗಿರುವುದೂ ಸಾಧ್ಯವಿಲ್ಲ. ಏನಿದ್ದರೂ ದಾಸರ ಜನ್ಮಸ್ಥಳವು ಕರ್ನಾಟಕ ದಲ್ಲಿಯೆ ಇದ್ದಿರಬೇಕು ಎಂಬುದಂತೂ ನಿರ್ವಿವಾದ. ವಿಠ್ಠಲೋಪಾಸನೆ ಕರ್ನಾಟಕದ ತುಂಬ ಪಸರಿಸಿದ್ದ ಕಾಲವದು, ಕೆಲವು ವಿದ್ವಾಂಸರು ಮಲೆನಾಡಿನ ಕ್ಷೇಮಪುರವು ಪುರಂದರದಾಸರ ಜನ್ಮಸ್ಥಳವಾಗಿದ್ದಿರಬೇಕೆಂದು ಊಹಿಸಿದ್ದಾರೆ.

ಪುರಂದರದಾಸರ ನಿರ್ಯಾಣದ ಸ್ಥಳವು ಹಂಪಿಯಾಗಿರಬೇಕು ಎಂಬ ಅಂಶವು ಮಧ್ವಪತಿದಾಸರ "ತೆರಳಿದರು ಹರಿಪುರಕಿಂದು ಪುರಂದರದಾಸರು, ದೀನ ಬಂಧು . . ವಿರೂಪಾಕ್ಷ ಕ್ಷೇತ್ರದಿ ವಿಠಲನ ಸನ್ನಿಧಿಯಲ್ಲಿ ಶರೀರವನು ಇರಿಸಿ" ಎಂಬ ಒಂದು ಕೀರ್ತನೆಯ ಸಾಲಿನಿಂದ ತಿಳಿದು ಬರುತ್ತದ. ಹೈದರಾಬಾದಿನ ಹತ್ತಿರ ಗದ್ವಾಲ್ ಎಂಬ ಚಿಕ್ಕ ಸಂಸ್ಥಾನದ ಬಳಿ ಇರುವ ವನಪರ್ತಿಯಲ್ಲಿ ದೈವಾಧೀನರಾದರೆಂದೂ ಇಲ್ಲಿ ಪುರಂದರದಾಸರ ಕಟ್ಟೆಯೆಂದು ಸ್ಥಾಪಿಸಲ್ಪಟ್ಟಿದೆ ಎಂದು ಮತ್ತೆ ಕೆಲವರು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ವ್ಯಾಸರಾಯರಿಂದ ಹರಿದಾಸದೀಕ್ಷೆಯನ್ನು ಪಡೆದ ಪುರಂದರದಾಸರು ಕೃಷ್ಣದೇವ ರಾಯನ ಆಳ್ವಿಕೆಯಲ್ಲಿಯ ವಿಜಯನಗರಕ್ಕೆ ಬಂದಿದ್ದರು ಎಂದು ನಂಬಬಹುದಾಗಿದೆ. ಒಂದು ಸುಳಾದಿಯಲ್ಲಿ ಪುರಂದರದಾಸರು ವ್ಯಾಸರಾಯರಿಂದ ದೀಕ್ಷೆಯನ್ನು ಪಡೆದ ವಿಷಯವನ್ನು ಹೇಳುತ್ತಾರೆ.

"ವ್ಯಾಸರಾಯರ ಚರಣಕಮಲದರ್ಶನವೆನ-
ಗೇಸು ಜನ್ಮದ ಸುಕೃತಫಲದಿ ದೊರಕಿತೊ, ಎನ್ನ
ಸಾಸಿರ ಕುಲಕೋಟಿ ಪಾವನವಾಯಿತು–
ಶ್ರೀಶನ ಭಜಿಸುವುದಧಿಕಾರಿ ನಾನಾದೆ
ದೋಷರಹಿತನಾದ ಪುರಂದರ ವಿಠಲನ
ದಾಸರ ಕರುಣವು ಎನ್ನ ಮೇಲೆ ಇರಲಾಗಿ"

ಗುರೂಪದೇಶದ ಮಹಾತ್ಮೆಯನ್ನು ಬಣ್ಣಿಸುತ್ತ ಇನ್ನೊಂದು ಸುಳಾದಿಯಲ್ಲಿ ಹೀಗೆ ಹೇಳುತ್ತಾರೆ :

ಗುರು ಉಪದೇಶವಿಲ್ಲದ ಜ್ಞಾನವು
ಗುರು ಉಪದೇಶವಿಲ್ಲದ ಸ್ನಾನವು
ಗುರು ಉಪದೇಶವಿಲ್ಲದ ಧ್ಯಾನವು
ಗುರು ಉಪದೇಶವಿಲ್ಲದ ಜಪವು
ಗುರು ಉಪದೇಶವಿಲ್ಲದ ತಪವು
ಗುರು ಉಪದೇಶವಿಲ್ಲದ ಮಂತ್ರ
ಗುರು ಉಪದೇಶವಿಲ್ಲದ ತಂತ್ರ
ಉರಗನ ಉಪವಾಸದಂತೆ ಕಾಣಿರೋ
ಗುರು ವ್ಯಾಸರಾಯರೆ ಕರುಣದಿಂದಲಿ ಎನಗ
ಪುರಂದರ ವಿಠಲನೇ ಪರನೆಂಬರುಹಿ
ದುರಿತ ಭಯವನೆಲ್ಲ ಪರಿಹರಿಸಿದರಾಗಿ
ವರಮಹಾಮಂತ್ರ ಉಪದೇಶಿಸಿದರಾಗಿ

ಪುರಂದರದಾಸರಿಗೆ ಲಕ್ಷ್ಮಣದಾಸ, ಹೇಬಣದಾಸ ಮತ್ತು ಮಧ್ವಪತಿದಾಸ ಎಂಬ ಮೂವರು ಮಕ್ಕಳಿದ್ದರು, ಅವರು ಮೂವರೂ ಕೀರ್ತನೆಗಳನ್ನು ರಚಿಸಿದ್ದಾರೆಂದು ತಿಳಿಯುತ್ತದೆ. ವರದ ಪುರಂದರವಿಠ್ಠಲ, ಗುರುಪುರಂದರ ವಿಠ್ಠಲ, ಅಭಿನವ ಪುರಂದರ ವಿಠ್ಠಲ, ಮಧ್ವಪತಿ ವಿಠ್ಠಲ ಎಂಬ ಅಂಕಿತಗಳಲ್ಲಿ ಬರೆದಿರಬೇಕೆಂದು ತಿಳಿಯುತ್ತದೆ. ಇನ್ನೂ ಮೂವರು ಮಕ್ಕಳು ವರದಾ, ಗುರು ಮತ್ತು ಅಭಿನವ ಎಂಬ ಹೆಸರಿನವರು ಪುರಂದರದಾಸರ ಜೀವಿತಕಾಲದಲ್ಲಿಯೆ ಕಣ್ಮರೆಯಾಗಿದ್ದರೆಂದು ನಂಬಲಾಗಿದೆ. 'ಗಿಳಿಯು ಪಂಜರದೊಳಿಲ್ಲ' ಎಂಬ ಪುರಂದರದಾಸರ ಕೀರ್ತನೆಯಲ್ಲಿ ಪುತ್ರವಿಯೋಗದ ದುಃಖ ಧ್ವನಿಯು ವ್ಯಕ್ತವಾಗಿದೆ. ಪುರಂದರದಾಸರ ಬಹಳಷ್ಟು ಕೀರ್ತನೆಗಳಲ್ಲಿ ಆತ್ಮನಿವೇದನೆಯ ಪ್ರತಿಧ್ವನಿ ಇದೆ. 'ಮುಯ್ಯಕ್ಕೆ ಮುಯ್ಯ ತೀರಿತು'. ಯಾಕೆನ್ನ ಈ ರಾಜ್ಯಕೆನ್ನ ಇಳಿ ತಂದೆ ಹರಿಯೆ', 'ಬಾರಮ್ಮಾ ಭಾಗೀರಥಿ', 'ಅಪಮಾನವಾದರೆ ಒಳಿತು', 'ನಮ್ಮ ಭಾಗ್ಯ ದೊಡ್ಡದೊ ನಿಮ್ಮ ಭಾಗ್ಯ ದೊಡ್ಡದೊ' ಈ ಕೀರ್ತನೆಗಳು ಅವರ ಆತ್ಮಾನುಭೂತಿಯ ಕೈಗನ್ನಡಿಯಂತಿವೆ. ಪುರಂದರದಾಸರು ಒಂದು ಕಾಲಕ್ಕೆ ಸಿರಿವಂತಿಕೆಯ ಸುಪ್ಪತ್ತಿಗೆಯ ಮೇಲೆ ಓಲಾಡಿದ್ದರೂ ಜೀವನದಲ್ಲಿ ಸಂಕಷ್ಟಗಳನ್ನು ಎದುರಿಸಿ ಹಣ್ಣಾದ ಜೀವ ಅವರದು. ಸ್ವೇಚ್ಛೆಯಿಂದ ದಾರಿದ್ರ್ಯವನ್ನು ಅಪ್ಪಿಕೊಂಡ ದಾಸರವರು. 'ಋಣವೆಂಬ ಸೂತಕವು ಬಾಧೆ ಪಡಿಸುತಿದೆ' ಎಂಬ ಕೀರ್ತನೆಯಲ್ಲಿ ದರಿದ್ರ ಜೀವನದ

ವ್ಯಥೆಯನ್ನು ಚಿತ್ರಿಸಿದ್ದಾರೆ. "ಗುಣ ನಿಧಿಯೆ ನೀನೆನ್ನ ಋಣವ ಪರಿಹರಿಸೋ, ಕೊಟ್ಟವರು ಬಂದೆನ್ನ ನಿಷ್ಠುರದ ನುಡಿಗಳನಾಡಿ ಕೆಟ್ಟ ಬೈಗುಳ ಬೈದು ಮನದಣಿಯಲು ಹೆತ್ತ ಸೂತಕ ಹತ್ತು ದಿನಗಳಿಗೆ ಪರಿಹಾರ. ಮೃತ್ಯು ಸೂಚಕ – ಹನ್ನೊಂದು ದಿನಕ್ಕೆ ಮತ್ತೆ ಋಣ ಸೂತಕವು ಜನ್ಮ ಜನ್ಮಾಂತರಕೆ ಎತ್ತ ಹೋದರು ಬಿಡದ ಬೆನ್ನು ಹತ್ತಿ ಬಹುದು. ಅಂಗವಳಿದೆನು ಈ ವಿಧ ಋಣದೊಳು." ಎಂಬ ನುಡಿಗಳಲ್ಲಿ ದಾಸರು ಒಂದಿಲ್ಲ ಒಂದು ರೀತಿಯ ಋಣಬಾಧೆಯಿಂದ ಎಷ್ಟೊಂದು ಬವಣೆಗೊಂಡಿದ್ದರು ಎಂಬುದನ್ನಿಲ್ಲಿ ಊಹಿಸಬಹುದಾಗಿದೆ.

ಪುರಂದರದಾಸರು ಕೀರ್ತನೆಗಳಲ್ಲಿ ಭಕ್ತಿಯ ಪಾರಮ್ಯ, ತೀರ್ಥಸ್ಥಳಗಳು, ಕ್ಷೇತ್ರ ಸ್ಥಳಗಳ ವರ್ಣನೆಗಳೊಂದಿಗೆ ತನ್ನ ಕಾಲದ, ಸಮಾಜದ ಮೂಢನಂಬಿಕೆಗಳನ್ನು, ಆಡಂಬರಗಳನ್ನು, ತೋರಿಕೆಯ ನಿಷ್ಠೆಯನ್ನು, ಅಂಧಶ್ರದ್ಧೆಯನ್ನು, ಧಾರ್ಮಿಕ ಮೌಢ್ಯವನ್ನು ಚೆನ್ನಾಗಿ ಬಯಲಿಗೆಳೆದ್ದಾರೆ. 'ಉದರ ವೈರಾಗ್ಯವಿದು ನಮ್ಮ ಪದುಮನಾಭನಲಿ ಲೇಶ ಭಕುತಿಯಿಲ್ಲ' ಎಂದು ವರ್ಣಿಸುತ್ತ ಅಂತರಂಗದಲ್ಲಿ ಕ್ರೋಧ, ಮದ ಮತ್ಸರಗಳನ್ನು ತುಂಬಿಕೊಂಡು ಹೊರಗಿನವರಿಗೆ ಜನ ಮೆರಗು ತೋರಿಸುತ್ತಾರೆ. ಉದಯಕಾಲಕ್ಕೆ ಸ್ನಾನ ಮಾಡಿ ಗಡಗಡ ನಡುಗುತ್ತಾರೆ. ಕಂಚುಗಾರನ ಅಂಗಡಿಯಂತೆ ದೇವತಾ ಪ್ರತಿಮೆಗಳನ್ನು ಹರಡಿರುತ್ತಾರೆ. ಕರದಲ್ಲಿ ಜಪಮಣಿ, ಬಾಯಲಿ ಮಂತ್ರ ಮಣಮಣಿಸುತ್ತ ಮನಸ್ಸಿನೊಳಗ ಪರಸತಿಯರನ್ನು ಸ್ಮರಿಸುತ್ತ ಇದ್ದ ಅದು ಬೂಟಿಕತನವಲ್ಲದೆ ವೈರಾಗ್ಯವೆನಿಸೀತೆ ? ನಾಟಕವಲ್ಲದೆ ಸದಾಚಾರವೆನಿಸೀತೆ ? ಈ ಬಯಲು ಡಂಭದ ಪರಿ ಊಟದ ಮಾರ್ಗವ ಜ್ಞಾನವಲ್ಲದೆ ಜ್ಞಾನಿಯ ಮಾರ್ಗವಲ್ಲ ಎಂದು ಸುಂದರವಾದ ವಿಡಂಬನೆಯನ್ನು ಮಾಡಿದ್ದಾರೆ. 'ಮಡಿಮಡಿಯೆಂದು ಮೂರ್ಖರು ಹಾರುತಿ ಮಡಿಯುಪ್ಪು ಬಂತೊ ಬಿಕನಾಸಿ' ಎಂಬ ಕೀರ್ತನೆಯಲ್ಲಾಗಲಿ 'ಮಡಿಮಡಿಮಡಿಯೆಂದು ಅಡಿಗಡಿಗೆ ಹಾರುವೆ ಮಡಿ ಮಾಡುವ ಬಗೆ ಬೇರುಂಟು.' ಅದು ಹೇಗೆಂದರೆ— 'ಹಿರಿಯರ ಗುರುಗಳ ಹರಿದಾಸರುಗಳ ಚರಣಕೆರಗಿ ಬಲುಪರಿ ಭಕ್ತಿಯಲಿ ಪಾಲಿಸು ಎಂದು ಪುರಂದರ ವಿಠಲನ ಇರುಳು ಹಗಲು ಸ್ಮರಿಸುವುದು ಮಡಿಯು' ಎಂದು ಉಪದೇಶಿಸುತ್ತಾರೆ. ಈ ಜೀವನದಲ್ಲಿ ಹೇಗೆ ಬದುಕಬೇಕು ? ಭಗವದ್ಗೀತೆಯ ಅನಾಸಕ್ತಿಯೋಗವನ್ನು ಆಚರಿಸುತ್ತ 'ಇರಬೇಕು ಇರದಿರಬೇಕು' ಮತ್ತು 'ಆಶಾಲೇಶ ಮಾಡದ್ಹಾಂಗೆ ಈಸಬೇಕು ಇದ್ದು ಜಯಿಸಬೇಕು' ಗೇರುಹಣ್ಣಿನ ಬೀಜದಂತೆ, ನೀರಿನೊಳಗಿನ ಕಮಲದಂತೆ ಇರಬೇಕು ಇಲ್ಲದಿರಬೇಕು, ಸಮತ್ವ, ಸಮಭಾವಗಳಿಂದ ಯೋಗಮಾರ್ಗಿಯಾಗಿ ಬಾಳಬೇಕು. ತಾಸಿಗೊಮ್ಮೆ ಗಂಟೆ ಬಾರಿಸುವುದನ್ನು ಕೇಳಿದ ದಾಸರು 'ಆಯುಷ್ಯವು ವ್ಯರ್ಥ ಹೋಯಿತು ಎಂದು ತಾಸು ಬಾರಿಸುತಿದೆ' ಎಂದು ಹರಿದಾಸರನ್ನುದ್ದೇಶಿಸಿ ಬಹಳ

ಖಾರವಾಗಿ ನುಡಿಯುತ್ತಾರೆ. 'ಹಾಸು ಮಂಚ ಸುಪ್ಪತ್ತಿಗೆಯಲ್ಲಿ, ಹಗಲು ಇರುಳು ಹೇಸರಕತ್ತೆಯಂತೆ ಹೊರಳಿ ಸ್ತ್ರೀಯರ ಕೂಡಿ ಬೇಸರ ಪಡದೆ ನಿತ್ಯ ಉರುಳಿ ಈ ಪರಿಯಿಂದಲಿ ಮನುಷ್ಯ ಆಯುಷ್ಯ ವೃಥಾ ವೃಥಾ ಹೋಯಿತು ಎಂದು ತಾಸು ಬಾರಿಸುತಿದೆ' ಎಂದು ನುಡಿದಿರುವ ಮಾರ್ಮಿಕತೆ ನಿಷ್ಠುರ ಸತ್ಯ! 'ಇದು ಭಾಗ್ಯ ಇದು ಭಾಗ್ಯ ಇದು ಭಾಗ್ಯವಯ್ಯ ಎಂದು ಹೇಳುತ್ತ ಪದುಮನಾಭನ ಪಾದಭಜನೆ ಸುಖ'ವೆ ನಿಜವಾದ ಭಾಗ್ಯ ಎಂದು ಹೇಳುತ್ತ ಇಲ್ಲಿಯೂ ಸಾಧಕನು ಹೇಗೆ ಸುತ್ತಲಿನ ಪರಿಸರಕ್ಕೆ ಹೊಂದಿಕೊಂಡು ಬಾಳಬೇಕು ಎಂಬುದನ್ನು ಸುಂದರವಾಗಿ ಹೇಳಿದ್ದಾರೆ. 'ಕಲ್ಲಾಗಿರಬೇಕು ಕಠಿಣಭವತೊರೆಯೊಳಗೆ ಬಿಲ್ಲಾಗಿರಲುಬೇಕು ಬಲ್ಲವರೊಳಗೆ ಎಂಬ ದೊಡ್ಡ ತತ್ವದ ಮಾತನ್ನು ಇಂತಹ ಸುಲಭವಾದ ಮಾತಿನಲ್ಲಿ ಹೇಳಿ 'ವಿಷಯ ಭೋಗದ ತೃಣಕೆ ಉರಿಯಾಗಿರಲುಬೇಕು ನಿಶಿಹಗಲು ಶ್ರೀಹರಿಯ ನೆನೆಯಬೇಕು' ಎಂದೂ ಬೋಧಿಸುತ್ತಾರೆ. 'ಅಂಬಿಗ ನಾನಿನ್ನ ನಂಬಿದೆ' ಎಂಬ ಕೀರ್ತನೆಯಲ್ಲಿ ಸುಂದರವಾದ ರೂಪಕವನ್ನು ಚಿತ್ರಿಸಿದ್ದಾರೆ. ಪಯಣಿಗನು ಆಚೆಯ ದಡವನ್ನು ಮುಟ್ಟಬೇಕಾಗಿದೆ. ಆದರೆ ಅವನು ಕುಳಿತಿರುವ ನೌಕೆಗೆ ಒಂಭತ್ತು ಛಿದ್ರಗಳು! ಆರು ತೆರೆಗಳನ್ನು ಅದು ಹಾಯಿಸಿ ಹೋಗಬೇಕಾಗಿದೆ. ಇಡಿಯ ಕಾವ್ಯವೆ ಒಂದು ಉತ್ತಮ ರೂಪಕಕ್ಕೆ ನಿದರ್ಶನವಾಗಿದೆ.

ಅಂಬಿಗ ನಾನಿನ್ನ ನಂಬಿದೆ । ಜಗ । ದಂಬಾರಮಣ ನಂಬಿದೆ ॥ಪ॥ ತುಂಬಿದ ಹರಿಗೋಲಂಬಿಗ । ಅದಕೊಂಭತ್ತು ಛಿದ್ರವು ಅಂಬಿಗ ॥ ಸಂಭ್ರಮದಿ ನೋಡಂಬಿಗ। ಅದ । ರಿಂಬು ನೋಡಿ ನಡೆಸಂಬಿಗ ॥1॥ ಹೊಳೆಯು ಭರವ ನೋಡಂಬಿಗ । ಅದಕೆ । ಸೆಳವು ಘನವಯ್ಯ ಅಂಬಿಗ ॥ ಸುಳಿಯೊಳು ಮುಳುಗಿದೆ ಅಂಬಿಗ । ಎನ್ನ ಸೆಳೆದು ಕೊಂಡೊಯ್ಯೊ ನೀನಂಬಿಗ ॥2॥ ಆರು ತೆರೆಯ ನೋಡಂಬಿಗ ।ಅದು। ಮೀರಿ ಬರುತಲಿದೆ ಅಂಬಿಗ ॥ ಯಾರಿಂದಲಾಗದು ಅಂಬಿಗ । ಅದ ನೀ । ವಾರಿಸಿ ದಾಟಿಸೋ ಅಂಬಿಗ ॥3॥ ಸತ್ಯವೆಂಬುದೆ ಹುಟ್ಟಂಬಿಗ । ಸದಾ । ಭಕ್ತಿಯೆಂಬುದೆ ಪಥವಂಬಿಗ॥ ನಿತ್ಯಮೂರುತಿ ಪುರಂದರ ವಿಠಲ । ನಮ್ಮ । ಮುಕ್ತಿ ಮಂಟಪಕೊಯ್ಯೊ ಅಂಬಿಗ ॥4॥

ಜೀವನದ ಮೋಹಕತೆಯನ್ನು ಬಿಟ್ಟು ಮಾಡಿ ತೋರಿಸುವಂತಹ ಅನೇಕ ಅನುಭವಗಳು ದಾಸರ ಸಾಧನ ಮಾರ್ಗದಲ್ಲಿ ಬಂದು ಹೋಗಿರಬೇಕು. ಹೆಂಡತಿ ಯಿಂದ ಆಧ್ಯಾತ್ಮದತ್ತ ಮನಸ್ಸು ತಿರುಗಿದಾಗ ಸಕಲ ಸಿದ್ಧಿಗಳು ಒಮ್ಮೆಲೆ ಕೈಗೂಡಿದ ವೆಂದು ಹೇಳಲಿಕ್ಕಾಗದು. 'ವ್ಯರ್ಥವಾಯಿತೆ ಜನುಮ ವ್ಯರ್ಥವಾಯಿತೆ. ಅತ್ತಲಿಲ್ಲ ಇತ್ತಲಿಲ್ಲ ಅರ್ಥಮಾನದಾಸೆಯಾಗಿ ಜನುಮ ವ್ಯರ್ಥವಾಯಿತೆ, ಎಂದು ಗೋಳಿಟ್ಟರು. 'ನಿನ್ನನಾಶ್ರಯಿಸುವೆನು ನಿಗಮಗೋಚರ । ನಿತ್ಯ ಬೆನ್ನ ಬಿಡದೆ ಕಾಯೋ' ಎಂದು

ವಿಠಲನನ್ನು ಮೊರೆಹೊಕ್ಕರು, 'ದಾಸರ ಮೇಲೆ ಇನ್ನೂ ದಯಬಾರದ' ಎಂದು ಅಂಗಲಾಚಿದರು, ಆದರೆ 'ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ' ಎಂಬ ಮಾತೂ ಅವರಿಗೆ ಹೊಳೆದಿರಬೇಕು. ಅಂತೆಯೆ ಗುರುವಿನ ತಾಣ ವನ್ನು ಹುಡುಕಿಕೊಂಡು ವಿಜಯನಗರಕ್ಕೆ ಪಾದ ಬೆಳೆಸಿದರು,

ಇತ್ತ ವ್ಯಾಸತೀರ್ಥರು ತಮ್ಮ ಬಳಿಗೆ ಒಬ್ಬ ಶಿಷ್ಯ ಬರಲಿದ್ದಾನೆ ಎಂಬ ನಿರೀಕ್ಷೆಯಲ್ಲಿಯೆ ಇದ್ದರು. ದಿವ್ಯ ಚಕ್ಷುವಿನಿಂದ ಆ ಭಕ್ತನ ಬರವಿಗಾಗಿ ಕಾದಿದ್ದರು. ಭಕ್ತನನ್ನು ಬರಮಾಡಿಕೊಂಡು ಮಂತ್ರೋಪದೇಶ ನೀಡಿ ಪುರಂದರದಾಸರೆಂದು ನಾಮಕರಣ ಮಾಡಿ ದಾಸಕೂಟಕ್ಕೆ ಸೇರಿಸಿದರು. ವಿಜಯದಾಸರು ಪುರಂದರದಾಸ ರನ್ನು ನಾರದನ ಅವತಾರವೆಂದು ಗುರುತಿಸಿ 'ಸಂಸಾರ ವೃತ್ತಿಯ ಜರಿದು ವೈರ್‍ಯಾಗವ ತೊಟ್ಟು ದೃಢ ಮನಸ್ಸಿನಲ್ಲಿ । ತರುಣಿ ಮಕ್ಕಳ ಸಹತ ಸೇರಿದರು ಕಿಷ್ಕಿಂಧ ಪಂಪಾ ಕ್ಷೇತ್ರವ' ಎಂದು ವರ್ಣಿಸಿ 'ಪ್ರಲ್ಹಾದನ ಅವತಾರ ಬಳಿಯ ಮುದ್ರಧಾರಣೆ । ಗುರು ಮಂತ್ರ ಉಪದೇಶವನೆ ಕೊಂಡು ವೈಷ್ಣವರಾಗಿ ಪುರಂದರದಾಸರೆಂದು ಪೆಸರಿಟ್ಟು ಕೊಂಡು । ದೇಶವನು ತಿರುಗಿ ಪುಣ್ಯಕ್ಷೇತ್ರಗಳನ್ನು ಮುಟ್ಟಿ ! ಲೇಸಾಗಿ ಅಲ್ಲಿದ್ದು ಮಹಿಮೆಗಳ ಪೊಗಳುತ್ತ ದು । ರಾಶೆಯನು ತೊರೆದು ವಿಠಲನ ಸನ್ನಿಧಿಯಲ್ಲಿ । ವಾಸ ಮಾಡಿದರು ಧರ್ಮನಡತೆಯಲಿ.'

## ಅನುಬಂಧ (ಅ)

# ಸುಳಾದಿ ಮತ್ತು ಉಗಾಭೋಗ

12 ಮತ್ತು 13ನೇ ಶತಮಾನದಲ್ಲಿ ಸೂಡಾದಿ ಅಥವಾ ಸೂಳಾದಿ ಪ್ರಬಂಧಗಳು ಕರ್ನಾಟಕದಲ್ಲಿ ಪ್ರಚಲಿತವಾಗಿದ್ದವೆಂದು ತಿಳಿದುಬರುತ್ತವೆ. ಸುಳಾದಿ ಇಲ್ಲವೆ ಸೂಡಾದಿ ಎಂಬ ಹೆಸರು ತಾಳದಿಂದ ಬಂದುದು. ಸುಳ ಎಂಬುದು ಒಂದು ತಾಳ. ಸುಳಾದಿ ಎಂದರೆ ಸುಳ ಮುಖ್ಯವಾದ ಇತರ ಆರು ತಾಳಗಳು ಸೇರಿ ಒಟ್ಟು ಏಳು ಪ್ರತ್ಯೇಕ ತಾಳಗಳುಳ್ಳ ರಚನೆಗಳು. ಕವಿ ಅಗ್ಗಳನಿಂದ (ಕಿ. ಶ. 1189) ಗೋವಿಂದ ವೈದ್ಯನ ವರೆಗೆ (ಕ್ರಿ.ಶ. 1648) ಅನೇಕ ಕವಿಗಳು ಸುಳಾದಿ ಸಪ್ತ ತಾಳಗಳನ್ನು ಉಲ್ಲೇಖಿ ಸುತ್ತ ಬಂದಿದ್ದಾರೆ. ಅಗ್ಗಳನು 'ಏಕತಾಳ, ಧ್ರುವ, ತ್ರಿಪುಡೆ, ಮರ್ಠೆಯು, ಝಂಪೆ, ಮೊದಲಾದ ಸೂತ್ರ (ಸೂಡ) ತಾಳಂಗಳೊಳಂ........' ಎಂದು ಉಲ್ಲೇಖಿಸಿರುವುದ ರಿಂದ ಆತನ ಕಾಲಕ್ಕೆ ಸೂಡಾದಿ ಪ್ರಬಂಧವು ಪ್ರಚಲಿತವಲ್ಲಿದ್ದಿತೆಂದು ತಿಳಿಯುತ್ತದೆ. ಕರ್ನಾಟಕ ಸಂಗೀತದಲ್ಲಿ ಸೂಡಾದಿ ಅಥವಾ ಸುಳಾದಿ ಅಥವಾ ಸೂಳಾದಿಗಳನ್ನು ಹೇಳುವ ಪದ್ಧತಿ ನಡೆದುಕೊಂಡು ಬಂತು. ಒಂದು ಪ್ರಬಂಧಕ್ಕೆ ಇಲ್ಲವೆ ರಚನೆಗೆ ಏಳು ತಾಳಗಳನ್ನು ಜೋಡಿಸಿ ಹರಿದಾಸರು ಸುಳಾದಿಗಳನ್ನು ಪುನರ್ಘಟಿಸಿದರು. ರಾಗ ಮಾಲಿಕೆಯ ಪ್ರಬಂಧಗಳಂತೆ ಸುಳಾದಿಯು ತಾಳಮಾಲಿಕಾ ಪ್ರಬಂಧವಾಯಿತು. ಶ್ರೀಪಾದರಾಯ, ವ್ಯಾಸರಾಯ, ವಾದಿರಾಜ, ಪುರಂದರದಾಸ ಮೊದಲಾದವರು ಈ ಬದಲಾವಣೆಯನ್ನು ಬಳಕೆಗೆ ತಂದರು. ಏಳು ತಾಳಗಳ ಪ್ರಬಂಧಕ್ಕೆ ಸಾಲಗಸೂಡಾದಿ ಎಂದು ಕರೆಯುವುದು ರೂಢಿಯಾಯಿತು. ಹರಿದಾಸರು ಸೂಳಾದಿಗಳನ್ನು ದೇವರ ಕೀರ್ತನೆಗಾಗಿಯೆ ಬಳಸಿದರು. ಏಳು ತಾಳಗಳ ಜೊತೆಗೆ ದೇಶಿ ತಾಳಗಳನ್ನೂ ಬೆರಸಿದರು.

ಸುಳಾದಿಗಳಲ್ಲಿ ಪುರಂದರದಾಸರ ರಚನೆಗಳೇ ಹೆಚ್ಚು ಸಂಖ್ಯೆಯಲ್ಲಿವೆ. ಒಂದೊಂದ ರಲ್ಲಿ ಅನೇಕ ನುಡಿಗಳಿದ್ದು ಪ್ರತಿಯೊಂದು ನುಡಿಯ ಸಾಲುಗಳು ಹೆಚ್ಚು ಕಡಿಮೆ ಇರು ತ್ತವೆ. ಅವು ಧಾರ್ಮಿಕ ಮತ್ತು ಆಧ್ಯಾತ್ಮಿಕ ವಿಷಯಗಳಿಗೆ ಸಂಬಂಧಿಸಿರುತ್ತವೆ. ಸ್ತೋತ್ರ, ನೀತಿಬೋಧೆ, ವೇದಾಂತ ವಿಚಾರ ಇವೇ ಸುಳಾದಿಗಳ ಮುಖ್ಯ ವಿಷಯ ಗಳು. ಮಧುರಭಕ್ತಿಯೆ ಇವುಗಳ ಮುಖ್ಯ ಭಾವ. ಅನೇಕ ಸುಳಾದಿಗಳು ದೇವ ರನ್ನು ಮಲಗಿಸಿ ಲಾಲಿ ಹಾಡುವ ಜೋಗುಳಗಳು. ಅವು ಸಾಮಾನ್ಯವಾಗಿ ಐದರಿಂದ

ಎಂಟು ತಾಳಗಳವರೆಗೆ ತಾಳವೈವಿಧ್ಯದಿಂದ ಕೂಡಿರುತ್ತವೆ. ಇವರಲ್ಲಿ ಧ್ರುವ ಮತ್ತು ಮಠ್ಯ ತಾಳಗಳು ಅವಶ್ಯವಾಗಿ ಒಂದೇ ಬರುತ್ತವೆ. ಸುಳಾದಿ ಶಬ್ದಕ್ಕೆ ಸುಳುಹು+ ಹಾದಿ (ಸಾಕ್ಷಾತ್ಕಾರದ ಮಾರ್ಗ) ಎಂದೂ ವ್ಯುತ್ಪತ್ತಿ ಹೇಳಲಾಗುತ್ತದೆ.

## ಉಗಾಭೋಗ

ಉಗಾಭೋಗ ರಚನೆ ಕನಿಷ್ಟ ಐದು ಶತಮಾನಗಳಷ್ಟು ಹಳೆಯದಾಗಿದ್ದರೂ ಯಾವುದೆ ಸಂಗೀತ ಶಾಸ್ತ್ರದಲ್ಲಿ ಉಗಾಭೋಗದ ಉಲ್ಲೇಖವಿಲ್ಲ. ಪುರಂದರದಾಸರು ತಮ್ಮ ರಚನೆಗಳಲ್ಲಿ ಸೂಳಾದಿಗಳನ್ನು ಸೂಚಿಸುವಂತೆ ಉಗಾಭೋಗವನ್ನು ಸೂಚಿಸಿಲ್ಲ. ಉಗಾಭೋಗವೆಂದರೆ ಯುಗಾಭೋಗ (ಭಗವದ್ ಯೋಗದ ಆನಂದ) ಎಂದು ಅದರ ವ್ಯುತ್ಪತ್ತಿಯನ್ನು ಮಾಡಿದ್ದಾರೆ. ಇದಲ್ಲದೆ ಉಕ್+ಆಭೋಗ ಎಂದೂ ಉದ್ಗ್ರಹ+ ಆಭೋಗ ಎಂದೂ ವ್ಯುತ್ಪತ್ತಿಗಳನ್ನು ಮಾಡಿದುದುಂಟು. ಉಗಾಭೋಗಗಳು 120 ದೇಶೀ ತಾಳ ಮತ್ತು 5 ಮಾರ್ಗ ತಾಳಗಳಿಗೆ ಸಂಬದ್ಧವಾಗಿದ್ದವು ಎಂದು ಸೂಚಿಸುತ್ತಾರೆ. ಇವನ್ನು ವಿಲಂಬಿತ ಲಯದಲ್ಲಿ ಹಾಡುತ್ತಿದ್ದರೆಂದು ಕನ್ನಡದಲ್ಲಿ 12ನೆಯ ಶತಮಾನದಿಂದ ಅವು ಬಳಕೆಯಲ್ಲಿ ಬಂದು ಗೋಪಾಲನಾಯಕರಿಂದ ಉತ್ತರ ಹಿಂದೂಸ್ತಾನದತ್ತ ವ್ಯಾಪಿಸಿದವೆಂದೂ ಕೆಲ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಉಗಾಭೋಗವು ಇಂದು ಗಮಕ ರೀತಿಯಲ್ಲಿ ಎಂದರೆ ಭಾರತವಾಚನದ ಮಾದರಿಯಲ್ಲಿ ತಾಳಕ್ಕೆ ನಿಬದ್ಧವಾಗಿರದೆ ಗದ್ಯ ಶೈಲಿಯ ವಚನರೂಪವೆ ಆಗಿರುತ್ತದೆ. ಆಗಾಗ ಇದರಲ್ಲಿ ಮಾತ್ರಾಗಣ, ಲಯಬದ್ಧತೆ ಮತ್ತು ಕಾವ್ಯಗುಣ ಕಂಡು ಬರುತ್ತವೆ. ಯಾವಾಗಲೂ ಇದು ಒಂದೇ ರಾಗದಲ್ಲಿ ಇರುತ್ತದೆ. ಇದರ ಸಾಹಿತ್ಯಕ ವಿಷಯವು ಧಾರ್ಮಿಕ, ತಾಂತ್ರಿಕ, ಆಧ್ಯಾತ್ಮಿಕ ಹಾಗೂ ಸ್ತೋತ್ರರೂಪಕ. ಸೂಳಾದಿಗಳಿಂದ ಉಗಾಭೋಗಗಳು ಪೂರ್ವದ ರಚನೆಗಳಾಗಿವೆ. ಬಹಳಷ್ಟು ಪೂರ್ವದವು ಎನ್ನದಿದ್ದರೂ ಕನಿಷ್ಟ ಪಕ್ಷ ಸಾಲಗಸೂಡಾದಿಗಳಷ್ಟೆ ಪ್ರಾಚೀನ ಎನ್ನಬಹುದು.

ಉಗಾಭೋಗದಲ್ಲಿ ಸಾಹಿತ್ಯಕ್ಕಿಂತ ಸಂಗೀತಗುಣವೆ ಮುಖ್ಯ. ಅದರ ಮೂಲ ಮತ್ತು ಇತಿಹಾಸ ಏನೇ ಇರಲಿ, ಉಗಾಭೋಗವು ಸಂಗೀತಯೋಗ್ಯವಾದ ಒಂದು ಸುಂದರ ಸಾಹಿತ್ಯ ರಚನೆ.

## ಅನುಬಂಧ (ಬ)

# ಹರಿದಾಸರ ಸಾಧನೆ ಬೋಧನೆ

ಮಧ್ವಾಚಾರ್ಯರು ಬೋಧಿಸಿದ ತತ್ತ್ವಗಳನ್ನೆ ಹರಿದಾಸರು ತಮ್ಮ ಕೀರ್ತನೆಗಳ ಮುಖಾಂತರ ಹಾಡಿದರು. ಹರಿದಾಸ ಸಾಹಿತ್ಯವು ಭಾಗವತ ಧರ್ಮದ ಜೀವಾಳವಾದ ಭಕ್ತಿಯ ಭಾಂಡಾರ. ದ್ವೈತಧರ್ಮದ ತತ್ತ್ವತವಸಿಧಿ. ಹರಿಸರ್ವೋತ್ತಮತ್ವವನ್ನು ಹರಿದಾಸರು ಕೊಂಡಾಡಿದ್ದಾರೆ. 'ಹರಿಯೆ ಸರ್ವೋತ್ತಮ ಹರಿಯೆ ಪರದೇವತೆ', 'ಒಡೆಯ ಸರ್ವೋತ್ತಮನೆಂಬ ದೃಢ ಜ್ಞಾನಿಗಳೆ ವೈಷ್ಣವರು'.

ಹಾಗೆ ನೋಡಿದರೆ ಹರಿಸರ್ವೋತ್ತಮತ್ವವು ಎಂದರೆ ವಿಷ್ಣುಸರ್ವೋತ್ತಮತ್ವವು ಋಗ್ವೇದದಷ್ಟೆ ಪ್ರಾಚೀನ. 'ಮಹಸ್ತೇ ವಿಷ್ಣೋ ಸುಮತಿಂ ಭಜಾಮಹೆ' (ಋಗ್ವೇದ I.156), 'ಅಗ್ನಿರ್ವೈ ದೇವಾನಾಮವಮೊ ವಿಷ್ಣುಃ ಪರಮಃ' (ಐ. ಬ್ರಾ. I.1), 'ತದ್ ವಿಷ್ಣೋಃ ಪರಮಂ ಪದಮ್' (ಕ. ಉ,) ಎಂದು ಮೊದಲಾದ ಉದಾಹರಣೆಗಳನ್ನು ನೋಡಬಹುದು. 'ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ । ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರಗೀಯತೇ' (ಹರಿವಂಶ). ಹರಿದಾಸರು ವೈದಿಕ ಹಾಗೂ ಪೌರಣಿಕ ಹಾಡುಗಳಿಂದ ಕಥೆಗಳನ್ನು ಆಯ್ದುಕೊಂಡು ವಿಷ್ಣುಸರ್ವೋತ್ತಮತ್ವವನ್ನು ತಮ್ಮ ಕೀರ್ತನೆಗಳಲ್ಲಿ ಹಾಡಿದರು.

ಪರಬ್ರಹ್ಮವು ಪರಮಾನಂದವಸ್ತು. ಪರಮಾತ್ಮನು ಕಲ್ಯಾಣಗುಣಪರಿಪೂರ್ಣನು. ಪರಮಾತ್ಮನು ಇಂದ್ರಿಯಗಾತೀತನಾಗಿಯೂ ಅಪರೋಕ್ಷ ಜ್ಞಾನಿಗಳಿಗೆ ಗೋಚರಿಸಿದ್ದಾನೆ. ಬ್ರಹ್ಮಜ್ಞಾನವಿಲ್ಲದ ಯಾವ ಜ್ಞಾನವೂ ಪರಿಪೂರ್ಣವಾಗಲಾರದು. ಬ್ರಹ್ಮನೆ ಬ್ರಹ್ಮಾಂಡದ ಹಾಸು ಹೊಕ್ಕಾಗಿದ್ದಾನೆ. ಆ ಪರಬ್ರಹ್ಮನು ಜಗತ್ತಿನ ಅಣುರೇಣುಗಳಲ್ಲಿ ಅಂತರ್ಯಾಮಿಯಾಗಿದ್ದಾನೆ. ಅಜ್ಞಾನ ದುಃಖಗಳು ಈ ಜೀವನದಲ್ಲಿ ಇರತಕ್ಕವೇ. ಮಾನವನ ಸಂಕುಚಿತ ಬುದ್ಧಿಯಿಂದಾಗಿ ಇವುಗಳ ನಿಜವಾದ ಕಾರಣ ತಿಳಿಯಲಾರದೆ ತೊಳಲಾಡುತ್ತೇವೆ.

ಜಗತ್ತು ಸತ್ಯವೆಂಬುದು ಸಾಕ್ಷಿಗೆ ಗೋಚರವಾಗುತ್ತದೆ. ಸಾಕ್ಷಿ ಎಂಬುದು ನಮ್ಮ ಅಂತರಿಂದ್ರಿಯ. ಜಗತ್ತಿನ ದುಃಖ ಕಣ್ಣೀರು ಜೀವನದಲ್ಲಿ ನಿರಾಶೆಯನ್ನು ಹುಟ್ಟಿಸಲಿಕ್ಕೆ ಕಾರಣವಿಲ್ಲ. ಪರಮಾತ್ಮನ ಕರುಣೆಯೊಂದಿದ್ದರೆ ಅವೆಲ್ಲ ಕರಗಿಹೋಗುತ್ತವೆ. ಕರ್ಮಬಂಧನವನ್ನು ಬಿಡಿಸಲೂ ಪರಮಾತ್ಮನೇ ಸಮರ್ಥನು. ಅಂತೆಯೇ 'ಇನ್ನು ನಿನ್ನ ಬಿಟ್ಟು ಬಾಳಲಾರೆನಯ್ಯಾ ನಾನು ಮೊರೆಹೊಕ್ಕೆ' ಎಂದು ದಾಸರು ಹಾಡಿದ್ದಾರೆ. ಹರಿಯು ಭಕ್ತಸುಲಭನು ಎಂಬುದನ್ನು ದಾಸರು ಅನೇಕ ವಿಧವಾಗಿ ಹಾಡಿದ್ದಾರೆ. ಹರಿಯು ತನ್ನನ್ನೇ ತೆತ್ತವರಿಗೆ ತನ್ನನೀವನು 'ಮನವನೀಯೆ ತನ್ನನೀವನು' ಮುಕ್ತಿಗೆ

ಭಕ್ತಿಯೆ ಸಾಧನ ಎಂಬುದನ್ನು ಮಧ್ವಾಚಾರ್ಯರು ವ್ಯಕ್ತಪಡಿಸಿದ್ದಾರೆ – 'ತಥಾ ಭಕ್ತ್ಯಾಮುಕ್ತಿರ್ನಚಾನ್ಯಥಾ' ಪರಮಾತ್ಮನ ಅನಂತಗುಣಗಳನ್ನು ಹರಿದಾಸರು ಹಾಡಿದ್ದಾರೆ. 'ಒಂದೊಂದವತಾರದೊಳು ಅನಂತ ಮಹಿಮೆ । ಒಂದೊಂದವಯವದೊಳನಂತ ಮಹಿಮೆ । ಒಂದೊಂದು ರೋಮಾದಿಗಳಲಿ ಅಜಭವಾದಿಗಳ ಕಾರ್ಯ । ಪುರಂದರ ವಿಠಲ ನೀನೆ ಸಮರ್ಥ' ಒಂದೊಂದು ಅವತಾರದಲ್ಲಿಯ ಪರಮಾತ್ಮನ ಮಹಿಮೆ ಅಗಾಧವಾದುದು. 'ಮತ್ತೊಬ್ಬರಿಗುಂಟೆ ಈ ಪರಿ ಮಹಿಮೆಯು । ಕರ್ತೃ ಶ್ರೀ ಪುರಂದರವಿಠಲನಿಲ್ಲದೆ'.

ಪರಮಾತ್ಮನ ಮಹಾತ್ಮ್ಯೆಯು ಯಾತರಲ್ಲಿ ಅಡಗಿದೆ ? ಮೊದಲನೆಯದಾಗಿ ಆತನು ಸರ್ವತಂತ್ರಸ್ವತಂತ್ರನು. ಕಾಲಕರ್ಮಗಳು ಕೂಡ ಆತನನ್ನೆ ಅವಲಂಬಿಸಿವೆ. ಪರಮಾತ್ಮನ ಎರಡನೆಯ ಮಹಾತ್ಮೆಯೆಂದರೆ ಆತನೇ ಈ ಬ್ರಹ್ಮಾಂಡವನ್ನು ನಿರ್ಮಿಸಿದವನು. ಬ್ರಹ್ಮನ ಈ ಸೃಷ್ಟಿ ಎಷ್ಟು ಅಗಾಧ ! ಎಂತಹ ಕಲಾಪರಿಪೂರ್ಣ ! ಎಂತಹ ಭವ್ಯ ಉದ್ದೇಶ ! ಪರಮಾತ್ಮನು ಸರ್ವರಲ್ಲಿ ಅಡಗಿರುತ್ತಾನೆ. ಸರ್ವಸ್ವವೂ ಆತನಲ್ಲೇ ಅಡಗಿರುತ್ತದೆ. ಪರಮಾತ್ಮನು ಬಿಂಬರೂಪಿ. ಉಳಿದ ಜೀವಾತ್ಮರು ಆತನ ಪ್ರತಿಬಿಂಬಗಳು ಬ್ರಹ್ಮನ ನಿರ್ಮಾಣಶಕ್ತಿಯು ಮನುಷ್ಯನ ಬುದ್ಧಿಗೆ ನಿಲುಕದುದು. ಶ್ರೀಹರಿಯು ನಮ್ಮಿಂದ ಭಿನ್ನನಾದರೂ ನಮಗೆ ಅತಿ ಸಮೀಪ. ನಮ್ಮ ಸತ್ವೆಯ ಸಾರವೇ ಆತ. 'ಅಜ್ಞಾನಿನಾಂ ಜ್ಞಾನದೋ ವಿಷ್ಣುಃ ಜ್ಞಾನಿನಾಂ ಮೋಕ್ಷದಶ್ಚಸಃ । ಆನಂದದಶ್ಚ ಮುಕ್ತಾನಾಂ ಸ ಏವೈಕೊ ಜನಾರ್ದನಃ'. ಆ ಜನಾರ್ದನನು ನಮ್ಮನ್ನು ಕತ್ತಲೆಯಿಂದ ಬೆಳಕಿನೆಡೆಗೆ ಒಯ್ಯುತ್ತಾನೆ. ಪರಮಾತ್ಮನ ಈ ಮಹಾತ್ಮ್ಯೆಯನ್ನು ಅರಿತುಕೊಳ್ಳುವುದೇ ಭಕ್ತಿ. ಭಕ್ತಿ ನಮ್ಮಲ್ಲಿ ದಾಸಭಾವವನ್ನು ಬೆಳೆಸುತ್ತದೆ. ಶರಣಾಗತಿಯನ್ನು ಹುಟ್ಟಿಸುತ್ತದೆ. ಆರ್ತರು, ಜಿಜ್ಞಾಸುಗಳು ಅರ್ಥಾರ್ಥಿಗಳು ಪರಮಾತ್ಮನನ್ನು ಮೊರೆ ಹೋಗುತ್ತಾರೆ. ಭಕ್ತಿಯು ಜ್ಞಾನ ಪ್ರಕಾಶಿತವಾಗಿರದಿದ್ದರೆ ಅದು ಫಲವನ್ನು ಕೊಡುವುದಿಲ್ಲ. ಕುರುಡು ಭಕ್ತಿಯ ಗುರಿಯೂ ಕುರುಡೇ.

ಹರಿದಾಸರು ಮಾಧ್ವತತ್ವಗಳನ್ನೆಲ್ಲ ತಿಳಿಗೊಳಿಸಿ ಜನಸಾಮಾನ್ಯರಲ್ಲಿ ಹರಡಿದರು. 'ಹನುಮನ ಮತವೆ ಹರಿಮತವು'. ಮಧ್ವರು ಹನುಮ ಭೀಮರ ಅವತಾರ — ವಾಯುಪುತ್ರರು. 'ಮಧ್ವಶಾಸ್ತ್ರವ ಓದದವನ ವಿದ್ಯೆಯಾತಕೋ ?' ಎಂದಿದ್ದಾರೆ. ಜ್ಞಾನ, ಭಕ್ತಿ, ವೈರಾಗ್ಯಗಳು ಮೋಕ್ಷ ಸಾಧನೆಗಳು. ವಿರಕ್ತಿಯೆಂದರೆ ಜೀವನದಿಂದ ಹೇಸಿ ಓಡಿಹೋಗುವುದಿಲ್ಲ. 'ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮಾಃ' ಎಂಬ ವೇದವಾಣಿಯನ್ನೆ ಬೋಧಿಸಿದರು. 'ಈಸಬೇಕು ಇದ್ದು ಜಯಿಸಬೇಕು', 'ಮಾನವಜನ್ಮ ದೊಡ್ಡದು ಇದ ಹಾನಿ ಮಾಡಲುಬೇಡಿ ಹುಚ್ಚಪ್ಪಗಳಿರಾ' ಎಂಬ ನುಡಿಗಳಲ್ಲಿ ಈ ಭಾವನೆ ವ್ಯಕ್ತವಾಗುತ್ತದೆ. ನೈತಿಕ ಉನ್ನತಿಕೆಯನ್ನೂ ಹರಿದಾಸ

ಸಾಹಿತ್ಯವು ಬೋಧಿಸುತ್ತದೆ. ಉದರ ವೈರಾಗ್ಯ, ಬಾಹ್ಯದಂಭಗಳನ್ನು ಖಂಡಿಸ ಲಾಗಿದೆ. 'ಆಶೆ ಬಿಡದಿದ್ದವಗೆ ಸಂನ್ಯಾಸವೇಕೆ ?', 'ಮನದೊಳಗಿನ ತಾಮಸ ಮಾಣದನ್ನಕ', 'ಏನ ನೋಡಿದರೇನು ಏನು ಕೇಳಿದರೇನು', 'ಹೊಲೆತನವೆಂಬುದು ಅಂತರಂಗದಲ್ಲಿದೆ ಊರಹೊರಗಲ್ಲ', 'ಬ್ರಹ್ಮನ ತಿಳಿದಾತನೇ ಬ್ರಾಹ್ಮಣ' ಎಂಬೆಲ್ಲ ಮಾತುಗಳು ಹರಿದಾಸ ಸಾಹಿತ್ಯದ ಹಿತೋಪದೇಶದ ತಿರುಳಾಗಿವೆ.

## ಅನುಬಂಧ (ಕ)

### 1. ದ್ವಿತೀಯಂ ಸ್ತೋತ್ರಮ್

ವಂದೇ ವಂದ್ಯಂ ಸದಾನಂದಂ ವಾಸುದೇವಂ ನಿರಂಜನಮ್ । ಇಂದಿರಾಪತಿ ಮಾದ್ಯಾದಿ ವರದೇಶ ವರಪ್ರದಮ್ ॥ ೧ ॥ ನಮಾಮಿ ನಿಖಿಲಾಧೀಶಕಿರೀಟಾಘೃಷ್ಟ ಪೀಠವತ್ । ಹೃತ್ತಮಃಶಮನೇಽರ್ಕಾಭಂ ಶ್ರೀಪತೇಃ ಪಾದಪಂಕಜಮ್ ॥ ೨ ॥ ಜಾಂಬೂನದಾಂಬರಾಧಾರಂ ನಿತಂಬಂ ಚಿಂತ್ಯಮೀಶಿತುಃ । ಸ್ವರ್ಣಮಂಜೀರಸಂವೀತ ಮಾರೂಢಂ ಜಗದಂಬಯಾ ॥ ೩ ॥ ಉದರಂ ಚಿಂತ್ಯಮೀಶಸ್ಯ ತನುತ್ವೇಽಪ್ಯಖಿಲಂ ಭರಮ್ । ವಲಿತ್ರಯಾಂಕಿತಂ ನಿತ್ಯಮುಪಗೂಢಂ ಶ್ರಿಯೈಕಯಾ ॥೪॥ ಸ್ಮರಣೀಯ ಮುರೋ ವಿಷ್ಣೋರಿಂದಿರಾವಾಸಮುತ್ತಮೈಃ । ಅನಂತಮಂತವದಿವ ಭುಜಯೋ ರಂತರಂ ಗತಮ್ ॥ ೫ ॥ ಶಂಖಚಕ್ರಗದಾಪದ್ಮಧರಾಶ್ಚಿಂತ್ಯಾ ಹರೇರ್ಭುಜಾಃ । ಪೀನವೃತ್ತಾ ಜಗದ್ರಕ್ಷಾ ಕೇವಲೋದ್ಯೋಗಿನೋಽನಿಶಮ್ ॥ ೬ ॥ ಸಂತತಂ ಚಿಂತ ಯೇತ್ಕಂಠಂ ಭಾಸ್ವತ್ಕೌಸ್ತುಭಭಾಸಕಂ। ವೈಕುಂಠಸ್ಯಾಖಿಲಾ ವೇದಾ ಉದ್ಗೀರ್ಯಂತೇಽ" ನಿಶಂ ಯತಃ ॥ ೭ ॥ ಸ್ಮರೇತ್ ಯಾಮಿನೀನಾಥಸಹಸ್ರಾಮಿತಕಾಂತಿಮತ್ । ಭವತಾಪಾಪನೋದೀಡ್ಯಂ ಶ್ರೀಪತೇರ್ಮುಖಪಂಕಜಮ್ ॥ ೮ ॥ ಪೂರ್ಣಾನನ್ಯ ಸುಖೋದ್ಭಾಸಿ ಮಂದಸ್ಮಿತಮಧೀಶಿತುಃ । ಗೋವಿಂದಸ್ಯ ಸದಾ ಚಿಂತ್ಯಂ ನಿತ್ಯಾ ನಂದಪದಪ್ರದಮ್ ॥೯॥ ಸ್ಮರಾಮಿ ಭವಸಂತಾಪಹಾನಿದಾಮೃತಸಾಗರಮ್। ಪೂರ್ಣಾ ನಂದಸ್ಯ ರಾಮಸ್ಯ ಸಾನುರಾಗಾವಲೋಕನಮ್ ॥ ೧೦ ॥ ಧ್ಯಾಯೇದಜಸ್ರಮೀಶಸ್ಯ ಪದ್ಮಜಾದಿಪ್ರತೀಕ್ಷಿತಂ । ಭ್ರೂಭಂಗಂ ಪಾರಮೇಷ್ಠ್ಯಾದಿ ಪದದಾಯಿ ವಿಮುಕ್ತಿ ದಮ್ ॥ ೧೧ ॥ ಸಂತತಂ ಚಿಂತಯೇಽನಂತಮಂತಕಾಲೇ ವಿಶೇಷತಃ । ನೈವೋದಾ ಪುರ್ಗೃಣಂತೋಽಂತಂ ಯದ್ಗುಣಾನಾಮಜಾದಯಃ ॥ ೧೨ ॥

### 2. ಸಪ್ತಮಂ ಸ್ತೋತ್ರಮ್

ದೇವಕಿನಂದನ ನಂದಕುಮಾರಾ । ವೃಂದಾವನಾಂಜನ ಗೋಕುಲಚಂದ್ರ ॥೧ ॥ ಕಂದಫಲಾಶನ ಸುಂದರರೂಪಾ । ನಂದಿತಗೋಕುಲ ವಂದಿತಪಾದ ॥ ೨ ॥ ಇಂದ್ರ

ಸುತಾವಕ ನಂದಕಹಸ್ತಾ । ಚಂದನ ಚರ್ಚಿತ ಸುಂದರಿನಾಥ ॥ ೩ ॥ ಮತ್ಸ್ಯಕರೂಪ ಲಯೋದ ವಿಹಾರಿನ್ । ವೇದವಿನೇತ್ರ ಚತುರ್ಮುಖವಂದ್ಯಂ ॥ ೪ ॥ ಕೂರ್ಮ ಸ್ವರೂಪಕ ಮಂದರಧಾರಿನ್ । ಲೋಕ ವಿಧಾರಕ ದೇವವರೇಣ್ಯ ॥ ೫ ॥ ಸೂಕರ ರೂಪಕ ದಾನವಶತ್ರೋ । ಭೂಮಿವಿಧಾರಕ ಯಜ್ಞವರಾಂಗ ॥ ೬ ॥ ದೇವ ನೃಸಿಂಹ ಹಿರಣ್ಯಕಶತ್ರೋ । ಸರ್ವಭಯಾಂತಕ ದೈವತಬಂಧೋ ॥ ೭ ॥ ವಾಮನ ವಾಮನ ಮಾಣವವೇಷಾ । ದೈತ್ಯಕುಲಾಂತಕಕಾರಣಭೂತ ॥ ೮ ॥ ರಾಮಭೃಗೂದ್ವಹ ಸೂರ್ಜಿತದೀಪ್ತೇ । ಕ್ಷತ್ರಕುಲಾಂತಕ ಶಂಭುವರೇಣ್ಯ ॥ ೯ ॥ ರಾಘವ ರಾಘವ ರಾಕ್ಷಸಶತ್ರೋ । ಮಾರುತಿವಲ್ಲಭ ಜಾನಕಿಕಾಂತ ॥೧೦॥ ದೇವಕಿನಂದನ ಸುಂದರ ರೂಪಾ ರುಕ್ಮಿಣಿವಲ್ಲಭ ಪಾಂಡವಬಂಧೋ ॥ ೧೧ ॥ ದೈತ್ಯವಿಮೋಹಕ ನಿತ್ಯಸುಖಾದೇ । ದೇವ ಸುಬೋಧಕ ಬುದ್ಧಸ್ವರೂಪಾ ॥ ೧೨ ॥ ದುಷ್ಟಕುಲಾಂತಕ ಕಲ್ಕಿಸ್ವರೂಪಾ । ಧರ್ಮ ವಿವರ್ಧನ ಮೂಲಯುಗಾದೇ ॥ ೧೩ ॥ ಆನಂದತೀರ್ಥಕೃತಾ ಹರಿಗಾಥಾ । ಪಾಪ ಹರಾ ಶುಭನಿತ್ಯಸುಖಾರ್ಥ ॥ ೧೪ ॥

*  *  *

ಏಕಾಂತ ಭಕ್ತರಾದ ಸಂತ ತುಕಾರಾಮರು ರಾಜಯೋಗಿಯಾಗಿದ್ದರು. ಈ ಕೆಳಗಿನ ಅಭಂಗವು ವಿಠ್ಠಲನೊಬ್ಬನೆ ಶ್ರೇಷ್ಠ ಎಂಬ ಏಕಾಂತ ಭಕ್ತಿಗೆ ಯೋಗ್ಯ ನಿದರ್ಶನವಾಗಿದೆ : ಏಕಾಂತೀಚೆ ಸುಖ ದೇಯಿ ಮಜ್ಝದೇವಾ । ಆಘಾತಯಾಜೀವಾ ಚುಕ ವೋನಿ ॥ ಧ್ಯಾನಿರೂಪವಾಚೆ ನಾಮ ನಿರಂತರ । ಅಪ್ರುಣಿ ವಿಸರ ಪಡೋನೇದಿ ॥ ತೈಸಿ ಮಾಝುಗೋಡಿ ದೇಯಿದೇವಾ । ದಾಸಾಂಚಿ ವಿಠು ಓವಳರಿ ತೋಸಿ ॥ ತುಕಾ ಮ್ಹಣೆಮೀತೋ ದೀನಪಾಪರಾಶಿ । ಘಾಲಾವೆ ಪಾಠೀಸಿ ಮಾಯಬಾಪ ॥

# ದಾಸ ಸಾಹಿತ್ಯ

ಭಾಗ : ಎರಡು

# ವಿಜಯನಗರದ ಈಚಿನ ದಾಸ ಸಾಹಿತ್ಯ

ಪ್ರೊ. ಎಸ್. ಕೆ. ರಾಮಚಂದ್ರರಾವ್

# ಮೊದಲ ಮಾತು

ಕನ್ನಡನಾಡಿನಲ್ಲಿ ಆರುನೂರು ವರ್ಷಗಳ ಹಿಂದೆ ಸಣ್ಣದೊಂದು ತೊರೆಯಾಗಿ ಹರಿಯತೊಡಗಿದ ಹರಿದಾಸಪಂಥ ಮುಂದೆ ಮಹಾನದಿಯಾಯಿತು ; ಅದರಿಂದ ಇಲ್ಲಿನ ನೆಲವೆಲ್ಲ ಫಲವತ್ತಾಯಿತು. ಕಾಲಕ್ರಮದಲ್ಲಿ ನದಿಯು ಸೀಳುಸೀಳಾಗಿ ಒಡೆದು ನಾಡಿನ ಸಂಸ್ಕೃತಿಸಾಗರದಲ್ಲಿ ಸೇರಿಕೊಂಡಿತು. ನಾಲ್ಕುನೂರು ವರ್ಷಗಳ ಹಿಂದೆ, ಪುರಂದರ ದಾಸರ ಕಾಲದಲ್ಲಿ ಇದು ಪ್ರವಾಹವಾಗಿಯೇ ಹರಿದಿತ್ತು ; ಹದಿನೈದು ಹದಿನಾರನೆಯ ಶತಮಾನಗಳಲ್ಲಿ ಅದರ ಓಟವೂ ವಿಸ್ತಾರವೂ ಹಿಗ್ಗಿದವು. ಅನಂತರ ನದಿಯ ರಭಸವು ಕಡಮೆಯಾದರೂ ಬರಗಾಲದಲ್ಲಿಯೂ ಬತ್ತದೆ, ನೆಲವನ್ನು ಬಗೆದರೆ ಹೊರಬರುವ ಝರಿಯಂತೆ, ಅಲ್ಲಲ್ಲಿ ಆಗಾಗ ಅಷ್ಟಷ್ಟು ಉಳಿದೇ ಬಂದಿತು. ನಮ್ಮ ಕಾಲಕ್ಕೂ ಅದು ಪೂರಾ ಮರೆಯಾಗಿಲ್ಲ. ಮರೆಯಾದೀತೆಂಬ ಹೆದರಿಕೆಯೇನೋ ಇದೆ.

ಹರಿದಾಸರು ಕನ್ನಡಹಾಡುಗಳನ್ನು ಹಾಡಿಕೊಂಡು, ಕೆಲವೊಮ್ಮೆ ಭಾವಪರವಶ ರಾಗಿ ಕುಣಿಯುತ್ತ, ಉಪಾದಾನಕ್ಕೆಂದು ಕೇರಿ ಕೇರಿಗಳಲ್ಲಿ, ಮನೆಮನೆಗೆ ಬರುವುದು ಹಿಂದಿನಿಂದಲೂ ಬಂದ ಪದ್ಧತಿ. ಕಳೆದ ತಲೆಮಾರಿನವರೆಗೂ ಎಲ್ಲ ಊರುಗಳಲ್ಲಿ ಹರಿ ದಾಸರನ್ನು ಕಾಣಬಹುದಾಗಿದ್ದಿತು. ನಮ್ಮ ಜನ ಇವರನ್ನು ಭಿಕ್ಷುಕರಂತೆ, ಭಿಕಾರಿ ಗಳಂತೆ ಪರಿಗಣಿಸಲಿಲ್ಲ ; ಇವರು ಮನೆಗೆ ಬಂದರೆ ಆದರಿಸಿ ಒಳಗೊಯ್ದು ಇವರಿಂದ ಹಾಡು ಹೇಳಿಸಿ, ಕೇಳಿ, ಕೈಲಾದುದನ್ನು ಕೊಟ್ಟು ನಮಸ್ಕಾರಮಾಡಿ ಕಳುಹಿಸುತ್ತಿದ್ದರು. ಸಂಪ್ರದಾಯವಂತರ ಮನೆಗಳಲ್ಲಂತೂ ಹರಿದಾಸರನ್ನು ವಾರವಾರವೂ ಬರಮಾಡಿ ಕೊಳ್ಳುವರು, ಹೊಸ ಹೊಸ ದೇವರನಾಮಗಳನ್ನು ಹಾಡಿಸುವರು, ಅನುಕೂಲಕ್ಕೆ ತಕ್ಕಂತೆ ಉದಾರವಾಗಿಯೇ ಉಪಚರಿಸುವರು. ಈಚೆಗೆ ಹರಿದಾಸರು ಅಷ್ಟಾಗಿ ಕಾಣಿಸಿ ಕೊಳ್ಳುವುದಿಲ್ಲವೆನ್ನಿ.

ಹರಿದಾಸರನ್ನು ನೋಡಿದೊಡನೆ ಗುರುತಿಸುವುದು ಸಾಧ್ಯ. ಅವರ ಉಡುಗೆ ಸಂಪ್ರದಾಯದಿಂದ ಒಂದು ಬಗೆಯದು. ತಲೆಗೆ ಸುತ್ತಿದ ಶಾಟಿ, ಬಹುಶಃ ಗುರುಗಳು ಕೊಟ್ಟ ಶೇಷವಸ್ತ್ರ ; ಕಚ್ಚೆಪಂಚೆ, ಕಾಲಿಗೆ ಗೆಜ್ಜೆ, ಕೊರಳಲ್ಲಿ ತುಲಸೀಮಣಿಯಮಾಲೆ; ಗೋಪೀಚಂದನದ ಮುದ್ರೆ – ನಾಮಗಳು. ಒಂದು ಕೈಯಲ್ಲಿ ಸಣ್ಣದೊಂದು ಬಡಿಗೆ

ಅಥವಾ ತಂಬೂರಿ, ಇನ್ನೊಂದರಲ್ಲಿ ಚಿಟಿಕೆ. ಕಂಕುಳಲ್ಲಿ ಇಳಿಬಿಟ್ಟ ಜೋಳಿಗೆ ಅಥವಾ ಗೋಪಾಳಬುಟ್ಟಿ. ಹಾಡುವುದು ಕನ್ನಡದ ದೇವರನಾಮಗಳನ್ನೇ ; ಹೆಚ್ಚಾಗಿ ಪುರಂದರದಾಸರದು, ತಪ್ಪಿದರೆ ವಿಜಯದಾಸರದು. ಅವರ ಜೋಳಿಗೆಗೆ ಅಥವಾ ಗೋಪಾಳ ಬುಟ್ಟಿಗೆ ಹಾಕಬೇಕಾದುದು ಅಕ್ಕಿಯನ್ನಷ್ಟೆ. ಅನುಕೂಲಸ್ಥರು ಅವರನ್ನು ಒಳಗೆ ಕರೆದೊಯ್ದು, ವೀಳೆಯದೆಲೆ, ತೆಂಗಿನಕಾಯಿ, ಬಾಳೆಹಣ್ಣು, ದಕ್ಷಿಣೆಗಳನ್ನೂ ಕೊಡುವರು ; ಕೊಟ್ಟಿದ್ದನ್ನೆಲ್ಲ 'ಕೃಷ್ಣಾರ್ಪಣ' ಎಂದು ಸ್ವೀಕರಿಸುವರು ಅವರು.

ಈ ಹರಿದಾಸರದು ಉಂಛವೃತ್ತಿ, ಎಂದರೆ-ಮನೆಮನೆಗೆ ಹೋಗಿ ದೇವರನಾಮಗಳನ್ನು ಹಾಡಿ, ಅವರಿವರು ತಮ್ಮ ಇಷ್ಟದಿಂದ ಕೊಟ್ಟ ಅಷ್ಟಿಷ್ಟನ್ನೇ ತಂದು, ಮನೆಯಲ್ಲಿ ಅಡಿಗೆ ಮಾಡಿ, ದೇವರಿಗೆ ಎಡೆಯಿಟ್ಟು, ತಾವೂ ಮನೆಯವರೂ ಉಣ್ಣುವರು. ಅವರಿಗೆ ಬೇರೆ ಯಾವ ವೃತ್ತಿಯಾಗಲಿ, ಇರದು ; ಇರಬಾರದು. ಇದ್ದುದನ್ನೆಲ್ಲ ಬಡಬಗ್ಗರಿಗೆ 'ಕೃಷ್ಣಾರ್ಪಣ'ವೆಂದು ಹಂಚಿದ ನಂತರವೇ ಹರಿದಾಸರಾಗಿ ಹೊರಡುವುದು ; ಬಡತನವನ್ನು ವರಿಸಿಯೇ ಅವರು ನಿಲ್ಲುವುದು. ಮುಂದೆ ಲೌಕಿಕ ಪ್ರಯೋಜನಕ್ಕಾಗಿ ಯಾವ ಉಪಾಧಿಯನ್ನೂ ಅವರು ಒಪ್ಪುವ ಹಾಗಿಲ್ಲ. ಹೀಗೆಂದ ಮಾತ್ರಕ್ಕೆ ಅವರು ಸಂನ್ಯಾಸಿಗಳೇನಲ್ಲ. ಹರಿದಾಸರಲ್ಲಿ ಹಿಂದೆ ಕೆಲವು ಸಂನ್ಯಾಸಿಗಳೂ ಇದ್ದರು ; ನರಹರಿತೀರ್ಥರು, ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ರಾಘವೇಂದ್ರಸ್ವಾಮಿಗಳಿದ್ದ ಹಾಗೆ. ಆದರೆ ಬಹುಮಟ್ಟಿಗೆ ಹರಿದಾಸರು ಸಂಸಾರಿಗಳೇ, ಗೃಹಸ್ಥರೇ.

ಹರಿದಾಸರು ಕಾಣಿಸಿಕೊಳ್ಳುವ ಮೊದಲು ನಮ್ಮ ಸಮಾಜದಲ್ಲಿ ಇಂಥವರಿಗೆ ಸ್ಥಾನವಿದ್ದಿತು. ಹಾಡುತ್ತ, ಕುಣಿಯುತ್ತ, ಉಪಾದಾನದಿಂದ ಬದುಕುವವರು ನಮ್ಮ ದೇಶದಲ್ಲಿ ಹಿಂದಿನ ಕಾಲದಿಂದಲೂ ಇದ್ದರು. ದೇವರ ಹಿರಿಮೆಯನ್ನೂ, ಭಕ್ತಿಯ ಅಗತ್ಯವನ್ನೂ, ಮಹಾಪುರುಷರ ಪವಾಡಗಳನ್ನೂ ಕತೆಗಳಲ್ಲಿ ಕವಿತೆಗಳಲ್ಲಿ ಮೂಡಿಸಿ, ಅವನ್ನು ಜನರೆದುರು ಇಂಪಾಗಿ ಸಂಗೀತದಲ್ಲಿ ನಿರೂಪಿಸುವವರು ವೇದಯುಗದಲ್ಲಿಯೂ ಇದ್ದಿರಬೇಕು. ಊರೂರು, ಕೇರಿಕೇರಿಗಳಲ್ಲಿ ತಿರುಗಾಡುತ್ತ, ತಂಬೂರಿ ಮೀಟಿಕೊಂಡು ಹಾಡುತ್ತ ಹಾಡುಗಬ್ಬಗಳನ್ನು ಜನರಿಗೆ ಪರಿಚಯ ಮಾಡಿ ಕೊಡುವವರು ನಾಡಿನ ಎಲ್ಲ ಕಡೆಯೂ ಇದ್ದರು. ಇವರಿಗೆ ಸಾಹಿತ್ಯಜ್ಞಾನ, ಸಂಗೀತದಲ್ಲಿ ಪರಿಶ್ರಮ ಮಾತಿನ ಮೋಡಿ, ಭಾವುಕತೆ ಎಲ್ಲವೂ ಇದ್ದರೆ ಸೊಗಯಿಸುತ್ತಿದ್ದಿತು. ಇಂಥವರನ್ನು ಹಿಂದಿನವರು 'ಕುಶೀಲವ'ರೆಂದು ಕರೆದರು. ರಾಮಾಯಣವನ್ನು ದೇಶದಲ್ಲೆಲ್ಲ ಇಷ್ಟೊಂದು ವ್ಯಾಪಕವಾಗಿ ಹರಡಿದರು ಇವರೇ ; ಪುರಾಣದ ಕತೆಗಳೂ ಜಾನಪದ ವೃತ್ತಗಳೂ ಎಲ್ಲ ಹಳ್ಳಿಗಳಲ್ಲಿಯೂ ಹರಡಿದುದು ಇಂಥವರಿಂದಲೇ. ಒಂದೆಡೆ ಸಿದ್ಧ

ಸಿದ್ಧವಾದ ಸಂಸ್ಕೃತಿಯ ಪಾಕವನ್ನು ದೂರದೂರ ಕೊಂಡೊಯ್ದು ಜನಸಾಮಾನ್ಯರಿಗೆ ಉಣಬಡಿಸುವುದು ಇವರ ಕೆಲಸವಾಗಿದ್ದಿತು.

ಭಾಗವತರು, ಪುರಾಣಿಕರು, ಗಮಕಿಗಳು, ಕೀರ್ತನಕಾರರು ಇದೇ ಕೆಲಸವನ್ನು ನಗರಗಳಲ್ಲಿ ನಡೆಸುತ್ತಿದ್ದರು. ಅವರವರ ಪಾಂಡಿತ್ಯ, ಪ್ರವಚನ ಕೌಶಲ, ಪ್ರೌಢಿಮೆ, ಪುಣ್ಯಗಳಿಗೆ ತಕ್ಕಂತೆ ಜನಪ್ರೀತಿಯೂ ಆದರಣೆಯೂ ದೊರಕುತ್ತಿದ್ದವು ; ಅವರ ಬದುಕೂ ನೆಮ್ಮದಿಯಾಗಿರುತ್ತಿದ್ದಿತು. ಮನೆಮಾಡಿಕೊಂಡು, ಅಷ್ಟಿಷ್ಟು ಅನುಕೂಲ ವನ್ನೂ ಪಡೆದುಕೊಂಡು ನೆಲೆಸಲು ಸಾಧ್ಯವಿರುತ್ತಿದ್ದಿತು. ಸ್ಥೂಲವಾಗಿ ಹರಿದಾಸರು ಇದೇ ಗೋತ್ರಕ್ಕೆ ಸೇರಿದವರಾದರೂ ಅವರ ಜೀವನಕ್ರಮದಲ್ಲಿ ಮೇಲೆ ಹೇಳಿದವರಲ್ಲಿ ದ್ದಂತೆ ಆರ್ಥಿಕವ್ಯವಸ್ಥೆಗೆ ಅಷ್ಟು ಪ್ರಾಮುಖ್ಯವಿರುತ್ತಿರಲಿಲ್ಲ. ಅವರು ಸಾಮಾಜಿಕನೆಲೆಗೂ ಅಷ್ಟೊಂದು ಗಮನ ಕೊಡುತ್ತಿರಲಿಲ್ಲ. ಅವರ ಬದುಕಿನ ರೀತಿ ಬೇರೆಯ ಬಗೆಯದು ; ಬಾಳಿನ ಧೋರಣೆ ಬೇರೆ. ಯಾವುದೊಂದು ನಿರ್ದಿಷ್ಟವ್ಯವಸ್ಥೆಗೂ ಅವರು ಸಿಲುಕಿ ಕೊಳ್ಳುತ್ತಿರಲಿಲ್ಲ. ಇಂಥದೇ ಮನೆಗೆ, ಇಷ್ಟೇ ಮನೆಗಳಿಗೆ, ಇದೇ ವೇಳೆಯಲ್ಲಿ ಹೀಗೆಯೇ ಹೋಗಬೇಕೆಂಬ ನಿಯಮ ಅವರಿಗಿಲ್ಲ: ತಮಗೆ ಇಷ್ಟಬಂದ ಕೇರಿಯಲ್ಲಿ, ಸರಿಯೆಂದು ತೋರಿದ ಮನೆಗಳಿಗೆ ಹೋಗಿ, ಮನಸ್ಸಿಗೆ ಬಂದ ದೇವರನಾಮಗಳನ್ನು ಹಾಡಿ, ಅವರು ಕೊಟ್ಟುದನ್ನು ಕೊಟ್ಟಷ್ಟನ್ನು ಸಂತೋಷದಿಂದ ಸ್ವೀಕರಿಸಿ ಬರುತ್ತಿದ್ದರು. ಯಾರೂ ಅವರನ್ನು ಯಾವ ವಿಧದಲ್ಲಿಯೂ ನಿರ್ಬಂಧಪಡಿಸುವ ಹಾಗಿಲ್ಲ. ಹರಿದಾಸ್ಯ ವೃತ್ತಿಯ ಮುಖ್ಯ ಲಕ್ಷಣವೆಂದರೆ ಅವರ ಸ್ವಾತಂತ್ರ್ಯ ; ಯಾರ, ಯಾವುದರ ಹಂಗೂ ಅವರಿಗಿಲ್ಲದಿರುವುದು. 'ನೀನ್ಯಾಕೋ, ನಿನ್ನ ಹಂಗ್ಯಾಕೋ' ಎಂದು ದೇವರನ್ನೇ ಕೇಳುವ ಜನ ಅವರು !

ಅವರಲ್ಲಿ ವ್ಯವಸ್ಥೆಯೊಂದು ಇಲ್ಲದೆ ಇರಲಿಲ್ಲ. ಇದು ದಾಸಕೂಟದ ವ್ಯವಸ್ಥೆ. ಹರಿದಾಸರೆಲ್ಲ ಒಂದೇ ಕುಟುಂಬ ; ಅವರು ಎಲ್ಲೇ ಇರಲಿ ಒಂದು ಕುಟುಂಬಕ್ಕೆ ಸೇರಿ ದವರು. 'ಹರಿದಾಸರೆನ್ನ ಬಾಂಧವರು' ಎಂದು ಪುರಂದರದಾಸರು ಹಾಡಿದರು. ಅಂಕಿತವಿಲ್ಲದೆ, ದೀಕ್ಷೆಯಿಲ್ಲದೆ ಯಾರೂ ಹರಿದಾಸರಾಗಲಾರರು ; ದಾಸಕೂಟಕ್ಕೆ ಸೇರ ದವರು ಅಂಕಿತವನ್ನು, ದೀಕ್ಷೆಯನ್ನು ಕೊಡುವ ಹಾಗಿಲ್ಲ. ಭಾಗವತರಿಗೆ, ಪುರಾಣಿಕರಿಗೆ, ಗಮಕಿಗಳಿಗೆ ಇಂಥ ಕಟ್ಟುಪಾಡೇನು ಇಲ್ಲ. ದಾಸಕೂಟ ಕಾಲ್ಪನಿಕವಾದ, ಭಾವ ಪ್ರಧಾನವಾದ ಒಂದು ವ್ಯವಸ್ಥೆಯಲ್ಲಿ ನಿಂತಿರುವುದು ಸ್ವಾರಸ್ಯ. ಆದರೆ ದಾಸಕೂಟದ ವ್ಯವಸ್ಥೆ ವಿಚಿತ್ರವಾದುದು ; ಅದಕ್ಕೆ ಒಂದೆಡೆ ನೆಲೆಯೆಂಬುದಿಲ್ಲ, ಅದನ್ನು ನಿರ್ವಹಿಸುವರೆಂಬ ಅಧಿಕಾರಿಗಳು ಇರುವುದಿಲ್ಲ. ಅದಕ್ಕೆ ಎಲ್ಲಿಯೂ ಯಾವ ಬಗೆಯದೂ ಮೂರ್ತಸ್ವರೂಪವಿಲ್ಲ. ಎಲ್ಲೆಲ್ಲಿಯೋ ಇರುವ, ಎಷ್ಟು ಕಾಲದಲ್ಲಿಯೂ ಇದ್ದ, ಹರಿ ದಾಸರ ಸಮುದಾಯ, ಸಮವಾಯ, ಸಮಷ್ಟಿ. ದಾಸಕೂಟ ಹರಿದಾಸರ ಮನಸ್ಸಿ

ನಲ್ಲಿರುತ್ತದೆ ಅಷ್ಟೆ ; ಅದಕ್ಕೆ ಹೊರಗಿನ ಆಕಾರವಿಲ್ಲ. ದಾಸಕೂಟವೆನ್ನುವ ಭಾವನೆಯು ಎಲ್ಲ ಹರಿದಾಸರ ಮನಸ್ಸಿನಲ್ಲಿಯೂ ಇದ್ದು, ತಾವು ಅದಕ್ಕೆ ಚೇತನದಿಂದಲೂ, ಸಂಕಲ್ಪದಿಂದಲೂ, ಸಂಸ್ಕಾರದಿಂದಲೂ ಸೇರಿದವರೆನ್ನುವ ನಿಷ್ಠೆಯಿರುತ್ತದೆ.

ದಾಸಕೂಟಕ್ಕಿರುವ ನಿಯಮಗಳೂ ಸಾಧಾರಣವಾದುವು, ಸರ್ವಜನೀನವಾದುದು ; ಮೂಲಭೂತವಾದ ಮಾನವಧರ್ಮಕ್ಕೆ ಸಂಬಂಧಿಸಿದುವು. ಹರಿಯೇ ಪರನೆಂಬ ನಂಬಿಕೆ, ಮನುಷ್ಯನು ಅವನಿಗೆ ಅಧೀನ ಎನ್ನುವ ಅರಿವು, ಸಂಸಾರವು ಸತ್ಯ ಎಂಬ ಪರಿವೆ, ವೇದ–ಶಾಸ್ತ್ರ–ಪುರಾಣೇತಿಹಾಸಗಳಲ್ಲಿ ನಂಬಿಕೆ, ಸಾಲ ಮಾಡದಿರುವುದು, ಸಾಲದೆನದಿರುವುದು. ನಾಳೆಗೆಂದು ಇಡದಿರುವುದು, ಹರಿದಿನ–ವ್ರತಾಚರಣೆ ಬಿಡದಿರುವುದು, ದೈವನಿಂದೆ ಕೇಳಿದರೆ ಆತ್ಮಶುದ್ಧಿ ಮಾಡಿಕೊಳ್ಳುವುದು, ಹರಿಸೇವೆಗೇ ಜೀವನವನ್ನು ಮೀಸಲಾಗಿಡುವುದು, ಅನ್ನಪಾನಕ್ಕೆ ಅವಸರ ಬೀಳದಿರುವುದು, ಇಂದ್ರಿಯಗಳನೆಲ್ಲ ನಿಗ್ರಹಿಸುವುದು, ಭಾವಶುದ್ಧಿಯಲಿ ನಿತ್ಯ ತಿರುಗುವುದು, ಕಣ್ಣಿದ್ದೂ ಕುರುಡನೆಂದೆನಿಸುವುದು ಇವೆಲ್ಲ ಹರಿದಾಸ್ಯದ ನಿಯಮಾವಳಿಯಲ್ಲಿ ಸೇರುತ್ತವೆ. ದಾಸರು ಪ್ರಾಪಂಚಿಕವಾದ ಯಾವ ಉದ್ಯೋಗವನ್ನೂ ಹಿಡಿಯುವುದಿಲ್ಲ ; ಸಾಮಾನ್ಯ ವ್ಯವಹಾರಗಳಲ್ಲಿ ಪಾಲುಗೊಳ್ಳುವುದಿಲ್ಲ. ಗಳಿಸಿ ಕೂಡಿಡುವ ಗೀಳು ಅವರಿಗೆ ಸಲ್ಲದು. ಮುಂದಿನ ವಿಚಾರದಲ್ಲಿ ಅವರು ಆತಂಕಪಡುವುದಿಲ್ಲ. ಕೊಡುವ ಕರ್ತೃ ಬೇರೆ ಇರಲಾಗಿ ನಾನೇಕೆ ಬಡವ ? ನನಗೆಲ್ಲಿಯ ಚಿಂತೆ ? ಅಂಜಿಕೆ ಇನ್ನು ಏತಕ್ಕೆ ? ಬಂದುದೆಲ್ಲ ಬರಲಿ, ಗೋವಿಂದನ ದಯವೊಂದಿರಲಿ – ಇದು ದಾಸರ ನಿಲುವು. ಈ ನಿಲುವಿಗೆ ಅನುಕೂಲವಾಗತಕ್ಕ ನಿಯಮಗಳನ್ನು ಅವರು ಪಾಲಿಸುತ್ತಾರಷ್ಟೆ.

ಈ ನಿಯಮಗಳನ್ನೂ, ಅದಕ್ಕೆ ಮೂಲಭೂತವಾದ ಮನೋಧರ್ಮವನ್ನೂ, ಮನಸಾರೆ ಒಪ್ಪಿ, ಮನವೊಪ್ಪುವಂತೆ ನಡೆಸಿದರೆ ಆಯಿತು. ನಡವಳಿಕೆಯ ಪರಿಶೀಲನೆಯಾಗಲಿ ಪರಾಮರ್ಶೆಯಾಗಲಿ ಅವರವರಿಗೆ ಬಿಟ್ಟದ್ದು. ದಾಸಕೂಟವೆಂದು ವಿಚಾರಣೆ ನಡೆಸುವ ವ್ಯವಸ್ಥೆ ಏನೂ ಇರದು. ಕೂಟಕ್ಕೆ ಸೇರಿಸಿಕೊಳ್ಳುವುದಾಗಲಿ, ಕೂಟದಿಂದ ಹೊರಗೆ ಹಾಕುವುದಾಗಲಿ ನಡೆಯುವುದಿಲ್ಲ. ಕೂಟಕ್ಕೆ ಸದಸ್ಯತ್ವವೆನ್ನುವ ಬಾಹ್ಯ ಲಾಂಛನವಾಗಲಿ, ಶುಲ್ಕವಾಗಲಿ ಇರದು. ದಾಸಕೂಟವು ಯಾವ ಮಠಕ್ಕಾಗಲಿ, ಮತಕ್ಕಾಗಲಿ ಸೇರಿದ ಸಂಸ್ಥೆಯಲ್ಲ.

ದಾಸಕೂಟಕ್ಕೆ ಮುಖ್ಯವಾದುದು ಪರಂಪರೆ. ಈ ಪರಂಪರೆ ಶ್ರೀಪಾದರಾಜರಿಂದ ಪ್ರವರ್ತಿತವಾಯಿತೆಂದು ನಂಬಿಕೆಯಿದೆ. ಅವರ ಶಿಷ್ಯರಾದ ಪುರಂದರದಾಸರ ಕಾಲದಲ್ಲಿಯೂ, ಅವರ 'ಶಿಷ್ಯ'ರಾದ ವಿಜಯದಾಸರ ಕಾಲದಲ್ಲಿಯೂ ದಾಸಕೂಟವು ವ್ಯಾಪಕವಾಯಿತೆಂದೂ ಪ್ರತೀತಿ. ಹಾಗೆಂದೇ ದಾಸಕೂಟದವರು ಈ ಶ್ಲೋಕವನ್ನು ಮೂಲಮಂತ್ರದಂತೆ ಬಳಸುತ್ತಾರೆ.

ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ ।
ನಮಃ ಪುರಂದರಾರ್ಯಾಯ ವಿಜಯರಾಜಾಯ ತೇ ನಮಃ ॥

ಈ ನಾಲ್ವರಲ್ಲಿ ಶ್ರೀಪಾದರಾಜರೂ ವ್ಯಾಸರಾಯರೂ ಪುರಂದರದಾಸರೂ ಹೆಚ್ಚು ಕಡಮೆ ವಿಜಯನಗರ ಸಾಮ್ರಾಜ್ಯಕ್ಕೆ ಸೇರಿದವರು. ವಿಜಯದಾಸರು ಸುಮಾರು ಒಂದು ನೂರು ವರ್ಷಗಳನಂತರ ಬಂದವರು ; ಅವರಿಗೆ ಪುರಂದರದಾಸರು ಕನಸಿನಲ್ಲಿ ಕಾಣಿಸಿಕೊಂಡು ಅಂಕಿತವನ್ನು ಕೊಟ್ಟರಂತೆ. ಅವರ ಸ್ಥಳ ಈಗಿನ ಹೈದರಾಬಾದು ಪ್ರಾಂತ್ಯದ ರಾಯಚೂರು ಪ್ರದೇಶ. ಒಂದು ದೃಷ್ಟಿಯಲ್ಲಿ ವಿಜಯನಗರದ ಹಂಪಿಯಿಂದ ದಾಸಕೂಟದ ಕೇಂದ್ರವು ಇಲ್ಲಿಗೆ ಬದಲುಗೊಂಡಿತು ಎನ್ನಬಹುದು. ಪುರಂದರದಾಸರ ಕಾಲದ ನಂತರ ಮರೆಯಾಗಿಬಿಟ್ಟ ದಾಸಕೂಟವನ್ನು ಮತ್ತೆ ಉಸಿರುಕೊಟ್ಟು ಬದುಕಿಸಿದವರು ವಿಜಯದಾಸರು. ಇವರಿಗೆ ಹಲವಾರು ಶಿಷ್ಯರಾದರು, ಒಬ್ಬೊಬ್ಬ ಶಿಷ್ಯನಿಗೂ ಪ್ರಶಿಷ್ಯರಾದರು. ವಿಜಯದಾಸರ ನಂತರ ಗೋಪಾಲವಿಠಲ, ವೆಂಕಟವಿಠಲ, ವ್ಯಾಸವಿಠಲ, ಮೋಹನವಿಠಲ ಮೊದಲಾದ ಅಂಕಿತಗಳನ್ನು ಪಡೆದುಕೊಂಡವರು ತಂತಮ್ಮ ಪರಂಪರೆಗಳನ್ನು ಬೆಳೆಸಿದರು. ಈ ಪರಂಪರೆಗಳಲ್ಲಿ ಕೆಲವು ಇಂದಿನವರೆಗೂ ಉಳಿದುಕೊಂಡು ಬಂದಿವೆ. ಚಿಪ್ಪಗಿರಿ, ಗದ್ವಾಲ, ಮಾನ್ವಿ. ಸುರಪುರ, ಖೇಡ, ಸಂತೆಬೆನ್ನೂರು, ಹರಪನಹಳ್ಳಿ, ಲಿಂಗಸುಗೂರು, ದೊಡ್ಡಬಳ್ಳಾಪುರ, ರಾಣಿಬೆನ್ನೂರು, ಮಳದೇವರಾಯನದುರ್ಗ, ಕಂಪ್ಲಿ, ಚಿಕ್ಕೋಡಿ ಈ ಸ್ಥಳಗಳು ಪ್ರಧಾನವಾಗಿ ಹರಿದಾಸರ ಕಾರ್ಯಕ್ಷೇತ್ರಗಳಾದುವು.

ಈ ಪರಂಪರೆಗಳಲ್ಲಿ ಬಂದ ಹರಿದಾಸರು ತಮ್ಮ ಪ್ರಾಚೀನರನ್ನು ಸ್ಮರಿಸಿಕೊಳ್ಳುವ ಸಂಪ್ರದಾಯವಿದೆ. ಈ ಪರಂಪರೆಯೇ ದಾಸಕೂಟದ ಮೂರ್ತರೂಪ ಎಂದರೆ ತಪ್ಪಾಗದು.

ಎಲ್ಲ ಪರಂಪರೆಗಳಿಗೂ ಆದ್ಯರು ವಿಜಯದಾಸರೇ (೧೬೮೭–೧೭೫೫), ಅವರಿಗೆ ಪ್ರಾಚೀನರೆಂದರೆ ಪುರಂದರದಾಸರು (೧೪೮೪–೧೫೬೪), ಅವರ ಹಿಂದಿನವರು ವ್ಯಾಸತೀರ್ಥರು (೧೪೪೭–೧೫೩೯), ಅವರ ಗುರುಗಳು ಶ್ರೀಪಾದರಾಜರು (ಸುಮಾರು ೧೪೫೦), ದಾಸಕೂಟದ ಎಲ್ಲರಿಗೂ ಈ ನಾಲ್ವರು ಹಿರಿಯರೇ, ಪ್ರಾಚೀನರೇ, ಆದ್ಯರೇ ಹೀಗೆಂದೇ ಅವರ ಸ್ತೋತ್ರ ಪ್ರಸಕ್ತವಾಗಿದೆ.

ದಾಸಕೂಟದ ಸ್ವಾರಸ್ಯವೆಂದರೆ ಅವರು ಸುಮಾರು ಐದುನೂರು ವರ್ಷಗಳಲ್ಲಿ ಸಿದ್ಧಪಡಿಸಿರುವ ವಿಪುಲವಾದ, ವಿಶಿಷ್ಟವಾದ ಸಾಹಿತ್ಯ. ಪುರಂದಂರದಾಸರೊಬ್ಬರೇ ನಾಲ್ಕುಲಕ್ಷ ಎಪ್ಪತ್ತೈದುಸಾವಿರ ಕೃತಿಗಳನ್ನು ರಚಿಸಿದರೆಂದು ಪ್ರತೀತಿ ; ಅವರಿಂದ ಅಂಕಿತವನ್ನು ಪಡೆದುಕೊಂಡ ವಿಜಯದಾಸರು ಇಪ್ಪತ್ತೈದುಸಾವಿರ ಕೃತಿಗಳನ್ನು ರಚಿಸಿ ಐದುಲಕ್ಷವನ್ನು ಪೂರ್ಣ ಮಾಡಿದರಂತೆ ! ಜಗನ್ನಾಥದಾಸರು ನೂರಾರು

ಪದಗಳನ್ನಲ್ಲದೆ 'ಹರಿಕಥಾಮೃತಸಾರ'ವೆನ್ನುವ ದೊಡ್ಡ ಗ್ರಂಥವನ್ನೂ ರಚಿಸಿದರು. ಗೋಪಾಲದಾಸರು ಮೊದಲಾದವರು ಕೂಡ ಅಧಿಕ ಸಂಖ್ಯೆಯಲ್ಲಿ ಪದಗಳನ್ನು ರಚಿಸಿದ್ದಾರೆ. ಹೀಗಾಗಿ ಹರಿದಾಸಸಾಹಿತ್ಯವೆನ್ನುವುದು ಕನ್ನಡ ವಾಙ್ಮಯದ ವಿಶಿಷ್ಟವಾದ ಒಂದು ಪ್ರಕಾರವಾಗಿ ಪರಿಣಮಿಸಿದೆ. ಅದರ ಸಮಗ್ರವಾದ ಅಧ್ಯಯನ ಇನ್ನೂ ನಡೆಯಬೇಕಾಗಿದೆ; ಎಲ್ಲ ದಾಸರ ಕೃತಿಗಳ ಸಂಗ್ರಹದ ಕೆಲಸ ಕೂಡ ಸರಿಯಾಗಿ ನಡೆದಿಲ್ಲ.

ದಾಸರ ರಚನೆಗಳೆಲ್ಲ ಕನ್ನಡನುಡಿಯಲ್ಲಿವೆ; ಕವಿತೆಗಳ ಧಾಟಿಯಲ್ಲಿವೆ. ಅವುಗಳಿಗೆ ರಾಗ, ತಾಳಗಳನ್ನು ಅಳವಡಿಸಿರುವುದೂ ಉಂಟು. ಕಲಿಯುಗದಲ್ಲಿ ದೇವರು ಕೀರ್ತನೆಗೆ ಒಲಿಯುವನು ಎನ್ನುವ ನಂಬಿಕೆ ಇದಕ್ಕೆ ಕಾರಣ. ಶ್ರೀಪಾದರಾಯರು—

ಧ್ಯಾನವು ಕೃತಯುಗದಲ್ಲಿ ಯಜನ
ಯಜ್ಞವು ತ್ರೇತಾಯುಗದಲ್ಲಿ
ದಾನವಾಂತಕನ ದೇವತಾರ್ಚನೆಯು
ದ್ವಾಪರಯುಗದಲ್ಲಿ ಕಲಿಯುಗದಲಿ ಗಾನದಿ
ಕೇಶವನೆಂದರೆ ಕೈಗೊಡುವನು ರಂಗವಿಠಲ !

ಎಂದು ಹೇಳಿ ಕೀರ್ತನ ಪದ್ಧತಿಗೆ ಕಾರಣರಾದರು. ಭಗವದ್ಭಕ್ತಿಗಾಗಿ ಸಂಗೀತವನ್ನು ಕಾವ್ಯವನ್ನು ಹರಿದಾಸರು ಹಿಡಿದರು. ಕರ್ನಾಟಕ ಸಂಗೀತಪದ್ಧತಿಯ ಮೊದಲ ಹಂತಗಳಲ್ಲಿ ಹರಿದಾಸರು ನೆರವಾದುದೂ ಸ್ವಾರಸ್ಯವಾದ ವಿವರವೇ; ಅದರ ಪ್ರಸ್ತಾಪ ಬೇರೆಡೆ ಬರುತ್ತದೆ.

ಹರಿದಾಸರು ಕನ್ನಡವನ್ನು ಹಿಡಿದುದು ಇಲ್ಲಿ ಮುಖ್ಯವಾದುದು. ಭಾಗವತರೂ, ಪುರಾಣಿಕರೂ ಮೂಲ ಸಂಸ್ಕೃತವನ್ನೇ ಹೇಳಿ, ಕನ್ನಡದಲ್ಲಿ ಅರ್ಥವನ್ನು ವಿವರಿಸುತ್ತಿದ್ದರು; ಪಂಡಿತರಂತೂ ಸಂಸ್ಕೃತದಲ್ಲಿಯೇ ವಾಕ್ಯಾರ್ಥಗಳನ್ನೂ ವ್ಯಾಖ್ಯಾನಗಳನ್ನೂ ನಡೆಸುತ್ತಿದ್ದರು. ಕನ್ನಡವು ಮುಡಿಗೆ ಬಾರದು ಎನ್ನುವ ಹಟ ಅವರಲ್ಲಿ. ಹರಿದಾಸರಲ್ಲಿ ಆದ್ಯರು ಸಂಸ್ಕೃತ ಪಂಡಿತರೇ ಆಗಿದ್ದರೂ ಜನಗಳಿಗೆ ತಿಳಿಯ ಹೇಳುವ ಕೆಲಸಕ್ಕೆ ಕನ್ನಡವನ್ನು ಧಾರಾಳವಾಗಿ ಬಳಸಿದರು. ದಾಸಕೂಟದ ಪ್ರವರ್ತಕರೆನಿಸಿದ ಶ್ರೀಪಾದರಾಜರೇ ಕನ್ನಡದಲ್ಲಿ ಉಗಾಭೋಗಗಳನ್ನೂ, ವೃತ್ತನಾಮಗಳನ್ನೂ ರಚಿಸಿದರು; ಪೂಜೆಯ ಕಾಲದಲ್ಲಿ ಅವನ್ನು ಹಾಡುವ ಪದ್ಧತಿಯನ್ನೂ ಹಾಕಿಕೊಟ್ಟರು! ಅವರ 'ಭ್ರಮರ' 'ವೇಣು' ಮತ್ತು 'ಗೋಪೀ' ಗೀತಗಳು ತಿಳಿಗನ್ನಡದ ಕವಿತೆಗಳು. ವ್ಯಾಸತೀರ್ಥರು ಆ ಕಾಲಕ್ಕೆ ಮಹಾಪಂಡಿತರೆಂದು ಪ್ರಸಿದ್ಧರಾಗಿದ್ದರೂ. 'ತರ್ಕತಾಂಡವ' 'ನ್ಯಾಯಾಮೃತ'ಗಳಂಥ ಕ್ಲಿಷ್ಟ ಶಾಸ್ತ್ರಗ್ರಂಥಗಳನ್ನು ರಚಿಸಿದವರೆಂದು

ವಿಖ್ಯಾತರಾಗಿದ್ದರೂ. ಕನ್ನಡದಲ್ಲಿ ಗೀತೆಗಳನ್ನು ಬರೆದರು. ಮಠಾಧಿಪತಿಗಳೂ, ಸಂಪ್ರದಾಯನಿಷ್ಠರೂ, ಶಾಸ್ತ್ರಪಾರಂಗತರೂ ಆದ ಇವರಿಬ್ಬರು ವಿಜಯನಗರದ ಅರಸರಿಂದಲೂ ಮಹಾಜನರಿಂದಲೂ ಸನ್ಮಾನಿತರಾಗಿದ್ದವರು ; ಉಜ್ಜ್ವಲವಾದ ವ್ಯಕ್ತಿತ್ವ ಆವರಿಬ್ಬರದು. ವೇದಾಂತವಾಕ್ಯಾರ್ಥಗಳಲ್ಲಿ ಅವರ ಬಾಯಿಕಟ್ಟುವವರು ಇಡೀ ದೇಶದಲ್ಲಿಯೇ ಇರಲಿಲ್ಲ. ಇಂಥವರು ಕನ್ನಡಭಾಷೆಯಲ್ಲಿ ಬರೆಯತೊಡಗಿದುದು ಅವರ ಕಾಲದ ಒಂದು ಕ್ರಾಂತಿಯೇ ಆಗಿಹೋಯಿತು.

ಕನ್ನಡದ ಪುಣ್ಯ, ಈ ಹಿರಿಯರ ಆದರ್ಶ ಸಫಲವಾಯಿತು ; ಕನ್ನಡದಲ್ಲಿ ಹರಿದಾಸ ಸಾಹಿತ್ಯದ ಬೆಳೆ ಯಥೇಚ್ಛವಾಗಿ ಬಂದಿತು. ಪುರಂದರದಾಸರ ಕೈಯಿಂದ ಕನ್ನಡದ ಜಾಯಮಾನ ಪ್ರೌಢವಾಯಿತು ; ಮುಂದೆ ಸಾರೋದ್ಧಾರವಾಗಿ ಬೆಳೆಯಿತು. ವೇದಾಂತದ ಪ್ರಮೇಯಗಳು, ಶಾಸ್ತ್ರಗ್ರಂಥಗಳ ಸಾರ, ಆಚಾರ್ಯರ ಬೋಧೆ ಇವೆಲ್ಲ ತಿಳಿಗನ್ನಡದಲ್ಲಿ ಸಾಮಾನ್ಯಮನುಷ್ಯರಿಗೆ ಎಟುಕುವಂತೆ ಮಾಡಿದವರು ಹರಿದಾಸರು. ಮೇಲುಮಟ್ಟದ ಸಂಸ್ಕೃತ ಕೆಳಗಿನ ಮಟ್ಟಗಳಲ್ಲಿಯೂ ಹರಿಯುವಂತೆ ಮಾಡಲು ಅವರು ಶ್ರಮಿಸಿದರು. ಇದಕ್ಕೆ ವಿರೋಧವಿರಲಿಲ್ಲವೆಂದಲ್ಲ. ಹಳೆಯ ಪದ್ಧತಿಯ ಪಂಡಿತರು ತತ್ತ್ವಜಿಜ್ಞಾಸೆಗೆ, ಶಾಸ್ತ್ರಪ್ರವಚನಕ್ಕೆ, ಭಗವದಾರಾಧನೆಗೆ ಸಂಸ್ಕೃತವೇ ಸರಿ ; ಕನ್ನಡ ಕೆಲಸಕ್ಕೆ ಬಾರದು ಎಂದು ವಾದಮಾಡಿದರು. ಭಕ್ತಿಗಿಂತ ಜ್ಞಾನ ಮುಖ್ಯ ; ಜ್ಞಾನವು ಶಾಸ್ತ್ರಗಳ ಆಲೋಡನೆಯಿಂದಲೇ ಬರತಕ್ಕದು. ಇದನ್ನು ಸಂಸ್ಕೃತದ ನೆರವಿನಿಂದಲೇ ಸಾಧಿಸಿಕೊಳ್ಳಬೇಕು ಎನ್ನುವ ಹಟ ಅವರದ್ದು. ಅವರಿಗೆ ಶಾಸ್ತ್ರಪಾಂಡಿತ್ಯ, ಸಂಸ್ಕೃತಜ್ಞಾನ, ಆಚಾರ ನಿಷ್ಠೆ ಇವು ಅನಿವಾರ್ಯವೆನಿಸಿದುವು.

ಮಠದಲ್ಲಿ ವಿದ್ವಾಂಸರಾಗಿದ್ದವರು ತಮ್ಮ ಪ್ರತಿಷ್ಠೆಯನ್ನು ಕಾಪಿಟ್ಟುಕೊಳ್ಳಲು ಈ ನಿಲುವಿನ ಮೇಲೆ ನಿಂತು ಹೋರಾಡಿದರು. ಮಠಾಧಿಪತಿಗಳು ಇವರನ್ನು ಎದುರು ಹಾಕಿಕೊಳ್ಳುವ ಹಾಗೆ ಇರಲಿಲ್ಲ ; ಇವರ ಪ್ರಾಬಲ್ಯ ಎಲ್ಲ ಮಠಗಳಲ್ಲಿಯೂ ಇದ್ದಿತು. ಇವರನ್ನು ಜನ 'ವ್ಯಾಸಕೂಟ'ದವರೆಂದು ನಿರ್ದೇಶಿಸಿದರು. ಶಾಸ್ತ್ರಗ್ರಂಥಗಳ ರಚನೆ, ವ್ಯಾಖ್ಯಾನ, ಪಾಠ ಇವೇ ಇವರ ಮುಖ್ಯ ವ್ಯಾಸಂಗಗಳು. ಶಾಸ್ತ್ರಗಳನ್ನು ಓದದೆ, ಓದಿದರೂ ತಲೆಯ ಮೇಲೇರಿಸಿಕೊಳ್ಳದೆ, ದೂರದಿಂದಲೇ ಕೈಮುಗಿದು, ಭಕ್ತಿಯ ನೆಲೆಯಲ್ಲಿ ಕನ್ನಡದಲ್ಲಿಯೇ ತಮ್ಮ ಮುಕ್ತಿಯನ್ನು ಸಾಧಿಸಿಕೊಳ್ಳಲು ಹಾಡುಗಳನ್ನು ಕಟ್ಟಿ, ಹಾಡಿ, ಅವುಗಳ ಗತಿಗೆ ಕುಣಿದು ಜನಗಳಲ್ಲಿ ಭಕ್ತಿಮಾರ್ಗವನ್ನು ಪ್ರಚಾರ ಮಾಡುತ್ತಿದ್ದವರು ದಾಸಕೂಟದವರು. ವ್ಯಾಸಕೂಟಕ್ಕೂ ದಾಸಕೂಟಕ್ಕೂ ಭೇದವೂ ವಿರೋಧವೂ ಯಾವ ಕಾಲದಲ್ಲಿ ಸ್ಪಷ್ಟವಾಗಿ ಮೈದುಂಬಿ ಬಂದುವೋ ಹೇಳುವುದು ಕಷ್ಟ. ಕನ್ನಡದಲ್ಲಿ ಹರಿದಾಸ ಸಾಹಿತ್ಯಕ್ಕೆ ಪ್ರವರ್ತಕರೆನಿಸಿದ ಶ್ರೀಪಾದರಾಜರ ಕಾಲದಲ್ಲಿಯೇ ವ್ಯಾಸಕೂಟದವರು ದಾಸಕೂಟದವರೂ ಬೇರೆ ಬೇರೆ ದಾರಿಗಳನ್ನು

ಹಿಡಿಯಲಾರಂಭಿಸಿದರೆಂದು ತೋರುತ್ತದೆ. ವ್ಯಾಸತೀರ್ಥರ ಕಾಲದಲ್ಲಂತೂ ಇವು ಬೇರೆಯಾದುದು ಸ್ಪಷ್ಟವಾಗಿದ್ದಿತು ; ಅವರ ಶಿಷ್ಯರಾದ ಪುರಂದರದಾಸರೇ ದಾಸ ಕೂಟದ ಅಧ್ವರ್ಯುಗಳಾದರು. ಆದರೆ ಶ್ರೀಪಾದರಾಜರೂ, ವ್ಯಾಸತೀರ್ಥರೂ ಮಠಾಧಿಪತಿಗಳಾಗಿದ್ದು ವ್ಯಾಸ–ದಾಸಕೂಟಗಳೆರಡಕ್ಕೂ ಪೋಷಕರಾಗಿದ್ದರು.

ಮುಂದೆ ಹೀಗೆಯೇ ಸೋದೆಮಠದ ವಾದಿರಾಜರೂ, ಮಂತ್ರಾಲಯ ರಾಘ ವೇಂದ್ರ ಸ್ವಾಮಿಗಳೂ ಎರಡೂ ಕೂಟಗಳನ್ನು ಬೆಳೆಸಿಕೊಂಡು ಬಂದರು. ಆದರೆ ಬಹುಮಟ್ಟಿಗೆ ದಾಸಕೂಟವು ಮಠಗಳಿಂದ ದೂರ ಸರಿಯಿತೆನ್ನಬಹುದು. ಕರ್ಮಠ ರಾದ, ವಾದನಿಷ್ಣಾತರಾದ ಪಂಡಿತರು ದಾಸರನ್ನು ಹತ್ತಿರ ಇರಗೊಡಲಿಲ್ಲ. ಕಾಲಕ್ರಮದಲ್ಲಿ ದಾಸಕೂಟ ಬಲಹೀನವಾಗಿ ಉಳಿದುಕೊಂಡದು ಈ ವಿರೋಧದ ಪರಿಣಾಮವಾಗಿಯೇ ಇದ್ದೀತು. ದಾಸಕೂಟವು ಮಾಧ್ವಮಠದ ವ್ಯಾಪ್ತಿಯಲ್ಲಿಯೇ ಬೆಳೆಯಬೇಕಾಗಿಬಂದುದೂ, ಮಾಧ್ವಮಠಗಳು ಪ್ರಬಲವಾದುದೂ ಕಾರಣಗಳಿರ ಬಹುದು. ಕೆಲವು ಮಠಗಳೇನೋ ಹರಿದಾಸಪಂಥವನ್ನು ಪೋಷಿಸಿಕೊಂಡು ಬಂದು ವೆಂದು ಹೇಳಬೇಕು ; ಆದರೆ ಇವು ನಿಯಮದ ಅಪವಾದಗಳಂತೆ.

ವ್ಯಾಸಕೂಟಕ್ಕೂ ದಾಸಕೂಟಕ್ಕೂ ನಡುವೆ ಇದ್ದ ವ್ಯತ್ಯಾಸವನ್ನೂ, ಅದರ ಸ್ವಾರಸ್ಯವನ್ನೂ ಜನರಂತೂ ಗಮನಿಸಿದರು ; ಅವರ ಒಲವು ದಾಸಕೂಟದ ಕಡೆಗಿದ್ದಿ ತೆಂದು ಬೇರೆ ಹೇಳಬೇಕಾಗಿಲ್ಲ. ಎರಡರ ಮೂಲಪ್ರಮೇಯಗಳು ಒಂದೇ ಆದರೂ, ಎರಡರ ಹಿಂದಿದ್ದ ತಾತ್ವಿಕ ನೆಲೆ ಒಂದೇ ಆಗಿದ್ದರೂ ಅವು ಹಿಡಿದ ದಾರಿಗಳು ಬೇರೆ ಯೆಂಬುದು ಜನರಿಗೆ ಅರಿವಾದುದು ಆಶ್ಚರ್ಯವೇನಿಲ್ಲ ; ಭಕ್ತಿಯಿಂದಲೇ ಮುಕ್ತಿ, ಬೇರೆ ದಾರಿಯಿಲ್ಲ ಎನ್ನುವುದು ಹರಿದಾಸರ ಬೋಧೆಯ ತಿರುಳೆಂಬುದು ಜನರಿಗೆ ತಟ್ಟನೆ ಮನದಟ್ಟಾಯಿತು. ಈ ನಿಲುವು ಅವರಿಗೆ ಹಿಡಿಸಿಯೂ ಓಡಿಸಿತು. ದಾಸರು ಬಳಸಿದ ಭಾಷೆಯೂ ಜನರಿಗೆ ತಿಳಿಯುವಂಥದೇ. ಜಗನ್ನಾಥದಾಸರು ತಮ್ಮ 'ಹರಿಕಥಾಮೃತ ಸಾರ'ದಲ್ಲಿ —

ಸಂಸ್ಕೃತವಿದಲ್ಲೆಂದು ಕುಹಕಿ ತಿ –
ರಸ್ಕರಿಸಲೇನಹುದು, ಭಕ್ತಿ ಪು –
ರಸ್ಕರದಿ ಕೇಳ್ವರಿಗೆ ಒಲಿವನು ಪುಷ್ಕರಾಕ್ಷ ಸದಾ

ಕೃತಿಪತಿಕಥಾನ್ವಿತವೆನಿಪ ಪ್ರಾ –
ಕೃತವೇ ತಾ ಸಂಸ್ಕೃತವೆನಿಸಿ ಸ –
ದ್ಗತಿಯನೀವುದು ಭಕ್ತಿಪೂರ್ವಕ ಕೇಳಿ ಪೇಳ್ವರಿಗೆ

ಎಂದು ಹೇಳಿರುವುದು ಬರಿಯ ಸಮಾಧಾನವಲ್ಲ ; ಪ್ರಬೋಧನೆಯೇ ಎನ್ನಬಹುದು.

ವ್ಯಾಸಕೂಟದ ಹಟವಮಾರಿಗಳಿಗೆ ಇದು ಉತ್ತರದಂತಿದೆ. ಜನಸಾಮಾನ್ಯರು ಮೆಚ್ಚಿ ಕೊಂಡರು ; ದಾಸರನ್ನೂ ಅವರ ಹಾಡುಗಳನ್ನೂ ಆದರದಿಂದ ಬರಮಾಡಿಕೊಂಡರು.

## ಪೀಳಿಗೆಯಲ್ಲಿ ಮೊದಲಿಗರು

ಹರಿದಾಸಪಂಥವು ಮಧ್ವಾಚಾರ್ಯರಿಂದಲೇ ಆರಂಭವಾಯಿತೆಂದು ದಾಸಕೂಟ ದವರಲ್ಲಿ ನಂಬಿಕೆಯಿದೆ. ದ್ವೈತಮತಪ್ರವರ್ತಕರಾದ ಮಧ್ವಾಚಾರ್ಯರು ಹನ್ನೆ ರಡನೆಯ ಶತಮಾನದ ಕಡೆಯ ಭಾಗದಲ್ಲಿದ್ದವರು ; ದಕ್ಷಿಣಕನ್ನಡ ಜಿಲ್ಲೆಯಲ್ಲಿ ಹುಟ್ಟಿ ಇಡೀ ದೇಶವನ್ನೆಲ್ಲ ಸುತ್ತಾಡಿ, ಪ್ರಸ್ಥಾನತ್ರಯಕ್ಕೆ ಭಾಷ್ಯ ಬರೆದು ದ್ವೈತವಾದವನ್ನು ಸಮರ್ಥಿಸಿದವರು. ಇವರ ರಚನೆಗಳೆಲ್ಲ ಸಂಸ್ಕೃತದಲ್ಲಿಯೇ ಇವೆ; (ಶಾಸ್ತ್ರಸಾಹಿತ್ಯವೇ ಹೆಚ್ಚು. ಆದರೆ ಅವರ 'ದ್ವಾದಶಸ್ತೋತ್ರ' ಮಾತ್ರ ಗೇಯಗುಣಪ್ರಧಾನವಾದುದು ; ಅದನ್ನು ಕೀರ್ತನಪದ್ಧತಿಗೂ ನೃತ್ಯಕ್ಕೂ ಅಳವಡಿಸಿಕೊಂಡಿದ್ದಾರೆ. ಇಷ್ಟು ಮಾತ್ರ ದಿಂದಲೇ ಅವರು ಹರಿದಾಸಸಾಹಿತ್ಯದ ಮೊದಲಿಗರೆನ್ನುವುದು ತಪ್ಪಾದೀತು. ಅವರು ಕನ್ನಡದಲ್ಲಿ ದೇವರನಾಮಗಳನ್ನು ರಚಿಸಿದರೆಂದು ಯಾವ ಪ್ರತೀತಿಯೂ ಇಲ್ಲ ; ಅವರ ದೆನ್ನುವ ದೇವರನಾಮಗಳು ಯಾವುವೂ ಉಪಲಬ್ಧವಿಲ್ಲ.

ದಾಸಕೂಟದ ಮೇಲೆ ಅವರ ತಾತ್ವಿಕ ನಿಲುವಿನ ಪ್ರಭಾವವಿದ್ದಿತೆನ್ನುವುದೇನೋ ನಿರ್ವಿವಾದ. ದೇವರು ಈಶ, ಮನುಷ್ಯ ದಾಸ ; ಜಗತ್ತು ದಿಟ, ಸಂಸಾರ ಬರಿಯ ಭ್ರಮೆಯಲ್ಲ ; ಜೀವರಲ್ಲಿ ಭೇದವಿದೆ, ತಾರತಮ್ಯವಿದೆ ; ನೈಜವಾದ ಸುಖಾನುಭವವೇ ಮುಕ್ತಿ ; ಮುಕ್ತಿಗೆ ಭಕ್ತಿಯೇ ಸಾಧನ, ಈ ಮಾಧ್ವಪ್ರಮೇಯಗಳನ್ನೆಲ್ಲ ದಾಸ ಸಾಹಿತ್ಯ ಒಪ್ಪಿಕೊಂಡು ವಿವರಿಸಿತು, ವಿಸ್ತರಿಸಿತು, ನಿತ್ಯಜೀವನಕ್ಕೆ ಅನ್ವಯಿಸಿತು. ಆಚಾರ್ಯರ ನಿಲುವಿಗೂ ಭಾಗವತಪಂಥವೇ ಹಿನ್ನೆಲೆ, ಹರಿದಾಸ ಸಾಹಿತ್ಯಕ್ಕೂ ಅದೇ ಹಿನ್ನೆಲೆ. ಅದ್ವೈತಾವಲಂಬಿಗಳಾದವರಲ್ಲಿ ಕೂಡ ಭಾಗವತಪಂಥದವರಿದ್ದರು. (ಬೇಲೂರು ಕೇಶವದಾಸರು ಅಚಲಾನಂದದಾಸರೆನ್ನುವ ಸ್ಮಾರ್ತಭಾಗವತ ಹರಿದಾಸ ರನ್ನು ಉಲ್ಲೇಖಿಸಿದ್ದಾರೆ ; ಅವರ ಎಣಿಕೆಯ ಪ್ರಕಾರ ಇವರು ಒಂಭತ್ತನೆಯ ಶತ ಮಾನದವರು. ಈ ವಿಚಾರವಾಗಿ ಭಿನ್ನಾಭಿಪ್ರಾಯಗಳಿವೆ, ನಿಜ. ಆದರೆ) ಭಾಗವತ ಮನೋಧರ್ಮದಿಂದಲೇ ಹರಿದಾಸಪಂಥ ಹುಟ್ಟಿಕೊಂಡಿತೆನ್ನುವುದಂತೂ ದಿಟ. ಮಾಧ್ವವೇದಾಂತದ ಮುಖ್ಯ ಪ್ರಮೇಯಗಳು ಈ ಮನೋಧರ್ಮಕ್ಕೆ ಅನುವಾಗಿ, ಪೂರಕವಾಗಿ, ಪೋಷಕವಾಗಿ ಇದ್ದುದರಿಂದ ಅವನ್ನು ಒಳಗೊಳ್ಳಲಾಯಿತು.

ಹರಿದಾಸಪಂಥದವರಲ್ಲಿ ಆಗಾಗ, ಅಲ್ಲಲ್ಲಿ ಮಾಧ್ವಮತದ ದೀಕ್ಷೆ ಪ್ರಬಲವಾಗಿ ಕಾಣುವುದುಂಟು ; ಬಹುಮಟ್ಟಿಗೆ ಹರಿದಾಸರು ಮಾಧ್ವಸಂಪ್ರದಾಯಕ್ಕೆ ಸೇರಿದವರೇ. ಒಮ್ಮೊಮ್ಮೆ ಸಂಪ್ರದಾಯದ ವಿಶ್ವಾಸ ಮೇಲೆನಿಂತು ಬರುವುದೂ ಇದೆ ; ಪುರಂದರ ದಾಸರ ಪದಗಳಲ್ಲಿಯೇ ಈ ಅಭಿಮಾನವನ್ನು ಕಾಣಬಹುದು. ಇಂಥ ನಿಷ್ಠೆ, ಅಭಿಮಾನ ಪ್ರಾಸಂಗಿಕವೆನ್ನುವುದನ್ನು ಮರೆಯಬಾರದು. ಹರಿದಾಸಸಾಹಿತ್ಯದ ನಿಲುವು ವ್ಯಾಪಕವಾದುದು. ಸರ್ವಜನೀನವಾದುದು, ಸರ್ವಸಮ್ಮತವಾದುದು. ಅದನ್ನು ಮಾಧ್ವಮತದಲ್ಲಿ ಮಾತ್ರ ಸಂಕೋಚ ಮಾಡಿಬಿಟ್ಟರೆ ತಪ್ಪಾದೀತು. ಹರಿದಾಸರ ದೃಷ್ಟಿಯು ಮತಗಳನ್ನು ಮೀರಿ ನಿಲ್ಲುವಂಥದು, ಎಲ್ಲ ಮತಗಳಿಗೆ ಸರಿದೋರು ವಂಥದು, ಮಾನವೀಯತೆಯನ್ನು ಹಿಡಿಯುವಂಥದು.

ಕನ್ನಡನಾಡಿನಲ್ಲಿ ಹರಿದಾಸಪಂಥ ಸ್ಥಾಪನೆಯಾಗುವ ಕಾಲಕ್ಕೆ ದಕ್ಷಿಣದೇಶದಲ್ಲಿ ಭಕ್ತಿಮಾರ್ಗವನ್ನು ಆಳ್ವಾರರೂ, ನಾಯನಾರರೂ, ವಿಶಿಷ್ಟಾದ್ವೈತಮತದ ಆಚಾರ್ಯತ್ರಯರೂ, ಬಸವಾದಿಶರಣರೂ ಜನರಿಗೆ ಬೋಧಿಸಿದ್ದರು. ಭಕ್ತಿಯು ಸರಳವಾದ ಮಾರ್ಗ, ಸುಲಭವಾದ ಉಪಾಯ ಎನ್ನುವುದು ಜನರಿಗೆ ಸ್ಪಷ್ಟವಾಗಿದ್ದಿತು. ಮಹಾರಾಷ್ಟ್ರದಲ್ಲಿ ಮಹಾನುಭಾವಪಂಥವು ಆಗಲೇ ಪ್ರಬಲವಾಗಿದ್ದಿತ್ತು. ಪಂಢರಪುರದ ಪ್ರದೇಶದಲ್ಲಿ ವಿಠ್ಠಲಭಕ್ತಿ ಬೇರುಬಿಟ್ಟಿದ್ದಿತು ; ಪಂಢರಪುರದ ಪಾಂಡುರಂಗವಿಠ್ಠಲನಿಗೂ ಹರಿದಾಸರಿಗೂ ಬಹಳ ನಂಟು ಮೊದಲಿನಿಂದಲೂ ಬಂದಿದೆ.

ಈ ಎಲ್ಲ ಪ್ರಭಾವವೂ ಕನ್ನಡನಾಡಿಗೆ ಹರಿದುಬಂದುದು ಆಶ್ಚರ್ಯವೇನಲ್ಲ. ಹರಿಕೀರ್ತನಕ್ಕೆ ಸಂಸ್ಕೃತವನ್ನು ಬಿಟ್ಟು ಮರಾಠಿಯನ್ನೂ, ತಮಿಳನ್ನೂ ಬಳಸಿಕೊಂಡ ಆದರ್ಶವೂ ಇದರೊಂದಿಗೆ ಬಂದಿತು. ಹರಿದಾಸರು ಭಕ್ತಿಮಾರ್ಗದ ಉಪಾಸನೆಯನ್ನೂ ಪ್ರಚಾರವನ್ನೂ ಕೈಗೊಂಡು ಕನ್ನಡದಲ್ಲಿ ಭಕ್ತಿಪ್ರಧಾನವಾದ ಸಾಹಿತ್ಯವನ್ನು ಸೃಷ್ಟಿ ಮಾಡಲು ಪಕ್ರಮಿಸಿದುದು ಆಕಸ್ಮಿಕವೇನಲ್ಲ. ಮಾಧ್ವ ವೇದಾಂತದ ಅಧ್ವರ್ಯಗಳೆನಿಸಿದ್ದ ಪ್ರಾಚೀನ ಆಚಾರ್ಯರು ಇವರಿಗೆ ಈ ಕೆಲಸದಲ್ಲಿ ನೆರವಾದುದೂ, ಮಾರ್ಗ ದರ್ಶನಮಾಡಿದುದೂ ಅನಿರೀಕ್ಷಿತವೆನ್ನಬಹುದು. ಶಾಸ್ತ್ರಮರ್ಯಾದೆಯನ್ನು ಎತ್ತಿ ಹಿಡಿಯುವ ಮಠಾಧಿಪತಿಗಳೇ ಹರಿದಾಸರಂತೆ ವ್ಯವಹರಿಸಿದುದು ಕೆಲವರಿಗೆ ಸೋಜಿಗ ವೆನಿಸೀತು. ಆದರೆ ಕನ್ನಡನಾಡಿನ ಪುಣ್ಯದಿಂದ ಇದು ನಡೆಯಿತು.

ಹರಿದಾಸಪೀಳಿಗೆಯಲ್ಲಿ ಮೊದಲನೆಯ ಮೂರು ಮಂದಿಯೂ ಮಠಾಧಿಪತಿಗಳಾಗಿದ್ದ ಯತಿಗಳೇ ; ಶಾಸ್ತ್ರನೈಪುಣ್ಯದಲ್ಲಿ ಅಸಮರಾಗಿದ್ದು ಸಂಸ್ಕೃತಗ್ರಂಥಗಳನ್ನು ರಚಿಸಿದ್ದವರೇ. ಅಂಥವರು ಕನ್ನಡದಲ್ಲಿ ಹಾಡುವ ಪದ್ಧತಿಯನ್ನು ಕೈಹಿಡಿದು ನಡೆಸಿದರು. ಮೊದಲನೆಯವರು ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾಗಿದ್ದ ನರಹರಿ

ತೀರ್ಥರು. ಇವರು ಈಗಿನ ತೆಲುಗುದೇಶದ ಗಂಜಾಂ ಪ್ರಾಂತದಲ್ಲಿರುವ ಶ್ರೀಕಾಕುಳಮ್ಮಿನವರು ; ದೊಡ್ಡ ವಿದ್ವಾಂಸರು. (ಮಧ್ವಾಚಾರ್ಯರ ಪ್ರಭಾವಕ್ಕೆ ಒಳಗಾಗಿ ಅವರ ಶಿಷ್ಯರಾಗಿ ಸಂನ್ಯಾಸಿಗಳಾದನಂತರವೂ ಕಳಿಂಗದೇಶದ ಆಡಳಿತವನ್ನು ೧೨೬೪ ರಿಂದ ೧೨೬೮ರವರೆಗೆ ನಡೆಸಿದರು) . ಆಚಾರ್ಯರ ಪರಂಪರೆಯಲ್ಲಿ ಜಗದ್ಗುರು ಪೀಠವನ್ನೇರಿ 1333ರಲ್ಲಿ ತೀರಿಕೊಂಡರು. ಇವರ ಬೃಂದಾವನ ಹಂಪಿಯ ಚಕ್ರತೀರ್ಥದಲ್ಲಿದೆ. ಆ ಕಾಲಕ್ಕೆ ವೇದಾಂತಶಾಸ್ತ್ರದಲ್ಲಿ ಇಷ್ಟು ಪ್ರಸಿದ್ಧರಾದವರು ಬೇರೊಬ್ಬರಿರಲಿಲ್ಲ. ಇಂಥವರು ಕನ್ನಡದಲ್ಲಿ ದೇವರ ನಾಮಗಳನ್ನು ಮಾಡಿದರೆಂದರೆ ಆಶ್ಚರ್ಯವಲ್ಲವೇ ? ಎಷ್ಟು ಕೃತಿಗಳನ್ನು ಮಾಡಿದ್ದರೋ ತಿಳಿದುಬಂದಿಲ್ಲ: ಒಂದೆರಡಂತೂ ಉಳಿದು ಬಂದಿವೆ. 'ಎಂತುಮರುಳಾದೆ' ಎನ್ನುವ ಆನಂದಭೈರವಿರಾಗದ್ದೊಂದು, 'ಹರಿಯೆ ಇದು ಸರಿಯೆ ?' ಎಂದು ಮೊದಲಾಗುವ ಶ್ರೀರಾಗದ್ದೊಂದು. ಇನ್ನೆರಡೂ ಅವರವು. 'ನರಹರಿ' ಎನ್ನುವುದು ಅವರ ಅಂಕಿತ.

ನರಹರಿತೀರ್ಥರಿಂದ ಕನ್ನಡದಲ್ಲಿ ಹರಿದಾಸ ಸಾಹಿತ್ಯ ಆರಂಭವಾಯಿತೆನ್ನಬಹುದಾದರೂ ಅವರು ದಾಸಕೂಟವನ್ನು ಸ್ಥಾಪಿಸಿ ಮಾಡಿ ಪಂಥಪ್ರವರ್ತಕರಾದರೆ ಎನ್ನುವುದು ಸಂದಿಗ್ಧ.

ಶ್ರೀಪಾದರಾಜರು ೧೪೦೪ರ ಸುಮಾರಿಗಿದ್ದವರು. ನರಹರಿತೀರ್ಥರ ಪರಂಪರೆಯಲ್ಲಿಯೇ ಬಂದ ಸಂನ್ಯಾಸಿಗಳು, ಮಠಾಧಿಪತಿಗಳು. (ಚನ್ನಪಟ್ಟಣ ತಾಲ್ಲೂಕಿನ ಅಬ್ಬೂರು ಬಳಿ ಹಳ್ಳಿಯವರೆಂದೂ, ದಕ್ಷಿಣಾದಿನ ಶ್ರೀರಂಗದವರೆಂದೂ ಬೇರೆ ಬೇರೆ ಪ್ರತೀತಿಗಳಿವೆ. ಸ್ವರ್ಣವರ್ಣತೀರ್ಥರೆನ್ನುವರು ಇವರ ದೀಕ್ಷಾಗುರುಗಳು. ವಿಬುಧೇಂದ್ರ ತೀರ್ಥರೆನ್ನುವರು ವಿದ್ಯಾಗುರುಗಳು. ಇವರ ಆಶ್ರಮನಾಮ ಲಕ್ಷ್ಮೀನಾರಾಯಣ ಮುನಿಗಳೆಂದು. ಶ್ರೀಪಾದರಿಗೆಲ್ಲಾ ರಾಜರಂತೆ ತೇಜಸ್ಸಿನಲ್ಲಿಯೂ ಪಾಂಡಿತ್ಯದಲ್ಲಿಯೂ ತಪಸ್ಸಿನಲ್ಲಿಯೂ ಕಂಗೊಳಿಸುತ್ತಿದ್ದುದರಿಂದ ಇವರನ್ನು ಆ ಕಾಲದಲ್ಲಿದ್ದ ಉತ್ತರಾದಿಮಠದ ರಘುನಾಥತೀರ್ಥರು 'ಶ್ರೀಪಾದರಾಜ'ರೆಂದು ಕರೆದರಂತೆ ; ಆ ಹೆಸರೇ ಉಳಿಯಿತು.

ಇವರು ದೇಶವನ್ನೆಲ್ಲಾ ಸಂಚರಿಸಿ, ಪೆನುಗೊಂಡೆಯ ಸಾಳುವ ನರಸಿಂಹರಾಜನಿಗೆ ಗುರುಗಳಾಗಿ, ಕೋಲಾರಜಿಲ್ಲೆಯ ಮುಳುಬಾಗಿಲಲ್ಲಿ ತಮ್ಮ ಮಠವನ್ನು ಕಟ್ಟಿಕೊಂಡರು; ಅಲ್ಲಿಯೇ ನರಸಿಂಹತೀರ್ಥವೆಂಬ ಕೊಳದ ದಡದಮೇಲೆ ಅವರ ವೃಂದಾವನವಿದೆ. ಈಗಲೂ ಅವರ ಮಠದ ಪರಂಪರೆ ನಡೆದು ಬಂದಿದೆ. 'ನ್ಯಾಯಸುಧಾ'ಗ್ರಂಥಕ್ಕೆ ಅರ್ಥ ಸಂಗ್ರಹರೂಪವಾಗಿ ಅವರು 'ವಾಗ್ವಜ್ರ'ವೆಂಬ ಮಹಾಗ್ರಂಥವನ್ನು ಸಂಸ್ಕೃತದಲ್ಲಿ ಬರೆದಿದ್ದಾರೆ. ದ್ವೈತವೇದಾಂತವಾಙ್ಮಯದಲ್ಲಿ ಇದೊಂದು ಹೆದ್ದೆಲೆಗಲ್ಲು. ಹೀಗೆ ವಿದ್ವತ್ಪ್ರಪಂಚದಲ್ಲಿ ಸನ್ಮಾನ್ಯರೂ, ರಾಜಪೂಜಿತರೂ, ತಪಸ್ವಿಗಳೂ ಆಗಿದ್ದ ಶ್ರೀಪಾದ

ರಾಜರು ತಿಳಿಗನ್ನಡದಲ್ಲಿಯೂ ದೇವರನಾಮುಗಳನ್ನು ರಚಿಸಿದ್ದಾರೆ. ಅವರ ಕನ್ನಡ ಕೃತಿಗಳಲ್ಲಿ 'ಭ್ರಮರಗೀತ', 'ವೇಣುಗೀತ', 'ಗೋಪಿಗೀತಗಳು'ಗಳು ಪ್ರಸಿದ್ಧವಾಗಿವೆ. ಭಾಗವತದ ಸಪ್ತಮಸ್ಕಂಧದಲ್ಲಿ ಬರುವ ನೃಸಿಂಹಸ್ತವವೆಂಬ ೫೨ ಶ್ಲೋಕಗಳನ್ನ ಸೊಗಸಾದ ಶೈಲಿಯಲ್ಲಿ 'ಲಕ್ಷ್ಮೀನೃಸಿಂಹಪ್ರಾದುರ್ಭಾವದಂಡಕ'ವೆಂದು ಕನ್ನಡಿಸಿದ್ದಾರೆ. ಅಚ್ಚುಕಟ್ಟಾದ, ರಸವತ್ತಾದ ಸ್ವತಂತ್ರಕಾವ್ಯದಂತಿದೆ ಇದು. ಅವರ ಐವತ್ತು ದೇವರ ನಾಮುಗಳು ಸುಬೋಧ ರಾಮುರಾಯರ 'ಹರಿದಾಸ ಕೀರ್ತನ ತರಂಗಿಣಿ'ಯಲ್ಲಿ ಅಚ್ಚಾಗಿವೆ.

ಶ್ರೀಪಾದರಾಜರ ಕೃತಿಗಳಲ್ಲಿ 'ರಂಗವಿಠಲ' ಎನ್ನುವ ಅಂಕಿ ಕಾಣಸಿಗುತ್ತದೆ ; ತಾವು ಶ್ರೀರಂಗದಿಂದ ಬಂದವರೆಂದು ಇದರ ಹಿನ್ನೆಲೆಯೋ ಏನೋ. ಇವರ ಕೃತಿಗಳಲ್ಲಿ ಪದ, ಉಗಾಭೋಗ, ಸೂಳಾದಿ, ವೃತ್ತನಾಮು, ಗೀತೆ, ದಂಡಕ ಈ ಪ್ರಕಾರಗಳಿವೆ. ರಗಳೆಯೆಂತೆ ಎಂಟು – ಹತ್ತು ನುಡಿಗಳಿದ್ದು ಒಂದೊಂದು ನುಡಿಯೂ ಒಂದೊಂದು ತಾಳದಲ್ಲಿದ್ದು, ಕೊನೆಗೆ 'ಜೊತೆ'ಯೊಂದು ಇರುವುದು ಇವರ ಸುಳಾದಿಗಳಲ್ಲಿ ಕಾಣಬಹುದು. ಪದಕ್ಕೆ ಪಲ್ಲವಿ, ಒಮ್ಮೊಮ್ಮೆ ಅನುಪಲ್ಲವಿ, ಐದಾರು ನುಡಿ (ಚರಣ)ಗಳು ಇರುತ್ತವೆ ; ಕಡೆಯ ನುಡಿಯಲ್ಲಿ ಮಾತ್ರ ಅಂಕಿತವಿರುತ್ತದೆ. ಸುಳಾದಿಯ ಒಂದೊಂದು ನುಡಿಯ ಕಡೆಯಲ್ಲೂ ಅಂಕಿತ ಕಾಣಬರುತ್ತದೆ. ಐದಾರು ಸಾಲುಗಳಲ್ಲಿ ಸರಳವಾದ ಕಾವ್ಯಪದ್ಧತಿಯಿಂದ ಒಂದೇ ಭಾವವನ್ನು ನೇರವಾಗಿ ನಿರೂಪಿಸುವ ಉಗಾಭೋಗಗಳೂ ಮನೋಹರವಾಗಿವೆ. ವೃತ್ತನಾಮು ಅಥವಾ ವೃತ್ತಪ್ರಬಂಧದಲ್ಲಿ ಒಂದು ಪಲ್ಲವಿ, ಅನಂತರ ವೃತ್ತ (ಶ್ಲೋಕ), ಅನಂತರ ನುಡಿ ಹೀಗೆ ವ್ಯವಸ್ಥೆಯಿರುತ್ತದೆ.

ಈ ಪ್ರಕಾರಗಳನ್ನು ಶ್ರೀಪಾದರಾಜರೇ ಪ್ರವರ್ತನೆ ಮಾಡಿದರೆಂದು ಪ್ರತೀತಿಯಿದೆ. ಸೂಳಾದಿ, ವೃತ್ತನಾಮುಗಳಂತೂ ನಿರ್ವಿವಾದವಾಗಿ ಅವರು ಮೊಟ್ಟಮೊದಲಿಗೆ ತೋರಿಸಿಕೊಟ್ಟ ಗೇಯಕಾವ್ಯ ಪ್ರಕಾರಗಳೆ. ಪದ ಮತ್ತು ಉಗಾಭೋಗಗಳು ಹಿಂದಿನಿಂದ ಬಂದ ಪ್ರಕಾರಗಳಿರಬಹುದು ; ಅವನ್ನು ಪ್ರಚಾರಕ್ಕೆ ತಂದವರೇನೋ ಶ್ರೀಪಾದರಾಜರು. ಶಾಸ್ತ್ರೀಯಸಂಗೀತವನ್ನು ಹರಿದಾಸಸಾಹಿತ್ಯಕ್ಕೆ ಅಳವಡಿಸಿದವರು ಅವರೇ. ಅವರ ರಚನೆಗಳಿಂದ ಅವರಿಗಿದ್ದ ಅಗಾಧವಾದ ಸಂಗೀತಜ್ಞಾನ ಸ್ಪಷ್ಟವಾಗುತ್ತದೆ. ತಮ್ಮ ಕೃತಿಗಳನ್ನು ಪೂಜಾಕಾಲದಲ್ಲಿ ಹಾಡಿ, ಹರಿದಾಸರಿಂದ ಹಾಡಿಸಿ ಕೀರ್ತನಪದ್ಧತಿಯನ್ನು ಬೆಳೆಸಿದರು ; ಈ ಕೆಲಸಕ್ಕೆಂದು ಮಠದಲ್ಲಿ ಹಲವಾರು ಹರಿದಾಸರಿಗೆ ಆಶ್ರಯಕೊಟ್ಟರು. ಈ ಎಲ್ಲ ಕಾರಣಗಳಿಂದ ಶ್ರೀಪಾದರಾಜರನ್ನು ಹರಿದಾಸಪಂಥದ ಪ್ರವರ್ತಕರೆಂದೂ, ಹರಿದಾಸಸಾಹಿತ್ಯದ ಆದ್ಯರೆಂದೂ ವ್ಯವಹರಿಸುವುದು ಸರಿಯೇ.

ಇವರ ಮಾರ್ಗದರ್ಶನದಲ್ಲಿಯೇ ಅಡಿಯಿಟ್ಟು, ಇವರ ಗೇಯ – ರಚನಾ

ಪ್ರಕಾರಗಳಲ್ಲಿಯೇ ತಾವೂ ಕೃತಿಗಳನ್ನು ರಚಿಸಿ, ಪದ್ಧತಿಯನ್ನು ಬಲಗೊಳಿಸಿ ಪಂಥವನ್ನು ಬೆಳೆಸಿದ ಇನ್ನೊಬ್ಬ ಮಠಾಧೀಶರು ವ್ಯಾಸತೀರ್ಥರು; ಇವರನ್ನು ವ್ಯಾಸರಾಯರೆಂದು ಕರೆಯುವ ವಾಡಿಕೆಯಿದೆ. ಇವರು ಶ್ರೀಪಾದರಾಜರ ಶಿಷ್ಯರೇ. (ಚೆನ್ನಪಟ್ಟಣದ ಹತ್ತಿರ ಇರುವ ಬನ್ನೂರು ಇವರೂರು. ಇವರಿಗೆ ಆಶ್ರಮವಾದಾಗ ಏಳೇ ವರ್ಷಗಳು, ಅಬ್ಬೂರು ಬ್ರಹ್ಮಣ್ಯತೀರ್ಥರು ಇವರ ದೀಕ್ಷಾಗುರುಗಳು. ಮುಂದೆ ಶ್ರೀಪಾದರಾಜರಲ್ಲಿ ಶಾಸ್ತ್ರಾಧ್ಯಯನವನ್ನು ಮುಂದುವರಿಸಿ ಪಂಡಿತೋತ್ತಮರಾದರು.) ವಿಜಯನಗರದ ರಾಜಮನೆತನಕ್ಕೂ ಶ್ರೀಪಾದರಾಜರಿಗೂ ಇದ್ದ ಸಂಬಂಧ ವ್ಯಾಸರಾಜರ ಕಾಲದಲ್ಲಿ ಹೆಚ್ಚಿತು. ವಿಜಯನಗರದ ಅರಸರಲ್ಲಿ ಅಗ್ರಗಣ್ಯನಾದ ಕೃಷ್ಣದೇವರಾಯ ಮಹಾರಾಯನಿಗೆ ಇವರು ಗುರುಗಳು, ಮಾರ್ಗದರ್ಶಿಗಳು 1523ರಲ್ಲಿ ಅವನಿಗೆ 'ಕುಹೂಯೋಗ' ಒದಗಿದಾಗ ಇವರೇ ಸಿಂಹಾಸನವನ್ನೇರಿ ಅವನ ಆತಂಕವನ್ನು ಪರಿಹರಿಸಿದರೆಂದು ಪ್ರತೀತಿಯಿದೆ. ಚಂದ್ರಗಿರಿಯ ರಾಜನ ಅಪೇಕ್ಷೆಯಂತೆ ಇವರು ತಿರುಪತಿಯ ವೆಂಕಟೇಶ್ವರನ ಗುಡಿಯಲ್ಲಿ ಹನ್ನೆರಡುವರ್ಷಗಳ ಕಾಲ ಅರ್ಚನೆ ನಡೆಸಿದರಂತೆ. ವ್ಯಾಸತೀರ್ಥರ ಕಾಲ 1447 ರಿಂದ 1537ರವರೆಗೆಂದು ತಿಳಿದುಬಂದಿದೆ. ತೊಂಬತ್ತೆರಡು ವರ್ಷಗಳ ತುಂಬು ಜೀವನವನ್ನು ನಡೆಸಿ ಆನೆಗೊಂದಿಯ ತುಂಗಭದ್ರೆಯ ನಡುಗೆಡ್ಡೆಯಲ್ಲಿ ತೀರಿಕೊಂಡರು.

ಇವರು ಸಂಸ್ಕೃತದಲ್ಲಿ ಉದ್ದಾಮಪಂಡಿತರು, ಶಾಸ್ತ್ರಭಾಗದಲ್ಲಿ ಆದಿಶೇಷನೇ. ಇವರ 'ತರ್ಕತಾಂಡವ', 'ನ್ಯಾಯಾಮೃತ' ಮತ್ತು 'ತಾತ್ಪರ್ಯಚಂದ್ರಿಕಾ' ಎನ್ನುವ ಮೂರು ಮಹಾಗ್ರಂಥಗಳನ್ನು 'ವ್ಯಾಸತ್ರಯಿ' ಎಂದೇ ವ್ಯವಹರಿಸುತ್ತಾರೆ. ಇಷ್ಟು ಪ್ರೌಢವಿದ್ವಾಂಸರೂ, ರಾಜಗುರುಗಳೂ, ಮಠಾಧಿಪತಿಗಳೂ, ಉಜ್ವಲವ್ಯಕ್ತಿತ್ವವುಳ್ಳವರೂ ಆದ ವ್ಯಾಸತೀರ್ಥರು ಇಡಿ ದೇಶದಲ್ಲಿ ಆ ಕಾಲಕ್ಕೆ ಸುಪ್ರಸಿದ್ಧರಾಗಿದುದು ಆಶ್ಚರ್ಯವೇನಲ್ಲ. ಆದರೆ ಅವರು ತಮ್ಮ ವಿದ್ಯಾಗುರುಗಳಾದ ಶ್ರೀಪಾದರಾಜರು ಕೈಗೊಂಡ ಹರಿದಾಸ್ಯಪದ್ಧತಿಯನ್ನು ತಾವೂ ಮುಂದುವರೆಸಿದುದು ಹೆಚ್ಚು. ವಾದ, ವಾಕ್ಯಾರ್ಥ, ಸಿದ್ಧಾಂತವಿನಿಶ್ಚಯ, ಸಂಚಾರ, ಶಾಸ್ತ್ರರಚನೆ, ರಾಜ್ಯಭಾರ ಎಲ್ಲವನ್ನೂ ಮಾಡುತ್ತ ದಾಸಕೂಟವನ್ನೂ ಬೆಳೆಸಿದರೆನ್ನುವುದು ಸ್ವಾರಸ್ಯವಾದ ವಿವರ. ಶ್ರೀಪಾದರಾಜರಂತೆ ಇವರೂ ವ್ಯಾಸಕೂಟ, ದಾಸಕೂಟಗಳೆರಡಕ್ಕೂ ಸಂರಕ್ಷಕರಾಗಿದ್ದರು. ಇವರ ಶಿಷ್ಯ ಮಂಡಲಿಯಲ್ಲಿ ಪುರಂದರದಾಸರು, ಕನಕದಾಸರು, ವೈಕುಂಠದಾಸರು, ಸೋದೆಮಠದ ವಾದಿರಾಜತೀರ್ಥರು, ವಿಜಯೀಂದ್ರತೀರ್ಥರು ಮೊದಲಾದವರಿದ್ದರೆಂದಮೇಲೆ ವ್ಯಾಸತೀರ್ಥರ ಹಿರಿಮೆಯನ್ನು ಕುರಿತು ಇನ್ನೇನು ಹೇಳಬೇಕು ?

ಪಂಡಿತರಿಗೆ ಹರಿದಾಸರ ಮೇಲೆ ಆಗ್ರಹವಿದ್ದಾಗ ಹರಿದಾಸರ ಪಕ್ಷವನ್ನು ಹಿಡಿದು ಅವರನ್ನು ಪ್ರೋತ್ಸಾಹಿಸಿದ ಕೀರ್ತಿ ವ್ಯಾಸತೀರ್ಥರಿಗೆ ಸಲ್ಲುತ್ತದೆ. ಅವರ

ನೆರವಿಲ್ಲದಿದ್ದರೆ ಪುರಂದರದಾಸರೂ ಕನಕದಾಸರೂ ಉಳಿಯುತ್ತಿದ್ದರೋ ಇಲ್ಲವೋ! ಅವರ ಬಗ್ಗೆ ವಿರೋಧ ಅಷ್ಟು ಪ್ರಬಲವಾಗಿದ್ದಿತು ಆಗ. ವ್ಯಾಸತೀರ್ಥರು ತಮ್ಮ ಸನ್ನಿಧಿಯಲ್ಲಿಯೇ ದಾಸಕೂಟವನ್ನು ಬೆಳೆಸಿದರು; ತಾವೇ ಅದರಲ್ಲಿ ಪಾಲುಗೊಂಡರು. ಶ್ರೀಪಾದರಾಜರು ಮೊದಲು ಮಾಡಿದ ಹರಿದಾಸ ವಾಙ್ಮಯ ಪ್ರಕಾರಗಳಲ್ಲಿ ತಾವೂ ಸಾವಿರಾರು ಸುಂದರವಾದ, ಪ್ರಗಲ್ಭವಾದ, ರಸಭರಿತವಾದ, ಮನೋಜ್ಞವಾದ ಕೃತಿಗಳನ್ನು ಕನ್ನಡದಲ್ಲಿಯೇ ರಚಿಸಿದರು. ಇವರ ಹಲವಾರು ಸುಳಾದಿಗಳೂ, ಪದಗಳೂ, ವೃತ್ತನಾಮಗಳೂ ಉಗಾಭೋಗಗಳೂ ಉಳಿದು ಬಂದಿವೆ: ಇವುಗಳಲ್ಲಿ 'ಸಿರಿಕೃಷ್ಣ' ಎನ್ನುವ ಅಂಕಿತ ಕಾಣಬರುತ್ತದೆ. ಉಪಲಬ್ಧವಾದ ಪದಗಳ ಸಂಗ್ರಹ 'ಹರಿದಾಸ ಕೀರ್ತನತರಂಗಿಣಿ'ಯಲ್ಲಿ ಪ್ರಕಟವಾಗಿವೆ.

ಗಹನವಾದ ತತ್ತ್ವಗಳನ್ನೂ ಜಟಿಲವಾದ ಶಾಸ್ತ್ರಪ್ರಮೇಯಗಳನ್ನೂ ಸರಳವಾಗಿ ತಿಳಿಗನ್ನಡದಲ್ಲಿ ಹೇಳುವ ಜಾಣತನ ವ್ಯಾಸತೀರ್ಥರ ಕೃತಿಗಳಲ್ಲಿ ಎದ್ದು ಕಾಣುತ್ತದೆ; ಇದಕ್ಕಾಗಿಯೇ ಈ ಕೆಲಸವನ್ನು ಕೈಗೊಂಡರೆನ್ನಬಹುದು. ಭಗವದ್ಗೀತೆಯನ್ನು ಹೆಂಗಸರು—ಮಕ್ಕಳು—ತಿಳಿಯದವರು ಓದಿ ತಿಳಿದುಕೊಳ್ಳಲೆಂದು ವೃತ್ತನಾಮಪದ್ಧತಿಯಲ್ಲಿ ಬರೆದಿಟ್ಟಿದ್ದಾರೆ: ಕವಿವಾಣಿಯಲ್ಲಿ ಇದನ್ನು ಕೊಟ್ಟಿದೆ, ಅದರ ಸ್ವಾರಸ್ಯವನ್ನು ನೋಡಬಹುದು. ಕನ್ನಡವು ತತ್ತ್ವನಿರೂಪಣೆಗೆ ಹೇಗೆ ಒಗ್ಗುವುದೆಂದು ಇಲ್ಲಿ ಸ್ಪಷ್ಟವಾಗಿದೆ.

## ಮೊದಲ ಮೂವರು ದಾಸರು

ದಾಸಕೂಟವನ್ನು ಎತ್ತಿ ಹಿಡಿದ, ಕಟ್ಟಿ ನಿಲ್ಲಿಸಿದ ವ್ಯಾಸತೀರ್ಥರ ಶಿಷ್ಯರಲ್ಲಿ ಪ್ರಮುಖರಾದವರು, ಅವರ ಅಂತರಂಗವರ್ಗಕ್ಕೆ ಸೇರಿದವರು ಪುರಂದರದಾಸರು.

ತಮ್ಮ ಕೃತಿರಚನೆಗಳಿಂದಲೂ ವ್ಯಕ್ತಿತ್ವದ ಸ್ವಾರಸ್ಯದಿಂದಲೂ ಹರಿದಾಸ ಪ್ರಪಂಚದಲ್ಲಿ ಮಾತ್ರವಲ್ಲ, ಇಡೀ ಕನ್ನಡವಾಙ್ಮಯದಲ್ಲಿ ವಿಶಿಷ್ಟವಾದ ಸ್ಥಾನವೊಂದನ್ನು ಗಳಿಸಿಕೊಂಡಿದ್ದಾರೆ ಅವರು. ದಕ್ಷಿಣಾದಿ ಸಂಗೀತವು ಪರಿಪಕ್ವದೆಶೆಯನ್ನು ಮುಟ್ಟಲು ಕಾರಣರಾದರೆಂದು ಅವರನ್ನು 'ಕರ್ನಾಟಕ ಸಂಗೀತ ಪಿತಾಮಹ'ರೆಂದು ಪರಿಗಣಿಸುವ ವಾಡಿಕೆಯಿದೆ. ಅವರು ರಚಿಸಿದ ತಾಳಾಲಂಕಾರಗಳು, ಗೀತಗಳು ಸಂಗೀತಾಭ್ಯಾಸಿಗಳಿಗೆಲ್ಲ ಆರಂಭಪಾಠಗಳೇ ಆಗಿವೆ. ಅವರು ಕನ್ನಡಸಾಹಿತ್ಯಕ್ಕೂ ದಕ್ಷಿಣಾದಿ

ಸಂಗೀತಕ್ಕೂ ಒದಗಿಸಿದ ನೆರವಿನ ವಿಚಾರವಾಗಿ ಹಲವಾರು ವಿದ್ವಾಂಸರು ಪ್ರಬಂಧಗಳನ್ನು ಸಿದ್ಧಪಡಿಸಿದ್ದಾರೆ.

ಅವರ ಕಾಲ 1484 ರಿಂದ 1564ರವರೆಗೆಂದು ತಿಳಿದುಬರುತ್ತದೆ. ಪುಣೆಯ ಬಳಿ ಪುರಂದರಗಡದಲ್ಲಿ ಹುಟ್ಟಿ ಶ್ರೀಮಂತರಾಗಿದ್ದುಕೊಂಡು ಸಂಸಾರ ನಡೆಸುತ್ತಿದ್ದ ಅವರಿಗೆ ವಿರಕ್ತಿ ಬಂದು ಎಲ್ಲವನ್ನು ದಾನಮಾಡಿ ಹೆಂಡತಿ ಮಕ್ಕಳೊಂದಿಗೆ ಹಂಪಿಗೆ ಬಂದು ಅಲ್ಲಿದ್ದ ವ್ಯಾಸತೀರ್ಥರ ಬಳಿ ನಿಂತರು. ಅವರಿಂದ ಹರಿದಾಸದೀಕ್ಷೆಯನ್ನು ಪಡೆದು, ಅವರಿರುವವರೆಗೂ ಅವರ ಬಳಿಯೇ ಇದ್ದುಕೊಂಡು, ಅನಂತರ ದೇಶದಲ್ಲೆಲ್ಲ ಸಂಚರಿಸಿ ಮತ್ತೆ ಹಂಪಿಗೆ ಬಂದು ಅಲ್ಲಿ ಕಾಲವಾದರು. (ಅವರ ಸಮಕಾಲೀನರಲ್ಲಿ ಕನಕದಾಸರು, ವೈಕುಂಠದಾಸರು, ಗದುಗಿನ ನಾರಣಪ್ಪ, ಗೋವಿಂದ ಒಡೆಯರು, ವಾದಿರಾಜಸ್ವಾಮಿಗಳು, ತಾಳ್ಲಪಾಕ ಅಣ್ಣಮಾಚಾರ್ಯರು, ರಘುನಾಥ ಯತಿಗಳು. ಇವರು ಪ್ರಸಿದ್ಧರು : ಪುರಂದರದಾಸರೊಂದಿಗೆ ಸಂಪರ್ಕವಿದ್ದವರು.)

ಪುರಂದರದಾಸರು ಒಟ್ಟು ನಾಲ್ಕು ಲಕ್ಷ ಇಪ್ಪತ್ತೈದು ಸಾವಿರ ಕೃತಿಗಳನ್ನು ರಚಿಸಿದ್ದಾರೆಂದು ಬಲವಾದ ಪ್ರತೀತಿಯಿದೆ. ಉಳಿದಿರುವುದು ಮಾತ್ರ ಒಂದು ಸಾವಿರದಷ್ಟೇ. ಇವುಗಳಲ್ಲಿ ಪದಗಳೂ, ಗೀತಗಳೂ, ಉಗಾಭೋಗಗಳೂ, ಸುಳಾದಿಗಳೂ ಸೇರಿವೆ. ಅವರ ಅಂಕಿತ 'ಪುರಂದರ ವಿಟ್ಠಲ' ಎಂದು. ಅವರ ನಾಲ್ವರು ಮಕ್ಕಳೂ ಹರಿದಾಸರಾಗಿ ದೇವರನಾಮಗಳನ್ನು ರಚಿಸಿದರು; 'ವರದಪುರಂದರ ವಿಠಲ', 'ಗುರುಪುರಂದರ ವಿಠಲ', 'ಅಭಿನವಪುರಂದರ ವಿಠಲ' ಮತ್ತು 'ಮಧ್ವಪತಿ ವಿಠಲ' ಎಂಬುವು ಅವರ ಅಂಕಿತಗಳು. ಮಕ್ಕಳೊಡಗೂಡಿ ಪುರಂದರದಾಸರು ಊರುರೂ, ಕೇರಿಕೇರಿ ತಿರುಗಾಡುತ್ತ ತಂಬೂರಿ ಹಿಡಿದು ದೇವರ ನಾಮಗಳನ್ನು ಹಾಡುತ್ತ, ಉಂಛವೃತ್ತಿಯಿಂದ ಜೀವಿಸುತ್ತಿದ್ದರು. ಕೀರ್ತನಪದ್ಧತಿ, ಭಜನಪದ್ಧತಿ ಇವರಿಂದಲೇ ಪರಿಷ್ಕೃತವಾದುವು. ಹರಿದಾಸರ ಮನೋಧರ್ಮವನ್ನೂ, ವೃತ್ತಿಯನ್ನೂ, ಸ್ವರೂಪ-ಸ್ವಭಾವಗಳನ್ನೂ ಪುರಂದರದಾಸರೇ ಸ್ಪಷ್ಟಪಡಿಸಿದವರು. ದಾಸಕೂಟವನ್ನು ನೆರೆಯಿಸಿದವರು ಅವರ ಗುರುಗಳಾದ ವ್ಯಾಸತೀರ್ಥರೇ ಅದರೂ, ದಾಸಕೂಟದ ಕೀರ್ತಿಗೂ ಜನಪ್ರೀತಿಗೂ ಕಾರಣರಾದವರು ಪುರಂದರದಾಸರು.

ಉದಾರವಾದ, ಮಾನವನ ಉದ್ಧಾರಕ್ಕೆ ಅಗತ್ಯವಾದ ತತ್ತ್ವಗಳನ್ನು ಸರಳ ಸುಂದರವಾದ, ಪ್ರಬೋಧಕವಾದ ಮಾತುಗಳಲ್ಲಿ ಮೂಡಿಸುವ ಅವರ ಜಾಣ್ಮೆ ಅನ್ಯಾದೃಶವಾದುದು. ಹರಿದಾಸಸಾಹಿತ್ಯದ ಸೊಬಗನ್ನು ಸಾಮಾನ್ಯ ಜನರು ಸವಿದು ಸಂತೋಷಪಟ್ಟುದು ಮಾತ್ರವಲ್ಲ : ತಮ್ಮ ಬಾಳನ್ನು ತಿದ್ದಿಕೊಂಡರು, ಆದರ್ಶವನ್ನು ಕಂಡುಕೊಂಡರು, ಅಧ್ಯಾತ್ಮದಲ್ಲಿ ರುಚಿಯನ್ನು ಕಂಡರು. ವ್ಯಕ್ತಿಗಳಲ್ಲಿಯೂ ಸಮಾಜ

ದಲ್ಲಿಯೂ ಇದ್ದ, ಇರುವ, ಇರಬಹುದಾದ ಅಂಕುಡೊಂಕುಗಳನ್ನು ಕಾಣುವ ಕಣ್ಣು ಅವರಿಗಿದ್ದಿತು ; ಅವನ್ನು ತಿದ್ದುವ ಸಾಹಸವೂ ಇದ್ದಿತು. ತಪ್ಪಿದವರ ಮನಸ್ಸನ್ನು ಚುಚ್ಚದೆ ಮನಮುಟ್ಟುವಂತೆ ಹೇಳುವ ಜಾಣತನವೂ ಅವರಿಗಿದ್ದಿತು. ಇವೆಲ್ಲ ಲೋಕಾನುಭವದಿಂದ, ಲೋಕಾನುಕಂಪದಿಂದ ಎದ್ದ ಪ್ರವೃತ್ತಿಗಳೇ. 'ಮಾನವಜನ್ಮ ದೊಡ್ಡದು,ಇದ ಹಾನಿಮಾಡಿಕೊಳ್ಳಬಾರದು'ಎಂದು ಅವರನಂಬಿಕೆ. 'ಸಂಸಾರವೆಂಬಂಥ ಭಾಗ್ಯವಿರಲಿ, ಕಂಸಾರಿನೆನೆವೆಂಬ ಸೌಭಾಗ್ಯವಿರಲಿ', ಏಕೆಂದರೆ 'ಹರಿ ಚಿತ್ತ ಸತ್ಯ, ನರಚಿತ್ತಕ್ಕೆ ಬಂದದ್ದು ಲವಲೇಶ ನಡೆಯದು' 'ಎಲ್ಲಿರುವ ರಂಗನೆಂಬ ಸಂಶಯಬೇಡ, ನೆನೆದವರ ಮನದಲ್ಲೆ ಇಹನು' : 'ಕಣ್ಣಿನೊಳಗೆ ನೋಡೊ ಹರಿಯ. ಒಳಗಣ್ಣಿನಿಂದಲಿ ನೋಡೊ ಮೂಜಗದ ದೊರೆಯ', 'ಗಾಳಿಬಂದ ಕೈಯಲ್ಲಿ ತೂರಿಕೊಳ್ಳಿರೊ, ನಾಳಿ ಯೆನ್ನಬೇಡಿ, ಇದೇ ವೇಳೆ ಬನ್ನಿರೋ'. 'ಈಸಬೇಕು, ಇದ್ದು ಜೈಸಬೇಕು', ಇಂಥ ಉಪದೇಶಗಳು ಸಾವಿರಾರು ಒದಗುತ್ತವೆ ಪುರಂದರದಾಸರ ಕೃತಿಗಳಲ್ಲಿ.

ಇವೆಲ್ಲದರ ತಾತ್ಪರ್ಯವೇನೆಂದರೆ ಮನುಷ್ಯನಾಗಿರುವುದು ದೇವರನ್ನು ಕಂಡು ಕೊಳ್ಳಲು, ಕೂಡಿಕೊಳ್ಳಲು. ಸಂಸಾರವನ್ನು ಸುಳ್ಳೆಂದಾಗಲಿ ಹೇಸಿಗೆಯೆಂದಾಗಲಿ ಬಗೆಯಬಾರದು. ಬದುಕು ನೀರಮೇಲಣ ಗುಳ್ಳೆಯಂತಿದ್ದರೂ ಆ ಬದುಕಿನಿಂದಲೇ ನಮ್ಮ ಮುಕ್ತಿಯನ್ನು ಸಾಧಿಸಿಕೊಳ್ಳಬೇಕು. ಮುಕ್ತಿ ಸುಲಭವೇ, ಆದರೆ ಅದರ ಉಪಾಯ ತಿಳಿದಿರಬೇಕು. ದೈವವೇ ಎಲ್ಲವನ್ನೂ ನಡೆಸುವುದೆಂದು ಕೈಕಟ್ಟಿ ಕೂಡು ವುದು ಸರಿಯಲ್ಲ ; ನಮ್ಮ ಪುರುಷಕಾರವಿಲ್ಲದೆ ದೈವ ಏನನ್ನೂ ಮಾಡದು—'ನನಗೂ ಆಣೆ ರಂಗ, ನಿನಗೂ ಆಣೆ' ಎಂದರೆ ಮನುಷ್ಯ ತನ್ನ ಪ್ರಯತ್ನಗಳನ್ನು ನಡೆಸುವಾಗ ವಿನಮ್ರನಾಗಿ ನಡೆದುಕೊಳ್ಳಬೇಕು, ತಾನು ದಾಸ, ದೇವರು ಈಶ, ಎನ್ನುವ ಕಲ್ಪನೆ ದೃಢವಾಗಿರಬೇಕು. ಮಡಿವಂತಿಗೆಯ ಸೋಗು, ದೃಢವಿಲ್ಲದ ಮನಸ್ಸಿನಿಂದ ಮಾಡುವ ಉದರವೈರಾಗ್ಯ, ಶೀಲವಿಲ್ಲದ ಶಾಸ್ತ್ರಪಾಂಡಿತ್ಯ ಇವೆಲ್ಲ ಡಂಭಾಚಾರ; ಹರಿಯು ಇವನ್ನು ಮೆಚ್ಚುವುದಿಲ್ಲ. ಶೀಲಶುದ್ಧಿಯಿದ್ದವರಿಗೆ ಜಾತಿ, ಕುಲ, ವಿದ್ಯೆ ಇವು ಗಣನೆಗೆ ಬಾರವು. ಸಮಾಜದಲ್ಲಿ ವೈಯಕ್ತಿಕ ಜೀವನ ಪರಿಶುದ್ಧವಾಗಿರದೆ ಧಾರ್ಮಿಕ ಸಂಪತ್ತು ಹೆಚ್ಚಲಾರದು. ಹೀಗೆ ಸರಿಯಾದ, ನೇರವಾದ, ನಯವಾದ ದಾರಿ ಹಿಡಿದವರಿಗೆ 'ಏತರಭಯ', 'ಅಂಜಿಕಿನ್ಯಾತಕಯ್ಯ ?' ಧರ್ಮವೇ ಜಯವೆಂಬುದು ದಿವ್ಯಮಂತ್ರವಲ್ಲವೆ ?

ಪ್ರಾಪಂಚಿಕವಾದ ಕಷ್ಟಸುಖಗಳಿಗೆ ಮನುಷ್ಯ ಕುಗ್ಗಬಾರದು, ಹಿಗ್ಗಬಾರದು ; ಬಂದದ್ದೆಲ್ಲ ಬರಲಿ, ಗೋವಿಂದನ ದಯೆಯೊಂದಿರಲಿ ಎನ್ನುವ ಧೈರ್ಯವಿರಬೇಕು. 'ಅಂಜುವರಿಗೆ ದೈವ ಬೊಮ್ಮರಕ್ಕಸದಂತೆ, ಅಂಜೆ ನಾ ನಿನಗಿನ್ನು ಪುರಂದರವಿಠಲ.' ಈ ನೆಲೆಯಲ್ಲಿ ದಾಸರು ವ್ಯಕ್ತಿಗೊಂದು ಆದರ್ಶ ಜೀವನದ ಕಲ್ಪನೆಯನ್ನು ಒದಗಿಸಿ

ಕೊಟ್ಟರು. ಜೀವದ ಸದ್ಗತಿಗೂ ಸಮಾಜದ ಶುದ್ಧಿಗೂ ಸಂಬಂಧವಿದೆಯೆಂದು ಅವರ ವಾದ; ಅಂತರಂಗ, ಬಹಿರಂಗ ಎರಡೂ ಶುದ್ಧವಾಗಿರಬೇಕಲ್ಲವೆ? ಧರ್ಮದ ಹೆಸರಿನಲ್ಲಿ ಅನ್ಯಾಯ ನಡೆಯುವುದು ದಾಸರ ಕಾಲದಲ್ಲಿಯೂ ಇದ್ದಿತು; ಹೊಲೆತನ ಹೊರಗಿಲ್ಲ, ಒಳಗಿದೆ ಎನ್ನುವುದನ್ನು ಅವರು ಗಮನಿಸಿದ್ದರು. ಧರ್ಮವೆನ್ನುವುದು ಆಚಾರವನ್ನು ಮೀರಿ ನಿಲ್ಲುತ್ತದೆ ಎನ್ನುವ ದೃಷ್ಟಿಯನ್ನು ಅವರ ಹಲವಾರು ಪದಗಳಲ್ಲಿ ಕಾಣುತ್ತೇವೆ. 'ಆವ ಕುಲವಾದರೇನು, ಆವನಾದರೇನು, ಆತ್ಮಭಾವವರಿತಮೇಲೆ? ಕುಲವಿಲ್ಲ ಜ್ಞಾನಿಗಳಿಗೆ' ಎಂದರು. ಎಲ್ಲರೂ ಮಾಡಲೇ ಬೇಕಾದುದನ್ನು ಸರಳವಾಗಿ ಹೇಳಿದರು— 'ಮನವ ಶೋಧಿಸಬೇಕು ನಿಚ್ಚ, ದಿನ ದಿನ ಮಾಡುವ ಪಾಪಪುಣ್ಯದ ವೆಚ್ಚ.'

ಹೀಗೆ ಪುರಂದರದಾಸರು ಹಾಕಿಕೊಟ್ಟ ದಾರಿ ದಿಟವಾಗಿ ಹೆದ್ದಾರಿಯೇ; ಎಲ್ಲ ಕಾಲಗಳ ಎಲ್ಲ ಜನರಿಗೂ ಅನುಕೂಲವಾದ, ಅಗತ್ಯವಾದ ದಾರಿ. ಹರಿದಾಸರಿಗೆ ಅವರು ಆದರ್ಶರಾದರು, ಹರಿದಾಸ್ಯಮನೋಪ್ರವೃತ್ತಿ ಅವರಿಂದ ಸ್ಪಷ್ಟವಾಯಿತು. ಈ ಕಾರಣದಿಂದಲೇ ದಾಸಕೂಟದವರು ಅವರನ್ನು ದಾಸಶ್ರೇಷ್ಠರೆಂದೂ ದಯಾನಿಧಿಗಳೆಂದೂ ಪುರಂದರಗುರುಗಳೆಂದೂ ಸ್ಮರಿಸಿಕೊಳ್ಳುತ್ತಾರೆ.

ವ್ಯಾಸತೀರ್ಥರ ಇನ್ನೊಬ್ಬ ಶಿಷ್ಯರೂ, ಪುರಂದರದಾಸರ ಗೆಳೆಯರೂ ಆಗಿದ್ದ ಕನಕದಾಸರು ಪುರಂದರದಾಸರಂತೆಯೇ ಉಜ್ವಲವಾದ ವ್ಯಕ್ತಿತ್ವವುಳ್ಳವರು, ಪ್ರತಿಭಾವಂತರು, ಯೋಗಿಗಳು. ದಾಸಕೂಟದಲ್ಲಿ ಇವರ ಸ್ಥಾನವೂ ಪ್ರಶಸ್ತವಾಗಿದ್ದಿತು; ವ್ಯಾಸತೀರ್ಥರೇ ಇವರನ್ನು ಮನಸಾರೆ ಮೆಚ್ಚಿಕೊಂಡು ಇವರಿಗೆ ಅಗ್ರಮರ್ಯಾದೆ ಮಾಡುತ್ತಿದ್ದರು, ಪುರಂದರದಾಸರೂ ವೈಕುಂಠದಾಸರೂ ಇವರನ್ನು ಅಪರೋಕ್ಷ ಜ್ಞಾನಿಗಳೆಂದು ಬಗೆದಿದ್ದರು. ಕುರುಬರ ಕುಲದವರೆಂಬ ಕಾರಣದಿಂದ ಇವರನ್ನು ಆದರಿಸದೆ ಇದ್ದವರ ಮೂಗು ಮುರಿದು ವ್ಯಾಸತೀರ್ಥರು ಇವರ ಹಿರಿಮೆಯನ್ನು ಕೊಂಡಾಡಿದ ಉಲ್ಲೇಖವಿದೆ; ಮಠದಲ್ಲಿ ದೇವರ ಪೂಜೆಯಾದನಂತರ ಮೊದಲ ತೀರ್ಥವನ್ನು ಕನಕದಾಸರಿಗೆ ಕೊಡುತ್ತಿದ್ದರಂತೆ ವ್ಯಾಸತೀರ್ಥರು.

ಧಾರವಾಡ ಜಿಲ್ಲೆಯ ಬಂಕಾಪುರ ತಾಲ್ಲೂಕಿನ ಬಾಡದವರಾದ ಕನಕದಾಸರು 1509 ರಿಂದ 1607ರವರೆಗೆ ಇದ್ದವರು. ಶ್ರೀಮಂತರಾಗಿ, ಊರಿನ ದಂಡನಾಯಕರಾಗಿ, ಸಮರ ಶೂರರಾಗಿ ಇದ್ದವರು ಇದ್ದಕ್ಕಿದ್ದಂತೆ ವಿರಕ್ತಿಯನ್ನು ತಳೆದು ವ್ಯಾಸತೀರ್ಥರ ಬಳಿ ಶಿಷ್ಯರಾಗಿ ಸೇರಿ ಹರಿದಾಸರಾದವರು. ಅದೇ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿನ ಕಾಗಿನೆಲೆ ಎಂಬಲ್ಲಿ ಅವರು ದೇವಾಲಯವೊಂದನ್ನು ಕಟ್ಟಿಸಿ ತಮ್ಮ ಹುಟ್ಟೂರಾದ ಬಾಡದಲ್ಲಿದ್ದ ಆದಿಕೇಶವಮೂರ್ತಿಯನ್ನು ಪ್ರತಿಷ್ಠೆ ಮಾಡಿಸಿದರು. ಹೀಗಾಗಿ ಕನಕದಾಸರ ಅಂಕಿತವು 'ಕಾಗಿನೆಲೆಯಾದಿಕೇಶವ' ಅಥವಾ 'ಬಾಡದಾದಿ

ಕೇಶವ' ಎಂದಾಯಿತು. ವ್ಯಾಸತೀರ್ಥರ ಬಳಿ ಅವರು ಬರುವುದಕ್ಕೆ ಮೊದಲು ಅವರಿಗೆ ಶ್ರೀ ವೈಷ್ಣವಪಂಥದ ತಾತಾಚಾರ್ಯರೆಂಬುವರಿಂದ ಧರ್ಮದೀಕ್ಷೆಯಾಗಿದ್ದಿತು; ಆದರಿಂದಲೇ ಅವರು ತಿರುಪತಿಯ ಶ್ರೀನಿವಾಸನಿಗೆ ನಡೆದುಕೊಳ್ಳುತ್ತಿದ್ದುದು. ವ್ಯಾಸತೀರ್ಥರ ಬಳಿ ಬಂದ ನಂತರವೇ ಹರಿದಾಸರಾದುದು, ಪದಗಳನ್ನು ರಚಿಸಲಾರಂಭಿಸಿದುದು. ಬೇಲೂರಿಗೆ ಹೋಗಿ ಅಲ್ಲಿ ವೈಕುಂಠದಾಸರ ಬಳಿಯೂ ಕೆಲಕಾಲ ಇದ್ದಂತೆ ತಿಳಿದುಬರುತ್ತದೆ; ಉಡುಪಿಯ ವಾದಿರಾಜಸ್ವಾಮಿಗಳು ಕನಕದಾಸನನ್ನು ಗೆಳೆಯರಂತೆ ಕಂಡರೂ ಅವರು ಮಾತ್ರ ತಮ್ಮನ್ನು 'ತ್ರಿವಿಕ್ರಮದಾಸನ್ಯ ದಾಸ'ನೆಂದು ಕರೆದುಕೊಂಡು ವಾದಿರಾಜರ ಶಿಷ್ಯರೆಂದೇ ಹೇಳಿಕೊಂಡಿದ್ದಾರೆ. ಕನಕದಾಸರಿಗೂ ಉಡುಪಿಗೂ ಬೆಳೆದುಬಂದ ಸಂಬಂಧ ಕೃಷ್ಣನ ಗುಡಿಯಲ್ಲಿ ಇಂದಿಗೂ ಪ್ರಸಿದ್ಧವಾಗಿರುವ 'ಕನಕನ ಕಿಂಡಿ'ಯಿಂದ ಉಳಿದು ಬಂದಿದೆ; ಇದು ವಾದಿರಾಜರ ಕಾಲದಲ್ಲಿಯೇ ನಡೆದ ಪ್ರಸಂಗ.

ಕನಕದಾಸರು ಬಿಡಿಪದಗಳನ್ನಲ್ಲದೆ ಕೆಲವಾರು ಗ್ರಂಥಗಳನ್ನು ಕೂಡ ರಚಿಸಿದ್ದಾರೆ. ಇವುಗಳಲ್ಲಿ ಮುಖ್ಯವಾದುದು, ಜನಪ್ರಿಯವಾದುದು ಭಾಮಿನೀಷಟ್ಪದಿಯಲ್ಲಿರುವ 'ಹರಿಭಕ್ತಿಸಾರ' ಇದರ ಪದ್ಯಗಳು ಕನ್ನಡನಾಡಿನಲ್ಲೆಲ್ಲ ಹರಡಿವೆ. 'ಮೋಹನತರಂಗಿಣಿ', 'ರಾಮಧಾನ್ಯಚರಿತೆ'. 'ನಳಚರಿತ್ರೆ', ಮತ್ತು 'ನರಸಿಂಹಸ್ತವ'; ಮೊದಲನೆಯದೂ ಕಡೆಯದೂ ಸಾಂಗತ್ಯ ಶೈಲಿಯಲ್ಲಿವೆ, ಉಳಿದುವು ಭಾಮಿನೀಷಟ್ಪದಿಯಲ್ಲಿವೆ. ಜನಪದಭಾಷೆಯ ಪ್ರಯೋಗಗಳನ್ನೇ ಅಳವಡಿಸಿಕೊಂಡು ಕಾವ್ಯ ಗಾಂಭೀರ್ಯಕ್ಕೆ ಕುಂದು ಬರದಂತೆ ಉದಾತ್ತ ಭಾವನೆಗಳನ್ನು ಹೊರಹೊಮ್ಮಿಸುವುದು ಕನಕದಾಸರ ವೈಶಿಷ್ಟ್ಯ. ಅವರು ಒದಗಿಸಿರುವ ಶಬ್ದಚಿತ್ರಗಳಂತೂ ಮೋಹಕವಾಗಿವೆ. ಅವರ 175 ಪದಗಳು ಬಳಕೆಯಲ್ಲಿವೆ.

ಅವರ ಪದಗಳಲ್ಲಿ ಕಾಣಬರುವುದು ಅವರ ವಿಪುಲವಾದ ಲೋಕಾನುಭವ, ದೃಢವಾದ ಭಗವದ್ಭಕ್ತಿ, ಅದರಿಂದ ಒದಗಿದ ಆನಂದ. 'ನೆಚ್ಚದಿರು ಸಂಸಾರ', 'ಎಲ್ಲಾರು ಮಾಡುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ', ಎಂದು ಹೇಳಿ 'ಧರೆಯ ಭೋಗವನ್ನು ನೋಡಿ, ಹರಿಯ ಮರೆದು ಕೆಡಲಿ ಬೇಡ' ಎಂದು ಕಿವಿಮಾತನ್ನೂ ಹೇಳಿದರು. ಜೀವನದಲ್ಲಿ ಕಷ್ಟ–ನಿಷ್ಠುರಗಳನ್ನು ಅನುಭವಿಸಿದ್ದ ಅವರಿಗೆ 'ತಲ್ಲಣಿಸದಿರು ಕಂಡ್ಯ ತಾಳು ಮನವೇ, ಎಲ್ಲರನು ಸಲಹುವನು ಇದಕೆ ಸಂಶಯ ಬೇಡ' ಎನಿಸಿತು. 'ತನು ನಿನ್ನದು, ಜೀವ ನಿನ್ನದು, ಸ್ವಾಮಿ, ಅನುದಿನದಲ್ಲಿ ಬಾಹ ಸುಖದುಃಖ ನಿನ್ನದಯ್ಯ' ಎಂದು ದೇವರಲ್ಲಿ ಭಾರನ್ಯಾಸವನ್ನು ಮಾಡಿಬಿಟ್ಟರು. 'ಬದುಕಿದೆನು ಬದುಕಿದೆನು ಭವವೆನಗೆ ಹಿಂಗಿತು, ಪದುಮನಾಭನ ಪಾದದೊಲುಮೆ ಎನಗಾಯ್ತು' ಎಂದು ಸಂತೋಷದಿಂದ ಕುಣಿದಾಡಿದರು; 'ತಂದೆ ಶ್ರೀ ಕಾಗಿನೆಲೆಯಾದಿ

ಕೇಶವರಾಯ ಬಂದೆನ್ನ ಹೃದಯಲಿ ನೆಲೆಯಾಗಿ ನಿಂತ, ಮೇಲೆ ಜನ್ಮಸಾಫಲ್ಯವಾಗದೆ ಮತ್ತೇನು ?

ಹೀಗೆ ಕನ್ನಡನಾಡಿನಲ್ಲಿ ಕನಕದಾಸರ ಬದುಕಿನಿಂದಲೂ ಬರಹಗಳಿಂದಲೂ ಭಕ್ತಿ ಮಾರ್ಗವು ಜನಪ್ರೀತಿಯನ್ನು ಗಳಿಸಿ ಹರಡಿತು ; ಅವರ ಸಂಪರ್ಕದಿಂದ ದಾಸಕೂಟವು ಉಜ್ವಲವಾಯಿತು. ಪುರಂದರದಾಸರು, ಕನಕದಾಸರಿಬ್ಬರೂ ವ್ಯಾಸತೀರ್ಥರು ಕೈಗೊಂಡ ಕೆಲಸವನ್ನು ಅವರ ಎಡಬಲಭುಜಗಳಂತೆ ನಿಂತು ನಡೆಸಿದರು ; ದೇಶದ ಸಂಸ್ಕೃತಿ ಅರಳಲು ಇವರಿಬ್ಬರು ಒದಗಿಸಿದ ನೆರವು ಎಂದಿಗೂ ಮರೆಯಲಾಗದಂಥದು.

ಕನಕದಾಸರೊಡನೆ ಕೂಡಿಕೊಂಡು ಹರಿದಾಸ್ಯದ ಕಳೆಯನ್ನು ಮತ್ತಷ್ಟು ಹೆಚ್ಚಿಸಿದ ಇನ್ನೊಬ್ಬ ದಾಸರೆಂದರೆ ವೈಕುಂಠದಾಸರು. ಅವರು ಬೇಲೂರಿನವರು. ಬಾಳಿನ ಬಹುಭಾಗವನ್ನು ಬೇಲೂರಿನಲ್ಲಿಯೇ ಕಳೆದವರು. ಅವರು ವ್ಯಾಸತೀರ್ಥರ ಬಳಿ ಶಿಷ್ಯವೃತ್ತಿಯನ್ನು ಮಾಡಿದರೋ ಇಲ್ಲವೋ ಖಚಿತವಾಗಿ ತಿಳಿದುಬರುವುದಿಲ್ಲ ; ಆದರೆ ಪುರಂದರದಾಸರಿಗೂ ಅವರಿಗೂ ಗೆಳೆತನವಿದ್ದ ಉಲ್ಲೇಖಗಳಿವೆ. ಕನಕದಾಸರಂತೂ ವೈಕುಂಠದಾಸರ ಹಿರಿಮೆಯನ್ನು ಒಂದು ಪದದಲ್ಲಿ ಉಳಿಸಿಯೇ ಇಟ್ಟಿದ್ದಾರೆ. ಈ ದಾಸರು ಶ್ರೀ ವೈಷ್ಣವ ಸಂಪ್ರದಾಯದವರು ; ಅವರು ರಚಿಸಿರುವ ಕೀರ್ತನೆಗಳಲ್ಲಿ 'ವೈಕುಂಠಕೇಶವ' ಎನ್ನುವ ಮುದ್ರಿಕೆಯಿದೆ. ಕನಕದಾಸರೂ ಶ್ರೀ ವೈಷ್ಣವ ದೀಕ್ಷೆಯನ್ನು ತಳೆದವರು, ಕೇಶವನೇ ಅವರ ಇಷ್ಟದೈವ ; ಇವು ವೈಕುಂಠದಾಸರಿಗೂ ಅವರಿಗೂ ಒದಗಿದ ಹೆಚ್ಚಿನ ಮೈತ್ರಿಗೆ ಕಾರಣಗಳಾಗಿರಬಹುದು. ಅಂತೂ ವೈಕುಂಠದಾಸರ ಕೀರ್ತನೆಗಳಲ್ಲಿ ಪ್ರಪತ್ತಿಧರ್ಮ ಎದ್ದು ಕಾಣುತ್ತದೆ. ಅವರ ಕೀರ್ತನೆಗಳನ್ನೆಲ್ಲ ಕಲೆ ಹಾಕಿ ಪ್ರಕಟಿಸುವ ಕೆಲಸವಿನ್ನೂ ನಡೆದಿಲ್ಲ.

ಇದೇ ಯುಗದಲ್ಲಿ ಹರಿದಾಸಸಾಹಿತ್ಯವನ್ನು ಬೆಳೆಸಿ, ಹರಿದಾಸ ಪಂಥವನ್ನು ಬಲಗೊಳಿಸಿದವರಲ್ಲಿ ಸೋದೆಯ ವಾದಿರಾಜಸ್ವಾಮಿಗಳು ಪ್ರಮುಖರು, ಪ್ರಭಾವಶಾಲಿಗಳು. ಅವರ ಕಾಲ 1486 – 1600. ಮಂಗಳೂರು ಪ್ರಾಂತದ ಕುಂಭಾಸಿಯ ಹತ್ತಿರ ಇರುವ ಹೂವಿನಕೆರೆ ಗ್ರಾಮದವರಾದ ಇವರು ಉಡುಪಿಯ ಅಷ್ಟಮಠಗಳಲ್ಲಿ ಒಂದಾದ ಸೋದೆಮಠದ ವಾಗೀಶತೀರ್ಥರಿಂದ ಸಂನ್ಯಾಸದೀಕ್ಷೆಯನ್ನು ಪಡೆದು, ಹಂಪಿಗೆ ಬಂದು ವ್ಯಾಸತೀರ್ಥರಲ್ಲಿ ವೇದಾಂತವಿದ್ಯಾಭ್ಯಾಸ ಮಾಡಿದರು. ಅಲ್ಲಿ ಅವರಿಗೆ ಪುರಂದರದಾಸರು, ಕನಕದಾಸರು, ವಿಜಯೀಂದ್ರತೀರ್ಥರು, ನಾರಾಯಣಯತಿಗಳು, ಗೋವಿಂದ ಒಡೆಯರು ಮೊದಲಾದ ಮಹಾತ್ಮರ ಪರಿಚಯವೂ ಗೆಳೆತನವೂ ಆದುವು. ವ್ಯಾಸತೀರ್ಥರಿಂದ ಶಾಸ್ತ್ರಪಾಂಡಿತ್ಯವನ್ನು ಪಡೆದುಕೊಂಡಂತೆ ಅವರಿಂದ ಹರಿದಾಸ ದೀಕ್ಷೆಯನ್ನೂ ಪಡೆದುಕೊಂಡರು. ಓದನ್ನು ಮುಗಿಸಿ ಉಡುಪಿಗೆ ಹಿಂದಿರುಗಿದ ಮೇಲೆ ದಕ್ಷಿಣಕನ್ನಡ ಜಿಲ್ಲೆಯಲ್ಲಿ ವ್ಯಾಸಕೂಟ, ದಾಸಕೂಟಗಳೆರಡಕ್ಕೂ ಪ್ರೇರಕರೂ

ಪೋಷಕರೂ ಆಗಿ ನಿಂತವರು ವಾದಿರಾಜರು. ಉಡುಪಿಯ ಧಾರ್ಮಿಕಕ್ಷೇತ್ರದಲ್ಲಿ ಮಧ್ವಾಚಾರ್ಯರ ನಂತರ ಅಷ್ಟು ತೇಜಸ್ವಿಗಳೂ ಪ್ರಭಾವಶಾಲಿಗಳೂ ಆಗಿದ್ದವರೆಂದರೆ ಇವರೇ ; ಈಗ ಉಡುಪಿಮಠಗಳಿಗೂ ಕೃಷ್ಣನ ಗುಡಿಗೂ ಸಂಬಂಧಿಸಿದಂತೆ ಇರುವ ಪರ್ಯಾಯ ಮೊದಲಾದ ವ್ಯವಸ್ಥೆಗಳನ್ನೆಲ್ಲ ಮಾಡಿದವರು ವಾದಿರಾಜರೇ; ಸುಪ್ರಸಿದ್ಧ ಕ್ಷೇತ್ರವಾದ ಧರ್ಮಸ್ಥಳದ ಮಂಜುನಾಥ ಪ್ರತಿಷ್ಠೆ ನಡೆದುದು ಅವರಿಂದಲೇ. ಅವರು ನೂರಿಪ್ಪತ್ತು ವರ್ಷಗಳ ಕಾಲ ಬದುಕಿದ್ದು ತಮ್ಮ ಬಾಳ ಬೆಳಕಿನಿಂದ ಕಡಲತೀರವನ್ನೆಲ್ಲ ಬೆಳಗಿದರು.*

ವಾದಿರಾಜರು ಕನ್ನಡದಲ್ಲಿಯೂ ಹಲವಾರು ಸೊಗಸಾದ ಪ್ರಬಂಧಗಳನ್ನು ರಚಿಸಿದ್ದಾರೆ. ಮಹಾಭಾರತ ತಾತ್ಪರ್ಯ ನಿರ್ಣಯವು ಇವರಿಂದ ಕನ್ನಡದಲ್ಲಿ ಇಳಿದು ಬಂದಿದೆ. 'ವೈಕುಂಠವರ್ಣನೆ'ಯೆನ್ನುವುದು ನಾಲ್ಕು ಸಂಧಿಗಳಿಂದ ಕೂಡಿದ ಮಧುರ ಪದ್ಯಗ್ರಂಥ ; 'ತತ್ತ್ವಸಾರದ ಸೊಬಗು ಧರೆಯೊಳು ವಿಸ್ತರಿಸಬೇಕೆಂದು' 'ಶ್ರುತಿ ಪುರಾಣಗಳ ಮೊತ್ತವನು ನೆರೆ ಮಥಿಸಿ' ಮಾಡಿರುವ ಪ್ರಬಂಧವಿದು ; ಒಟ್ಟು ಇದರಲ್ಲಿ 388 ಪದಗಳಿವೆ. 'ಲಕ್ಷ್ಮೀಶೋಭಾನೆ'ಯೆನ್ನುವುದು 113 ಪದಗಳ ಪ್ರಬಂಧ ; ಪಂತುವರಾಳಿರಾಗದಲ್ಲಿದ್ದು ಗಾಯನಕ್ಕೆ ಒಪ್ಪುವಂತಿದೆ. ಹೀಗೆಯೇ ಭಾಮಿನೀ ಷಟ್ಪದಿ ಯಲ್ಲಿರುವ 'ಸ್ವಪ್ನಪದ' (45 ನುಡಿಗಳು) ನಲವತ್ತು ಭಾವನಾಪೂರ್ಣವಾದ ಪದಗಳ 'ಗುಂಡಕ್ರಿಯೆ' ಇವಲ್ಲದೆ ನೂರಾರು ಬಿಡಿಪದಗಳನ್ನು ವಾದಿರಾಜರು ರಚಿಸಿದ್ದಾರೆ. ಇವರು ಹಯಗ್ರೀವೋಪಾಸಕರಾಗಿದ್ದು ತಮ್ಮ ಕನ್ನಡ ಕೃತಿಗಳಲ್ಲಿ 'ಹಯವದನ' ಎನ್ನುವ ಅಂಕಿತವನ್ನು ಕಾಣಿಸಿದ್ದಾರೆ.

ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಇವರ ಭಾಷೆ ಗಂಭೀರವಾದುದು, ಬಲ ವಾದುದು, ಕವಿಸಹಜವಾದುದು ; ಮಾತಿನ ಮೋಡಿ ಮರೆಯುವಂತಿಲ್ಲ, ರೂಪಕಗಳು ಮನಸ್ಸಿನಲ್ಲಿ ನಿಲ್ಲುತ್ತವೆ. ಪದಗಳಲ್ಲಿ ಕಾಣಬರುವ ಭಕ್ತಿಭಾವವಂತೂ ಬೆರಗುಮಾಡು ವಂಥದು. ಅವರ 'ವೇಂಕಟೇಶ ದರ್ಶನ ಸೂಳಾದಿ' ಇದಕ್ಕೆ ನಿದರ್ಶನ. ವಿರಕ್ತ ರಾದರೂ ಅವರಿಗೆ ಲೋಕದ ಅನುಭವವಿಲ್ಲದಿಲ್ಲ. 'ಡಿಲ್ಲಿಯ ರಾಯನ ಕಂಡು ಪುಲ್ಲಿಗೆಯ

---

* ವಿಜಯನಗರದ ಕೃಷ್ಣದೇವಮಹಾರಾಯನು ಇವರನ್ನು 'ಪ್ರಸಂಗಾಭರಣತೀರ್ಥ'ರೆಂದು ಸನ್ಮಾನಿಸಿದನು. ಸಂಸ್ಕೃತ ಸಾಹಿತ್ಯದಲ್ಲಿ ಅವರ ಕಾವ್ಯವಾದ 'ರುಕ್ಮಿಣೀಶ ವಿಜಯ' ಪ್ರಸಿದ್ಧ ವಾಗಿದೆ. ಶಾಸ್ತ್ರಭಾಗದಲ್ಲಿ ಅವರ 'ಯುಕ್ತಿಮಲ್ಲಿಕಾ', 'ಸುಧಾಟಿಪ್ಪಣಿ', 'ಲಕ್ಷಾಭರಣ' (ಮಹಾ ಭಾರತ ಟಿಪ್ಪಣಿ), 'ಪ್ರಮೇಯಸಂಗ್ರಹ', 'ತಂತ್ರಸಾರ ಟೀಕಾ' ಮೊದಲಾದವು ಅವರ ಅಪಾರ ವಾದ ವೈದುಷ್ಯವನ್ನೂ ಹರಿತವಾದ ಬುದ್ಧಿಶಕ್ತಿಯನ್ನೂ ತೋರಿಸುವಂಥವು. ಇದಲ್ಲದೆ 'ಸರಸ ಭಾರತೀವಿಲಾಸ', 'ತೀರ್ಥಪ್ರಬಂಧ' ಮೊದಲಾದವು ಮಾಧ್ವರಲ್ಲಿ ಪ್ರೀತಿಯನ್ನು ಗಳಿಸಿರುವ ಗ್ರಂಥಗಳು.

ಬೇಡುವರೆ ?', 'ಹಣವೇ ನಿನ್ನಯ ಗುಣವೆನಿತು ಬಣ್ಣಿಪೆನಯ್ಯ ? ಹಣವಿಲ್ಲದವ ನೊಬ್ಬ ಹೆಣಕಿಂತ ಕಡೆಯ್ಯೆಯ !', 'ಆರಿಗೆ ಆರೋ, ನಿನ್ನ ಉಳಿದು ಪೊರೆವರ ಕಾಣೆ', ಪಾಥೇಯುವ ಕಟ್ಟಿರೋ ವೈಕುಂಠಕ್ಕೆ, ಪಯಣ ಸಮ್ಮತವಾದರೆ' ಮೊದಲಾದ ಮಾತು ಗಳಲ್ಲಿ ಕಾಣಬರುವ ಜಾಣತನ ವಾದಿರಾಜರಿಗೆ ವಿಶಿಷ್ಟವಾದುದು. ಭಾಷೆ, ಭಾವ ಎರಡರ ಮಧುರ ಸಂಬಂಧ ಇವರ ಕೃತಿಗಳಲ್ಲಿ ಎದ್ದು ನಿಲ್ಲುತ್ತದೆ. ಉಡುಪಿಯ ಕಡೆ ಮಠಗಳಲ್ಲಿಯೂ ಮನೆಗಳಲ್ಲಿಯೂ ಇಂದಿಗೂ ಹಾಡಿಕೊಂಡು ಕುಣಿಯುವ 'ಲಕ್ಷುಮಿ ನಾರಾಯಣ' ಎನ್ನುವ ಇಪ್ಪತ್ತುನಾಲ್ಕು ನುಡಿಗಳ ಪದವು ಅವರ ಮನೋಹರವಾದ ಮಂಜುಳವಾದ, ಲಯಬದ್ಧವಾದ ಕೃತಿ.

ವಾದಿರಾಜರು ಕನಕದಾಸರನ್ನೂ ವೈಕುಂಠದಾಸರನ್ನೂ ಮೆಚ್ಚಿಕೊಂಡಿದ್ದರು. ಬೇಲೂರಿಗೆ ಹೋಗಿ ಅಲ್ಲಿ ವೈಕುಂಠದಾಸರೊಡನೆ ಕೆಲಕಾಲವಿದ್ದರು ; ಕನಕದಾಸರನ್ನು ಉಡುಪಿಗೆ ಕರೆಯಿಸಿಕೊಂಡಿದ್ದರು. ಹರಿದಾಸಪಂಥವು ಪ್ರಬಲವಾಗುವುದಕ್ಕೆ ಕಾರಣ ರಾದವರಲ್ಲಿ ಅಗ್ರಗಣ್ಯರು ವಾದಿರಾಜಸ್ವಾಮಿಗಳು.

## ನಡುಯುಗದ ನಾಲ್ವರು

ಹರಿದಾಸಪಂಥದಲ್ಲಿ ಮೊದಲ ಹಂತ ವ್ಯಾಸರಾಯರ ಕಾಲದಲ್ಲಿ ಸ್ಪಷ್ಟವಾಯಿತು. ಶ್ರೀಪಾದರಾಜರೂ ಅವರ ಶಿಷ್ಯ ವ್ಯಾಸರಾಯರೂ ಮೊದಲ ದಾಸಕೂಟವನ್ನು ಹಂಪಿಯಲ್ಲಿ ನೆರೆಯಿಸಿದರು. ವಿಜಯನಗರ ಸಾಮ್ರಾಜ್ಯದ ಸ್ವರ್ಣಯುಗದಲ್ಲಿಯೇ ಹರಿದಾಸಪಂಥವೂ ವಿಶಿಷ್ಟವಾಗಿ ಚಿಗುರತೊಡಗಿತು. ಪುರಂದರದಾಸರ. ಕನಕದಾಸರ ಕಾರ್ಯಕ್ಷೇತ್ರ ಇಡಿ ಕನ್ನಡನಾಡನ್ನು ಒಳಗೊಂಡು ಹಂಪಿಯಲ್ಲಿ ಹುಟ್ಟಿದ ಹರಿದಾಸ ಪದ್ಧತಿ ನಾಲ್ಕೂ ಕಡೆ ಹರಡತೊಡಗಿತು. ವಾದಿರಾಜಸ್ವಾಮಿಗಳು ಅದೇ ಕಾಲದಲ್ಲಿ ದಕ್ಷಿಣಕನ್ನಡ ಜಿಲ್ಲೆಯಲ್ಲೆಲ್ಲ ಇದನ್ನು ಬೆಳೆಸಿದರು ; ಬೇಲೂರಿನ ಸುತ್ತ ಮುತ್ತ ವೈಕುಂಠದಾಸರ ಪ್ರಭಾವ ಹರಡಿತು. ಕ್ರಿಸ್ತಾಬ್ದ 1600ರ ಸುಮಾರಿಗೆ ಹರಿದಾಸರ ವಾಣಿ ಕನ್ನಡ ದೇಶದಲ್ಲೆಲ್ಲ ಅನುರಣಿಸಿತು.

ಅನಂತರ ಕಾರಣಾಂತರಗಳಿಂದ ಹರಿದಾಸಪರಂಪರೆ ಅಷ್ಟಾಗಿ ಸ್ಪಷ್ಟವಾಗಿ ಮುಂದುವರಿಯಲಿಲ್ಲ. ಪುರಂದರದಾಸರ ಶಿಷ್ಯರೂ, ವೈಕುಂಠದಾಸರ ಶಿಷ್ಯರೂ, ವಾದಿರಾಜರ ಶಿಷ್ಯರೂ ಏನು ಕಾರಣದಿಂದಲೋ ಹೊರಗೆ ಬರಲಿಲ್ಲ ; ಹೆಸರು ಪಡೆಯಲಿಲ್ಲ ; ಪದಗಳನ್ನು ರಚಿಸಿದಂತೆ ಕಾಣಲಿಲ್ಲ. ಇವರೆಲ್ಲರ ಪರಂಪರೆಗಳಲ್ಲಿ

ವಿಚ್ಛಿತ್ತಿ ಬಂದಂತೆ ತೋರುತ್ತದೆ. ವಿಜಯನಗರಸಾಮ್ರಾಜ್ಯವು ತಾಳಿಕೋಟೆ ಯುದ್ಧದಲ್ಲಿ 1565 ರಲ್ಲಿ ಮಣ್ಣುಗೂಡಿದನಂತರ ಹಿಂದೂಧರ್ಮಕ್ಕೂ ಒಂದು ಆತಂಕ ಪರಿಸ್ಥಿತಿ ಒದಗಿಬಂದಿರಬಹುದು; ನಿತ್ಯಜೀವನದಲ್ಲಿ ನೆಮ್ಮದಿ ಮರೆಯಾಗಿ ಹರಿದಾಸರ ಸಂಚಾರವೂ ಸಾಹಿತ್ಯಸೃಷ್ಟಿಯೂ ನಿಂತುಹೋಗಿರಬಹುದು. ಅಂತೂ ಮುಂದೆ ಹಿಂದೂಧರ್ಮಕ್ಕೆ ಆಸರೆ ದೊರೆತುದು ತಂಜಾವೂರು ಸಂಸ್ಥಾನದಲ್ಲಿ, ನಾಯಕರ ಆಳ್ವಿಕೆಯಲ್ಲಿ. ಈ ನಾಯಕರಲ್ಲಿ ರಘುನಾಥ ನಾಯಕನ ಆಳ್ವಿಕೆ (೧೬೦೦–೧೬೩೪) ಸಮರ್ಥವಾಗಿದ್ದಿತು. ಇವರ ಕಾಲದಲ್ಲಿ ತಂಜಾವೂರು ಸಾಹಿತ್ಯ. ಸಂಗೀತ, ಧರ್ಮ, ಕಲೆಗಳಿಗೆಲ್ಲ ಆಶ್ರಯವಾಗಿ ಮೆರೆಯಿತು.

ಈ ಕಾಲದಲ್ಲಿ ಈ ಪ್ರದೇಶದಲ್ಲಿಯೇ ಧಾರ್ಮಿಕ ಪುನರುಜ್ಜೀವನವಾಗುತ್ತಿರುವಾಗ ನೆರೆಯ ಕುಂಭಕೋಣದಲ್ಲಿ ರಾಘವೇಂದ್ರಸ್ವಾಮಿಗಳು ಕಾಣಿಸಿಕೊಂಡರು. ಇವರು ತಂಜಾವೂರು ರಾಜ್ಯದ ಮಂತ್ರಿ ಗೋವಿಂದದೀಕ್ಷಿತರ ಮಗ ಯಜ್ಞನಾರಾಯಣ ದೀಕ್ಷಿತರ ಕಾಲದಲ್ಲಿದ್ದವರು. ಇವರು ವಿಜಯೀಂದ್ರತೀರ್ಥರ ಪ್ರಶಿಷ್ಯರೂ, ಸುಧೀಂದ್ರತೀರ್ಥರ ಶಿಷ್ಯರೂ ಆಗಿದ್ದು ಮಠಾಧಿಪತಿಗಳಾಗಿ ತಪಸ್ವಿಗಳೆಂದೂ ಮಹಾಪಂಡಿತರೆಂದೂ ವಿಖ್ಯಾತರಾದರು. ಅವರು ರಚಿಸಿರುವ 'ಪರಿಮಳ', 'ಭಾಟ್ಟಸಂಗ್ರಹ', 'ಗೀತಾವಿವೃತಿ', 'ಖಂಡಾರ್ಥಗಳು' ಅವರ ವಿದ್ವತ್ತಿಗೂ ವಾದವೈಖರಿಗೂ ಸಾಕ್ಷಿಗಳಾಗಿ ನಿಂತಿವೆ. ಇವರು ಸಂಚಾರ ಕ್ರಮದಲ್ಲಿ ಉತ್ತರ ಕರ್ಣಾಟಕಕ್ಕೆ ಬಂದು, ಆದವಾನಿಯ ಸುಬಾದಾರನಾಗಿದ್ದ ಅಸದುಲ್ಲಾಖಾನ್ (1662–1687) ನಂಥ ಮುಸಲ್ಮಾನ ಅರಸರಿಂದಲೂ ಸತ್ಕೃತರಾಗಿ ಅವರಿಂದ ಜಹಗೀರುಗಳನ್ನು ಪಡೆದು ಮಂಚಾಲೆಯಲ್ಲಿ ನೆಲೆನಿಂತರು. ಆದವಾನಿಗೆ ಸೇರಿದ್ದ. ತುಂಗಭದ್ರಾತೀರದಲ್ಲಿದ್ದ ಮಂಚಾಲೆಯಲ್ಲಿಯೇ ಮಠವನ್ನು ಕಟ್ಟಿಕೊಂಡು, ತಪಶ್ಚರ್ಯೆ ಮಾಡುತ್ತ, ಅಲ್ಲಿಯೇ ಸಶರೀರರಾಗಿ ವೃಂದಾವನಪ್ರವೇಶ ಮಾಡಿದರು. ಅವರ ಶಾಪಾನುಗ್ರಹಶಕ್ತಿಯಿಂದಾಗಿ ಈ ಪ್ರದೇಶವು ಮಂತ್ರಾಲಯವೆನಿಸಿತು. ಇವರ ಪ್ರಭಾವವು ಉತ್ತರಕರ್ಣಾಟಕ ಜಿಲ್ಲೆಯಲ್ಲೆಲ್ಲ ಹರಡತೊಡಗಿತು.

ಪಂಡಿತರೂ ಯೋಗಿಗಳೂ ಮಠಾಧೀಶರೂ ಮಾಂತ್ರಿಕರೂ, ಗುರುರಾಜರೂ ಆಗಿದ್ದ ರಾಘವೇಂದ್ರಸ್ವಾಮಿಗಳು ಕನ್ನಡದಲ್ಲಿ ದೇವರನಾಮಗಳನ್ನು ರಚಿಸತೊಡಗಿದುದು ಸ್ವಾರಸ್ಯವಾದ ವಿವರ. ಎಷ್ಟು ಪದಗಳನ್ನು ರಚಿಸಿದರೊ ತಿಳಿಯದು ; ಒಂದಂತೂ ಇಂದಿಗೂ ಉಳಿದು ಬಂದಿದೆ. 'ಇಂದು ಎನಗೆ ಗೋವಿಂದ' ಎಂದು ಆರಂಭವಾಗುವ ಭೈರವಿರಾಗದ ಈ ಪದದಲ್ಲಿ 'ಧೀರವೇಣುಗೋಪಾಲ' ಎನ್ನುವ ಮುದ್ರಿಕೆಯಿದೆ. ವ್ಯಾಸತೀರ್ಥರಂತೆಯೇ ಇವರೂ ವ್ಯಾಸಕೂಟ – ದಾಸಕೂಟಗಳೆರಡನ್ನೂ ಉಜ್ಜೀವನಗೊಳಿಸಿದರು ; ಹರಿದಾಸಸಾಹಿತ್ಯದಲ್ಲಿ ವಿಚ್ಛಿತ್ತಿ ಬಂದಿದ್ದು

ದನ್ನು ಇವರು ಪರಿಹರಿಸಿದರು. ಇವರ ಪ್ರಭಾವ ಮಂತ್ರಾಲಯದ ಸುತ್ತಮುತ್ತ ಹರಡುವಾಗ, ಹರಿದಾಸರಿಗೆ ಸ್ಫೂರ್ತಿಯೂ ಇದರೊಂದಿಗೆ ಅಲ್ಲಲ್ಲಿ ಹರಿಯಿತು. ಮೊದಲು ಹರಿದಾಸಪಂಥದ ಕೇಂದ್ರವು ಹಂಪಿಯಲ್ಲಿದ್ದುದು ಈಗ ಮಂತ್ರಾಲಯದ ನೆರೆಯಲ್ಲಿ ಮಳಖೇಡ, ಮಾನ್ವಿ, ಕಾಖಂಡಿಕಿ, ಲಿಂಗಸುಗೂರು ಮೊದಲಾದ ಊರು ಗಳಲ್ಲಿ ನಿಂತಿತು. ಅಲ್ಲಲ್ಲಿ ಹರಿದಾಸರು ಹುಟ್ಟಿಕೊಳ್ಳತೊಡಗಿದರು. ಇದು ಹರಿ ದಾಸಪಂಥದ ಎರಡನೆ ಹಂತ. ಎರಡೂ ಹಂತಗಳಿಗೆ ಸ್ವರ್ಣಸೇತುವೆಯಂತೆ ಇದ್ದವರು ರಾಘವೇಂದ್ರಸ್ವಾಮಿಗಳು, ಮೊದಲನೆಯ ಹಂತದ ಹರಿದಾಸರೆಲ್ಲ ವ್ಯಾಸತೀರ್ಥರನ್ನು ಕೊಂಡಾಡಿದಂತೆ, ಎರಡನೆಯವರು ರಾಘವೇಂದ್ರಸ್ವಾಮಿಗಳನ್ನು ಕೊಂಡಾಡುತ್ತಾರೆ. ವಿಜಯದಾಸರ ನಂತರ ಬಂದ ಪರಂಪರೆಯಲ್ಲಿ ಈ ಸ್ವಾಮಿಗಳ ಮೇಲೆ ಮಾಡಿರುವ ಪದಗಳೇ ಹೆಚ್ಚಿವೆ. ವಿಜಯದಾಸರೂ ಅವರ ಸಮಕಾಲೀನರಾದ ಪ್ರಸನ್ನವೆಂಕಟ ದಾಸರೂ ರಾಘವೇಂದ್ರಸ್ವಾಮಿಗಳ ಭಕ್ತರೇ ಆಗಿದ್ದುದು ಗಮನಾರ್ಹವಾದ ವಿವರ.

ಆದರೆ ರಾಘವೇಂದ್ರಸ್ವಾಮಿಗಳ ಪರಂಪರೆ ಉಳಿದು ಬರಲಿಲ್ಲ ; ಹಳೆಯ ಹರಿ ದಾಸ ಪರಂಪರೆಗೆ ತಾವು ನೇರವಾಗಿ ಸೇರದಿದ್ದರೂ ಅದನ್ನು ಮತ್ತೆ ಮುಂದುವರೆಸಲು ಅಗತ್ಯವಾದ ಸ್ಫೂರ್ತಿಯನ್ನು ಒದಗಿಸಿದರು. ಪುರಂದರದಾಸರ ಕಾಲದಲ್ಲಿ ಪ್ರೌಢವಾಗಿ ಪಕ್ವವಾದ ಪರಂಪರೆ ನೂರಮೂವತ್ತು ವರ್ಷಗಳಷ್ಟು ಕಾಲ ಮರೆಯಾಗಿದ್ದು, ಮತ್ತೆ ವಿಜಯದಾಸರ ಕಾಲದಲ್ಲಿ ತಲೆಯೆತ್ತಿಕೊಂಡಿತು; ವಿಜಯದಾಸರಿಗೆ ಪುರಂದರದಾಸರೇ ಪರೋಕ್ಷವಾಗಿ ದೀಕ್ಷಾಗುರುಗಳು ; ದಾಸಪಂಥದ ಎರಡನೆಯ ಹಂತ ಇಲ್ಲಿ ಆರಂಭ ವಾಗುತ್ತದೆ.

ವಿಜಯದಾಸರು ರಾಯಚೂರು ಜಿಲ್ಲೆಯ ಚೀಕಲಪರಿಯವರು . ಈ ಹಳ್ಳಿ ಮಾನ್ವಿಯ ಬಳಿಯಿದೆ. ತುಂಗಭದ್ರೆ ಅಲ್ಲಿ ಹರಿದು, ಶ್ರೀಪಾದರಾಜರಿಂದಲೇ ಪ್ರತಿಷ್ಠೆಗೊಂಡ ಅಶ್ವತ್ಥನರಸಿಂಹನಿಂದ ಕ್ಷೇತ್ರವೆನಿಸಿದ್ದಿತು. ಇಲ್ಲಿ 1687ರಲ್ಲಿ ಹುಟ್ಟಿದ ದಾಸಪ್ಪ ವ್ಯಾಸಕಾಶಿಗೆ ಹೋಗಿದ್ದಾಗ ಅಲ್ಲಿ ಸ್ವಪ್ನದಲ್ಲಿ ಪುರಂದರದಾಸರು 'ವಿಜಯ' ಎಂಬ ಅಂಕಿತವನ್ನು ಆತನ ನಾಲಗೆಯ ಮೇಲೆ ಬರೆದು 'ಹರಿದಾಸ ನಾಗೆ'ಂದು ಹರಸಿದರಂತೆ. ಇದು ಅವರ ಬದುಕಿನಲ್ಲಿ ಮಾರ್ಪಾಡನ್ನು ತಂದು, ಅವರಿಗೆ ಶಾಸ್ತ್ರಜ್ಞಾನವನ್ನೂ ಕವಿತಾಶಕ್ತಿಯನ್ನೂ ದೃಢಭಕ್ತಿಯನ್ನೂ ಒದಗಿಸಿತು. ಮುಂದೆ ಅವರು ವಿಜಯದಾಸರೆಂದು ಪ್ರಸಿದ್ಧರಾಗಿ, ದೇಶದಲ್ಲೆಲ್ಲ ಅಲೆದಾಡಿ, ಇಪ್ಪತ್ತೈದು ಸಾವಿರ ದೇವರನಾಮಗಳನ್ನು ರಚಿಸಿ, ಶಿಷ್ಯಕೋಟಿಯನ್ನು ಸಂಪಾದಿಸಿ, ದಾಸಕೂಟವನ್ನು ಮತ್ತೆ ಕಟ್ಟಿದರು. ಈ ಮೂರು ಬಾರಿ ಕಾಶಿಗೆ ಕಾಲುನಡಿಗೆ ಯಲ್ಲಿಯೇ ಹೋಗಿ ಅಲ್ಲಿಂದ ಗಂಗೆಯನ್ನು ತಮ್ಮ ಹೆಗಲಮೇಲೇ ಹೊತ್ತುತಂದು ಬಳ್ಳಾರಿಜಿಲ್ಲೆಯ ಆಲೂರು ತಾಲ್ಲೂಕಿಗೆ ಸೇರಿದ ಚಿಪ್ಪಗೇರಿಯೆಂಬ ಹಳ್ಳಿಯಲ್ಲಿ

ಹೊಂಡವೊಂದರಲ್ಲಿ ಹಾಕಿ ಅದನು ತೀರ್ಥವನ್ನಾಗಿಸಿದರು ; ತಮ್ಮ ಕಡೆಗಾಲವನ್ನು ಅಲ್ಲಿಯೇ ಕಳೆದು 1755 ರಲ್ಲಿ ತೀರಿಕೊಂಡರು.

ಮೊದಲಲ್ಲಿ ಕಡುಬಡತನವನ್ನು ಅನುಭವಿಸಿದರಾದರೂ, ಹರಿದಾಸದೀಕ್ಷೆಯನ್ನು ಪಡೆದನಂತರ ಅಪಾರವಾದ ಸಂಪತ್ತನ್ನು ಪಡೆದರು, ನಾಡಿನಲ್ಲೆಲ್ಲ ಮಾನ್ಯತೆ ಗಳಿಸಿದರು. ಆದರೆ ಸಂಪತ್ತನ್ನೆಲ್ಲ ದಾನಮಾಡಿ ದಿಟವಾಗಿ ಹರಿದಾಸಮನೋಧರ್ಮದಿಂದಲೇ 'ನಾಳೆಗಿಡದೆ' ಭಗವದ್ಭಕ್ತಿಯೊಂದೇ ಧನವಾಗಿ ಸಮಾಧಾನದಿಂದ ದೇಹವನ್ನಿಟ್ಟರು. ಕುಟುಂಬದ ಕಷ್ಟಗಳು, ಹರಿದಾಸ್ಯದ ಸುಖ, ದೇಶಸಂಚಾರದಿಂದ ಬಂದ ವ್ಯುತ್ಪತ್ತಿ, ಆಳವಾದ ಚಿಂತನೆ ಇವುಗಳಿಂದ ಅವರ ವ್ಯಕ್ತಿತ್ವ ಮೆರುಗುಕೊಟ್ಟ ಬಂಗಾರದಂತೆ ಆಗಿ, ಅವರ ಸಾಹಿತ್ಯ ಪ್ರಗಲ್ಭವಾಗಿದೆ. ಅವರ ಪದಗಳೂ, ಸುಳಾದಿಗಳೂ ಪುರಂದರದಾಸರ ಕೃತಿಗಳಂತೆ ಉನ್ನತಮಟ್ಟದಲ್ಲಿವೆ. ಇವರ ಕಾಲದಲ್ಲಿ ಹರಿದಾಸಸಾಹಿತ್ಯ ಮತ್ತೆ ಜನಪ್ರಿಯವಾಯಿತು, ಸಾರ್ಥಕವಾಯಿತು, ಪುಷ್ಟವಾಯಿತು. ವಿಜಯದಾಸರಿಗೆ ಮೊದಲಲ್ಲಿ ಶಾಸ್ತ್ರಪಾಂಡಿತ್ಯವೇನಿರಲಿಲ್ಲ ; ಅವರು ಪಡೆದುಕೊಂಡ ಜ್ಞಾನ ಗ್ರಂಥಗಳಿಂದ ಬಂದುದಲ್ಲ, ಅನುಭವದಿಂದ ಬಂದುದು. ಭಕ್ತಿಯಿಂದ ಚೇತನ ಶುದ್ಧವಾಗಿ, ಈ ಸತ್ತ್ವಶುದ್ಧಿಯಿಂದ ಜ್ಞಾನ ತಾನಾಗಿ ಒದಗಿಬಂದಿತು. ಹೀಗಾದುದರಿಂದ ಇವರ ಮಾತಿನಲ್ಲಿ ಅಪೂರ್ವವಾದ ಒಂದು ತೇಜಸ್ಸಿದೆ, ಸ್ವಾರಸ್ಯವಾದ ಸರಳತೆಯಿದೆ. ಜನ ಮೆಚ್ಚಿಕೊಂಡುದು ಇದಕ್ಕಾಗಿ.

ಪುರಂದರದಾಸರ ಜೀವನ ಚರಿತ್ರೆಯನ್ನು ನಮಗೆ ಮೊಟ್ಟಮೊದಲಬಾರಿಗೆ ಒದಗಿಸಿದವರು ವಿಜಯದಾಸರೇ ; ಪುರಂದರದಾಸರ ಪದಗಳನ್ನೂ ಸುಳಾದಿಗಳನ್ನೂ ವಿಶೇಷವಾಗಿ ಹಾಡುವ ಪದ್ಧತಿಯೂ ಅವರಿಂದಲೇ ಆರಂಭವಾಯಿತು. ಪುರಂದರದಾಸರ ಕೊಡುಗೆ ನಮಗೆ ಇಂದು ಅರ್ಥವಾಗಿರುವುದು ವಿಜಯದಾಸರಿಂದಲೇ. ನೂರಾರು ವರ್ಷಗಳ ಅಂತರವಿದ್ದರೂ ಗುರು–ಶಿಷ್ಯ ಸಂಬಂಧ ಸಾರ್ಥಕವಾಯಿತು; ಗುರುಗಳು ಬೆಳೆಸಿದ ಗಿಡವನ್ನು ಶಿಷ್ಯ ನೀರೆರೆದು ಕಾಪಾಡಿ ಮರವಾಗಿಸಿದರು. ದಾಸಕೂಟ ಉಳಿಯಿತು, ಬೆಳೆಯಿತು.

ಸಾಂಪ್ರದಾಯಿಕವಾದ ಶಿಕ್ಷಣವಿಲ್ಲದಿದ್ದರೂ ವಿಜಯದಾಸರು ವೇದಾಂತದ ಪ್ರಮೇಯಗಳನ್ನೆಲ್ಲ ತಮ್ಮ ಪದಗಳಲ್ಲಿ ಬಳಸಿಕೊಂಡಿರುವುದೂ, ಗಹನವಾದ ತತ್ತ್ವವಿಚಾರಗಳನ್ನೂ ಸುಬೋಧವಾಗುವಂತೆ ತಿಳಿಯಪಡಿಸಿರುವುದೂ ಸ್ವಾರಸ್ಯವಾಗಿದೆ. ದೇವರು ಬಿಂಬವಾದರೆ,ಅವನ ಪ್ರತಿಬಿಂಬವು ಜೀವನ ಸ್ವರೂಪ.ದೇಹವೆನ್ನುವ ಕನ್ನಡಿಯಲ್ಲಿ ಬೀಳುವಾಗ ಬೇಕಾಗುವ ಬೆಳಕು ದೇವರ ಮಾಯೆಯೆನಿಸಿಕೊಳ್ಳುತ್ತದೆ. 'ತರಣಿ (ಎಂದರೆ ಸೂರ್ಯ) ಉದ್ಭವವಾಗೆ ಆತನ ಪ್ರಕಾಶ ಮರದ ಮೇಲೆ ಬೀಳಲದರ ನೆರಳು ಕಪ್ಪು ತೆರನಾಗಿ ತೋರಲು, ಅಲ್ಲಿದ್ದ ದೋಷ ಭಾಸ್ಕರನಿಂದ ಬಂದದ್ದೇ,

ಮರದ ತಪ್ಪೇ ; ತರಣಿ ಪ್ರಕಾಶ ಮರದ ಮೇಲೆ ಬಿದ್ದಂತೆ ನಿರುತ ಎನ್ನ ಮೇಲೆ ಬಿದ್ದಿಹುದೋ ಪರಿಪೂರ್ಣಮೂರುತಿ ವಿಜಯವಿಠ್ಠಲ ಕರುಣಾಶರಧಿ ನಿನ್ನ ಮಾಯಕ್ಕು ನಿನಗೂ ಭೇದವಿಲ್ಲ' ಎಂದು ಅಭಯಸುಳಾದಿಯಲ್ಲಿ ಬರುತ್ತದೆ. ಹೀಗೆ ವಿಜಯ ದಾಸರು ದಾರ್ಶನಿಕತತ್ತ್ವಗಳನ್ನು ಸರಳವಾಗಿ ಹೇಳುವ ರೀತಿಯನ್ನು ಪುರಂದರದಾಸ ರಿಂದ ಪರಿಗ್ರಹಿಸಿ ಬೆಳೆಸಿದರು.

ತಮ್ಮ ಬಾಳಿನ ಮೊದಲ ಭಾಗವೆಲ್ಲ ಬಡತನದಲ್ಲಿ, ಅವಮಾನದಲ್ಲಿ ಕಳೆದರಾಗಿ ಬದುಕಿನ ಬಗ್ಗೆ ಜುಗುಪ್ಸೆ ಅವರ ಪದಗಳಲ್ಲಿ ಕಾಣಬರುವುದು ಸಹಜವೇ 'ಶರೀರವು ಗಾಳಿಗೊಡ್ಡಿದ ದೀಪ' ; 'ಜನಿಸಲಾರೆನು ಜಗದೊಳಗೆ ಹರಿಯ, ಕನಸಿನೊಳು ನೆನೆಯೆ ಕಂಪನವಾಗುತಿದೆ ಮನಕೆ' , 'ಬಿಂದು ಮಾತ್ರವೋ ಸುಖವು, ದುಃಖ ಪರ್ವತದಷ್ಟು.' ಆದರೆ 'ಹರಿಮಾಡಿದ ಮರ್ಯಾದೆ ಅನುಭವಿಸಲೇಬೇಕು.' ಆದುದರಿಂದ 'ದೈವವೆ ಕುಣಿಸಿದರೆ ಕುಣಿವೆ, ನಗಿಸಿದರೆ ನಗುವೆ, ಮಣಿಸಿದರೆ ಮಣಿವೆ, ಅಳಿಸಿದರೆ ಆಳಿವೆ, ಉಣಿಸಿದರೆ ಉಣುವೆ, ಉಡಿಸಿದರೆ ಉಡುವೆ' (ದೀಕ್ಷಾಸುಳಾದಿ) ಎನ್ನುವ ಮನೋ ವೃತ್ತಿಯನ್ನು ಬೆಳೆಸಿಕೊಂಡರು. 'ನಿರ್ವಾಣದಾಯಕ ವಿಜಯವಿಠ್ಠಲರೇಯ ನಿರ್ವಾಹ ಕರ್ತನು, ನಮಗಾವ ಭಯವಿಲ್ಲ' (ಭಕ್ತಿಸುಳಾದಿ) ಎಂದು ಧೈರ್ಯತಂದುಕೊಂಡರು. ಮನಸ್ಸನ್ನು ನಿಲ್ಲಿಸದೆ ಜ್ಞಾನವಿಲ್ಲ, ಜ್ಞಾನವಿಲ್ಲದೆ ಮೋಕ್ಷವಿಲ್ಲ. ಆದರೆ ಮನಸ್ಸನ್ನು ನಿಲ್ಲಿಸುವುದು ಎಷ್ಟು ಕಷ್ಟವೆಂಬುದು ಎಲ್ಲರಿಗೂ ತಿಳಿದಿದೆ. ಮುರಿದೋಡಿಬರುವ ರಣರಂಗ ನಿಲ್ಲಿಸಬಹುದು, ಹರಿಯುತಿಹ ನದಿಗಳಾ ತಿರುಗಿಸಲಿಬಹುದು.... ಹರಿ ದೋಡುವ ಮನಸ್ಸು ನಿಲಿಸಲಾರಳವಲ್ಲ.' ಮನಸ್ಸಿನಲ್ಲಿರುವ ಕೊಳೆಗಳನ್ನು ತೊಳೆದರೆ ಅದನ್ನು ನಿಲ್ಲಿಸುವುದು ಸುಲಭ ; ಹೀಗೆ ಮಾಡಲು ವೈರಾಗ್ಯ, ಸಾಧುಸಂಗ ಮೊದ ಲಾದುವು ನೆರವಾಗುತ್ತವೆ. 'ಎಲೆ ಮನವೆ, ನಿತ್ಯಮಲವ ತೊಳೆಯದೆಲೆ ಹಲವು ಕರ್ಮಗಳ ಒಲಿದು ಮಾಡಿದರೇನು ?, ಮನಸ್ಸನ್ನು ದೃಢಭಕ್ತಿಯಲ್ಲಿ ನಿಲ್ಲಿಸಿ ಬಿಂಬೋ ಪಾಸನೆ ಮಾಡುತ್ತ ಹರಿದಾಸರು ಅಂತರಂಗದಲ್ಲಿಯೇ ಹರಿಯನ್ನು ಸಾಕ್ಷಾತ್ಕರಿಸಿ ಕೊಳ್ಳುತ್ತಾರೆ; ಮುಕ್ತಿ ಒಡಲಲ್ಲೇ ಇದೆ, 'ವೈಕುಂಠವೆಂಬುದು ಅಲ್ಲೆ ಬರಿದೆ ಲೌಕಿಕ ತೊರೆದರೆ ಇಪ್ಪೊದೆ ಇಲ್ಲೆ.'

ವಿಜಯದಾಸರ ಕಾಲದಲ್ಲಿಯೇ ಇದ್ದ ಇನ್ನೊಬ್ಬ ಪ್ರಸಿದ್ಧ ಹರಿದಾಸರು ಪ್ರಸನ್ನವೆಂಕಟದಾಸರು. ವಿಜಯದಾಸರಿಗೆ ಮೂರು ವರ್ಷ ಮೊದಲೇ, ಎಂದರೆ 1752ರಲ್ಲಿ, ಇವರು ತೀರಿಕೊಂಡಂತೆ ತಿಳಿದುಬರುತ್ತದೆ ; ಆಗ ಅವರಿಗೆ ಎಪ್ಪತ್ತೆರಡು ವರ್ಷಗಳಾಗಿದ್ದುವಂತೆ. ವಿಜಯದಾಸರು 1755ರಲ್ಲಿ ತೀರಿಕೊಳ್ಳುವಾಗ ಅವರಿಗೆ ಅರವತ್ತೆಂಟು ವರ್ಷಗಳಷ್ಟೆ. ಪ್ರಸನ್ನವೆಂಕಟದಾಸರು ಬಿಜಾಪುರ ಜಿಲ್ಲೆಯ ಬಾಗಲ ಕೋಟೆಯ ಬಳಿಯಿರುವ ಕಾಖಂಡಿಕಿ ಎನ್ನುವ ಹಳ್ಳಿಯವರು. ಎಳೆಯ

ವಯಸ್ಸಿನಲ್ಲಿಯೇ ತಂದೆ – ತಾಯಿಯರು ತೀರಿಕೊಳ್ಳಲು. ಇವರು ಬವಣೆಬಿಟ್ಟು ಬೇಸರದಿಂದ ತಿರುಪತಿಗೆ ಹೋಗಿದ್ದಾಗ ಅಲ್ಲಿ ನೆರೆದಿದ್ದ ಹರಿದಾಸರನ್ನು ಕಂಡು ತಾನೂ ಹರಿದಾಸನಾಗಬೇಕೆಂದು ನಿಶ್ಚಯಿಸಿದರು. ಸ್ವಾಮಿ ಪುಷ್ಕರಿಣಿಯಲ್ಲಿ ಸ್ನಾನಮಾಡಿ, ಪ್ರಾಯೋಪವೇಶವ್ರತವನ್ನು ಹಿಡಿದು. ವೇಂಕಟೇಶನ ಮುಂದೆ 'ಪ್ರಾಣಾಚಾರಿ'ಯಾಗಿ ಬಿದ್ದ ಇವರಿಗೆ ವೇಂಕಟೇಶನೇ ಹರಿದಾಸದೀಕ್ಷೆಯುನ್ನು ಕೊಟ್ಟನೆಂದು ಪ್ರತೀತಿಯಿದೆ. ಅಲ್ಲಿಯವರೆಗೆ ಶುದ್ಧಶುಂಠರಾಗಿದ್ದವರಿಗೆ ಇದ್ದಕ್ಕಿದಂತೆ ದಿವ್ಯಜ್ಞಾನವೂ, ಶಾಸ್ತ್ರ ಪರಿಚಯವೂ. ಕವಿತಾಸಾಮರ್ಥ್ಯವೂ ಒದಗಿದುವು.

ಇವರಿಗೂ ವಿಜಯದಾಸರಿಗಿದ್ದಂತೆ ಪುರಂದರದಾಸರ ವಿಚಾರವಾಗಿ ತುಂಬು ಭಕ್ತಿಯಿದ್ದಿತು ; 'ತಂದೆ ಪುರಂದರದಾಸರ ನಮಿಸುವೆ' ಎಂದು ಅವರನ್ನೇ ಆದರ್ಶವಾಗಿಟ್ಟುಕೊಂಡಿದ್ದರು. 'ವಿಠ್ಠಲನ್ನ ಪ್ರೀತಿಪಡಿನಲು' ಪುರಂದರದಾಸರು ರಚಿಸಿದ್ದ 'ಗೀತತಾಯಿ ಸುಳಾದ್ಯುಗಾಭೋಗ ಪದ್ಯಪದ'ಗಳನ್ನೆಲ್ಲ ಮನನಮಾಡಿ, ಸ್ಫೂರ್ತಿ ಪಡೆದು ತಾವೂ ಕೃತಿರಚನೆಗೆ ಕೈಯಿಟ್ಟರು. ಪದಗಳನ್ನೂ, ಉಗಾಭೋಗಗಳನ್ನೂ, ಸುಳಾದಿಗಳನ್ನು, ಮಂಗಳಗಳನ್ನೂ ರಚಿಸಿದ್ದಾರೆ ; ಜಾನಪದ ಧಾಟಿಯನ್ನು ಹಿಡಿದು ಸುವ್ವಾಲಿಗಳನ್ನೂ ಬರೆದಿದ್ದಾರೆ. ಇವರ 'ಪ್ರಸನ್ನವೆಂಕಟ' ಎಂದು. ಅವರದೆಂದು ಸುಮಾರು ಇನ್ನೂರು ಪದಗಳು ಧಾರವಾಡ - ಬಿಜಾಪುರ ಪ್ರಾಂತಗಳಲ್ಲಿ ಬಳಕೆಯಲ್ಲಿವೆ. ಇವುಗಳಲ್ಲಿ ವಾತ್ಸಲ್ಯ, ಆರ್ತ, ವ್ಯಾಕುಲ, ಸಖ್ಯ, ಶಾಂತ, ದಾಸ್ಯಭಾವಗಳ ಸೊಗಸಾದ ನಿರೂಪಣೆಯಿದೆ. ಬಳಸುವ ಮಾತು ಸರಳವಾಗಿದ್ದು ನೇರವಾಗಿ ಮನಮುಟ್ಟುತ್ತದೆ. ದಿನಬಳಕೆಯ ಮಾತನ್ನೇ ಬಳಸಿರುವುದು ಅವರ ಪದಗಳ ಸ್ವಾರಸ್ಯ.

ಪದಗಳಲ್ಲದೆ ಇವರು ಕೆಲವು ಪ್ರಬಂಧಗಳನ್ನೂ ರಚಿಸಿದ್ದಾರೆ. ಭಾಮಿನೀ ಷಟ್ಪದಿಯಲ್ಲಿ 71 ನುಡಿಗಳ 'ಸಮಸ್ತನಾಮ ಮಣಿಗಣಷಟ್‌ಚರಣ ಪದ್ಯಮಾಲೆ' ಸ್ವಾರಸ್ಯವಾದ ಪ್ರಬಂಧ. ದೇವತಾಸ್ತೋತ್ರದ ವ್ಯಾಜದಲ್ಲಿ ವರ್ಣಮಾಲೆ, ಮಹಾ ಭೂತಗಳು, ಶಬ್ದ, ರಾಶಿಗಳು, ನಕ್ಷತ್ರಗಳು, ದಶಾವತಾರ ಮೊದಲಾದ ವಿವರಗಳು ಬರುತ್ತವೆ ಇಲ್ಲಿ. ತೊಂಬತ್ತೊಂಬತ್ತು ನುಡಿಗಳ 'ನಾರದ ಕೊರವಂಜಿ' ಗಾಯನಕ್ಕೆ ಒಪ್ಪುವ, ಅಧ್ಯಾತ್ಮಪರವಾದ ಕೊರವಂಜಿಯ ವರ್ಣನೆ ; ಕೊರವಂಜಿಯ ರೂಪವನ್ನು ಧರಿಸಿದ ನಾರದರು ರುಕ್ಮಿಣಿಯಲ್ಲಿ ಕೃಷ್ಣನ ಬಗ್ಗೆ ಆಸಕ್ತಿಯನ್ನು ಹುಟ್ಟಿಸಿದುದು ಈ ಪ್ರಬಂಧದ ವಸ್ತು. ನಾರಾಯಣನನ್ನು ನಾದದಿಂದ ವಶಪಡಿಸಿಕೊಳ್ಳಲು ನಲವತ್ತು ನುಡಿಗಳಲ್ಲಿ 'ನಾರಾಯಣ ಪಂಜರ'ವನ್ನು ಬರೆದರು. ಇಪ್ಪತೊಂಬತ್ತು ನುಡಿಗಳ 'ಕೃಷ್ಣಪಾರಿಜಾತ' (ಅಥವಾ 'ಸತ್ಯಭಾಮಾವಿಲಾಸ)ವೂ ಅವರ ರಚನೆಯೇ. ಅವರ ಕೃತಿಗಳಲ್ಲಿ ಪ್ರಸಿದ್ಧವಾದುದೆಂದರೆ 'ಕನ್ನಡಭಾಗವತ' ; ದಶಮಸ್ಕಂಧ ಪೂರ್ವಾರ್ಧ ದಲ್ಲಿನ ನಲವತ್ತುಮೂರು ಅಧ್ಯಾಯಗಳಲ್ಲಿ ಬರುವ ಕೃಷ್ಣಲೀಲೆ ಇಲ್ಲಿನ ಮುಖ್ಯವಸ್ತು.

ಕನ್ನಡಿಸುವಾಗ ಸ್ವತಂತ್ರವಾಗಿ ವರ್ತಿಸಿದ್ದಾರೆ ; ಕಾಲಕ್ಕೆ ಅನುಗುಣವಾಗಿ, ತಮ್ಮ ಉದ್ದೇಶಕ್ಕೆ ಉಚಿತವಾಗಿ ವಸ್ತುವನ್ನು ವರ್ಣನೆಗಳನ್ನೂ ಮಾರ್ಪಡಿಸಿಕೊಂಡಿದ್ದಾರೆ. ಅನಗತ್ಯವೆನಿಸಿದ ವಿವರಗಳನ್ನು ಬಿಟ್ಟು, ಬೇಕಾದುವುಗಳನ್ನೂ ತಮ್ಮ ಕಾಲದ ಜನರಿಗೆ ಹಿಡಿಸುವಂತೆ ಮೂಡಿಸಿರುವುದು ಅವರ ಜಾಣತನ,

ಇವರ ಕೃತಿಗಳನ್ನು ಧಾರವಾಡದ ಮಿಂಚಿನಬಳ್ಳಿಯ ಕಾರ್ಯಾಲಯದವರು ಅಚ್ಚು ಮಾಡಿದ್ದಾರೆ.* ಸಂಸಾರದಲ್ಲಿ ವಿರಕ್ತಿಯ ಅಗತ್ಯ ಇವರ ಪದಗಳಲ್ಲಿ ಎದ್ದು ಕಾಣುವ ವಿವರ. 'ನೆಚ್ಚಿಕೆಯಿಲ್ಲದ ದೇಹ ನಂಬಲಿ ಬೇಡಿರೋ', ; ಕಾಡದಿರೆನ್ನ ಕಿಡಿಗೇಡಿ ಮನವೇ' : ಇರಬರಲಿಲ್ಲ ಬಂದರೂ ಇರಲಿಲ್ಲ ಈ ಶರೀರ' ; 'ಈ ದೇಹ ಮನವೆ ಫಾಳಿ ದೀಪಾ'. ಇವನೇ ನಂಬಿದರೆ 'ಹೀಗಾದರೆ ದೊರಾ ಪರಗತಿ'. 'ಚಂಚಲಿಸದೆ ನೀನು ಚತುರನಾಗು, ವಂಚಿಸದೆ ಸಕಲನೊಪ್ಪಿಸು ಹರಿಗ ಮನವೆ' ; 'ಮರೆಯದಿರು ಮನವೆ ಮಾಧವನಾ. ನಮ್ಮ ದುರಿತ ದಾರಿದ್ರ್ಯವನು ಹರಿಸಿ ಹೊರುವವನಾ' ; 'ಮುಂಪೋರುವನು ಮುರಾರಿ'. ಸರಳಮನಸ್ಸಿನ ದಾಸರಿಗೆ ಯೋಗಮಾರ್ಗವೂ ಸರಳವೇ. 'ಯೋಗವೆಂದರದಾವುದು ಮಾನಿಸಾಗೆ, ನಾಗಶಯನನ ನಾಮವ ಕೂಗುವದೆ ಮಹಾಯೋಗ !' ಹೀಗಾದರೆ 'ಅಂಜಿಕ್ಯಾಕೆನಗಂಜಿಕಿ ?.. .... ಅಶನವಸನವನ್ನು ಕುಳಿತಲ್ಲೆ ನಡಿಸುವ, ನಿಶಿದಿನ ನೀಚರಾಧೀನ ಮಾಡದೆ, ಹನನಾಗಿ ತನ್ನಂಘ್ರಿನೆಳಲೊಳು ಬಚ್ಚಿಟ್ಟು, ಕುಶಲದಿ ಸಾಕುವ ದೊರೆಯ ನಂಬಿದ ಬಳಿಕ'.

ಪ್ರಸನ ವೆಂಕಟದಾಸರೂ ಪುರಂದರದಾಸರಂತೆ ಸಾಮಾಜಿಕಶುದ್ಧಿಗೆ, ವ್ಯಕ್ತಿಯ ಚಾರಿತ್ರ್ಯಕ್ಕೆ ತುಂಬಾ ಬೆಲೆ ಕೊಟ್ಟರು. ತಾವು ಕಂಡ ಬೂಟಕತನವನ್ನು ಅಷ್ಟೇ ಕಟುವಾಗಿ ಖಂಡಿಸಿದರು. 'ದಶಜಪ ಮಾಡಲಾಗದವಗೆ ಮುಸುಕಿನ ಜಂಭವ್ಯಾಕೆ ?' ಕಂಡ ನಾರಿಯರ ಬಯಸುವ ಲಂಡಗೆ ಪುರಾಣವ್ಯಾಕೆ?' ; ಕದ್ದು ಹೊಟ್ಟೆ ಹೊರೆವಗೆ, ಸಿದ್ಧಶೀಲಕ್ಷತ್ಯಾತಕ ?'. ಹೊಲೆಯರು ಯಾರು ? 'ಹೊಲೆಯ ಹೊಲತಿ ಇವರವರಲ್ಲ, ಹೊಲಗೇರಿಯೊಳು ಹೊಲೆಯ ಹೊಲತಿಲ್ಲ , , , ,ಹುಸಿ ನುಡಿಯುವವನೆ ಹೊಲೆಯ, ಹೊಲಸು ತಿಂಬುವನೆ ಹೊಲೆಯ !" ಸಾಮಾನ್ಯಜನರ ರೀತಿನೀತಿಗಳೇ ಸದಾಚಾರವೆಂದು ಭ್ರಮಿಸಬಾರದೆಂದು ದಾಸರು ಹೇಳಿದರು: 'ಸುಡು ನಂಬಲಿಬಾರದು ಸಂತೆಯವರಾ'. ವಿಚಾರಮಾಡಿ ಸರಿಯಾದುದನ್ನರಿಯಬೇಕು. 'ಬುದ್ಧಿ, ಧೃತಿಯೆಂಬ ನಾರೇರು ಶ್ರೀಮುದ್ದು ಕೃಷ್ಣನ ಒಲಿಸಿಕೊಂಡಾರು'.

ಪ್ರಸನ್ನವೆಂಕಟದಾಸರ ಪರಂಪರೆ ಬೆಳೆದುಬಂದಂತೆ ಕಾಣುವುದಿಲ್ಲ. ಆದರೆ ವಿಜಯದಾಸರ ಶಿಷ್ಯಕೋಟಿ ವಿಪುಲವಾಗಿದ್ದು ಅದರಲ್ಲಿ ಪ್ರತಿಭಾವಂತರೂ ಇದ್ದುದರಿಂದ ಅವರ ಪರಂಪರೆ ಬೆಳೆಯಿತು. ವಿಜಯದಾಸರ ಶಿಷ್ಯರಲ್ಲಿ ಹನ್ನೆರಡು ಮಂದಿ

* ಎ. ಟಿ. ಪಾಟೀಲರಿಂದ ಸಂಪಾದಿತ, 1956.

ಯಾದರೂ ಪ್ರಖ್ಯಾತರಾದವರಿದ್ದರು ; ಇವರೆಲ್ಲರೂ ಹರಿದಾಸರಾಗಿ ದೇವರನಾಮ ಗಳನ್ನು ತಂತಮ್ಮ ಮುದ್ರಿಕೆಗಳಲ್ಲಿ ರಚಿಸಿದ್ದಾರೆ. ಗೋಪಾಲವಿಠಲ. ಹಯವದನ ವಿಠಲ, ಮುದ್ದುವಿಠಲ, ರಾಮಚಂದ್ರವಿಠಲ, ವೇಣುಗೋಪಾಲವಿಠಲ, ಗುರು ಮಧ್ವೇಶವಿಠಲ, ವ್ಯಾಸವಿಠಲ, ಹಯಗ್ರೀವವಿಠಲ, ಮೋಹನವಿಠಲ, ಗುರುವಿಜಯ ವಿಠಲ, ವಾಸುದೇವವಿಠಲ ಎನ್ನುವ ಮುದ್ರಿಕೆಗಳಲ್ಲಿ ಬರೆದಿರುವ ದೇವರನಾಮಗಳು ವಿಜಯದಾಸರ ಶಿಷ್ಯರವೇ. ಇವರಲ್ಲಿ ಐವರ ತಂತಮ್ಮ ಪರಂಪರೆಗಳನ್ನು ಬೆಳೆಸಿ ವಿಜಯದಾಸರ ಹೆಸರನ್ನು ಉಳಿಸಿದ್ದಾರೆ: 'ಗೋಪಾಲವಿಠಲ' ಮುದ್ರಿಕೆಯ ಭಾಗಣ್ಣ, 'ವೇಣುಗೋಪಾಲ' ಮುದ್ರಿಕೆಯ ತಿಮ್ಮಣ್ಣ, 'ಮೋಹನ ವಿಠಲ' ಮುದ್ರಿಕೆಯ ಮೋಹನದಾಸರು, 'ವ್ಯಾಸವಿಠಲ' ಮುದ್ರಿಕೆಯ ಕಲ್ಲೂರು ಸುಬ್ಬಣ್ಣ ಮತ್ತು 'ವಾಸು ದೇವವಿಠಲ' ಮುದ್ರಿಕೆಯ ಐಜಿ ವೆಂಕಟರಾಮಾಚಾರ್ಯ. ಈ ಐವರಲ್ಲಿ ಮುಖ್ಯ ರಾದವರು ಮೂವರು – ಭಾಗಣ್ಣ (ಗೋಪಾಲದಾಸರು), ಮೋಹನದಾಸರು, ಮತ್ತು ತಿಮ್ಮಣ್ಣ (ವೇಣುಗೋಪಾಲದಾಸರು). ಇವರನ್ನು 'ಭಕ್ತಿಯಲಿ ಭಾಗಣ್ಣ, ಶಕ್ತಿಯಲಿ ತಿಮ್ಮಣ್ಣ, ಯುಕ್ತಿಯಲಿ ಮೋಹನ್ನ' ಎಂದು ಬಣ್ಣಿಸುವ ಮಾತು ದಾಸಕೂಟ ದವರಲ್ಲಿದೆ.

ಭಾಗಣ್ಣ ಅಥವಾ ಗೋಪಾಲದಾಸರು (1721 – 1762) ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನಲ್ಲಿರುವ ಮೊಸರುಕಲ್ಲು ಎನ್ನುವ ಹಳ್ಳಿಯವರು. ತಂದೆ ತೀರಿಕೊಂಡಾಗ ಎಳೆಯ ವಯಸ್ಸಿನಲ್ಲಿದ್ದ ಇವರು ತಾಯಿಯೊಡನೆ ಕಡು ಬಡತನ ದಲ್ಲಿ ಬಾಳುತ್ತ ಗಾಯತ್ರೀಮಂತ್ರದ ಪುರಶ್ಚರಣದಿಂದ ಕವಿತಾಶಕ್ತಿಯನ್ನೂ ಅಪಾರ ಸಂಪತ್ತನ್ನು ಪಡೆದವರೆಂದು ಐತಿಹ್ಯವಿದೆ. ಗದ್ವಾಲದ ಅರಸನು ಇವರನ್ನು ಸನ್ಮಾನಿಸಿ ದ್ದನಂತೆ. ಉತ್ತನೂರಿನಲ್ಲಿ ತನ್ನ ಕುಲದೇವತೆಯಾದ ವೇಂಕಟೇಶನ ಗುಡಿಯಲ್ಲಿ ನರ್ತನ ಸೇವೆ ನಡೆಸುತ್ತ 'ವೆಂಕಟಕೃಷ್ಣ' ಎನ್ನುವ ಅಂಕಿತದಿಂದ ಕವಿತೆಗಳನ್ನು ಮಾಡುತ್ತಿದ್ದ ರಂತೆ. ದೈವವಶದಿಂದ ಇವರಿಗೆ ವಿಜಯದಾಸರ ಸಂಪರ್ಕವುಂಟಾಗಿ, ಅವರಿಂದ ಹರಿದಾಸದೀಕ್ಷೆಯನ್ನು ಪಡೆದರು. ಭಕ್ತಿಮಾರ್ಗವನ್ನು ದೃಢವಾಗಿ ಹಿಡಿದು, ಹರಿಯ ಅನನ್ಯಚಿಂತನೆಯಿಂದ ನೂರಾರು ಪದಗಳನ್ನೂ, ಸುಳಾದಿಗಳನ್ನೂ ಭಾವಪೂರ್ಣವಾಗಿ ರಚಿಸಿದ್ದಾರೆ ; ಇವುಗಳಲ್ಲಿ 'ಗೋಪಾಲವಿಠಲ' ಎನ್ನುವ ಮುದ್ರಿಕೆ ಕಾಣಬರುತ್ತದೆ , 'ವೆಂಕಟಕೃಷ್ಣ' ಅಂಕಿತವಿರುವ ಮೊದಲ ಕವಿತೆಗಳೂ ಕೆಲವು ಉಪಲಬ್ಧವಿವೆಯೆಂದು ಹೇಳುತ್ತಾರೆ.

ಹರಿದಾಸಸಾಹಿತ್ಯದಲ್ಲಿ ಗೋಪಾಲದಾಸರ ಕೃತಿಗಳಿಗೆ ವಿಶಿಷ್ಟವಾದ ಸ್ಥಾನವಿದೆ. ಅವರ ಕನ್ನಡ ಶೈಲಿ ಪ್ರೌಢವಾದುದು, ಅಚ್ಚುಕಟ್ಟಾದುದು, ರಸವತ್ತಾದುದು. ಬಳಸುವ ಭಾಷೆಯಲ್ಲಿ ಎಷ್ಟು ಲಾಲಿತ್ಯವೋ ಸೂಚಿಸುವ ಭಾವಗಳಲ್ಲಿ ಅಷ್ಟೇ ಗಾಂಭೀರ್ಯ.

ಲಯಕ್ಕೆ ನಯವಾಗಿ ನಿಲ್ಲುವ ಪದ್ಯಧಾಟಿ ಅವರದ್ದು ; ಅವರ ಪದಗಳಲ್ಲಿಯೂ ಸುಳಾದಿಗಳಲ್ಲಿಯೂ ಸ್ವಾರಸ್ಯವಾದ ಪ್ರಯೋಗಗಳು ನಡೆದಿವೆ. ಉಗಾಭೋಗಗಳೂ ಹಾಗೆಯೇ ಹೊಸ ಛಂದಸ್ಸನ್ನು ಪಡೆದು ಬಂದಿವೆ. 'ರಕ್ಷಿಸೊ ವೆಂಕಟಗಿರಿರಾಜ' ಎಂದು ಮೊದಲಾಗುವ ವೃತ್ತನಾಮದಲ್ಲಿ ಕಾಣುವ ಪದಬಂಧ ಮನೋಹರವಾದುದು.

ದೇವರೇ ಸ್ವತಂತ್ರನಾದರೂ ಜೀವನಿಗೂ ಒಂದು ಬಗೆಯ ಕರ್ತೃತ್ವ ಸ್ವಾತಂತ್ರ್ಯವಿದೆ. 'ಸರಿಬಂದ ವ್ಯಾಪಾರ ತಾವೆ ಮಾಡಿ ಎನ್ನ ಬರಿಯ ಲೆಕ್ಕಕೆ ಮಾತ್ರ ಗುರಿಯ ಮಾಡಿ'ರುವನು ದೇವರು. 'ಇಲ್ಲದ ಚಿಂತೆಗಳ ಚಿಂತಿಸಿ ಮನ ಅಲ್ಲ ತಿಂದಿಲಿಯಂದದಿ ಸಲ್ಲಣೆಸುತ್ತಿರುವಾಗ ಜೀವನು 'ನಿನ್ನ ಚಿತ್ತ ಎನ್ನ ಭಾಗ್ಯ ಇನ್ನು ಬೇರೆನಗಿಲ್ಲ.... ಎನ್ನದೆಂಬಹಂಕಾರವನ್ನು ಬಿಡಿಸೋ ಸ್ವಾಮಿ ನೀನು ಕುಣಿಸಿದಂತೆ ನಾನು ಕುಣಿವೆನಯ್ಯಾ' ಎನ್ನುವ ನೆಲೆಯಲ್ಲಿ ನಿಲ್ಲುವನು ; ನಾನೇ ಕರ್ತನೆಂಬುದು ವಿಪರೀತ ಜ್ಞಾನ; ದೇವರು 'ಸರ್ವಕಾರಕ ರಕ್ಷಕ', ಸ್ವಾತಂತ್ರ್ಯಭ್ರಮೆಯು ಜೀವನಿಂದ ದೂರಾಗಬೇಕಾದರೆ ವಿರಕ್ತಿ, ಅಷ್ಟಾಂಗಯೋಗ, ಹಂಸೋಪಾಸನೆ, ವಿಷಯಸುಖಗಳಲ್ಲಿ ಹೇಯಬುದ್ಧಿ, ಸಾಧುಸಂಗ ಮೊದಲಾದವನ್ನು ದಾಸರು ಸೂಚಿಸಿದ್ದಾರೆ. ದೇವರ ಸ್ವಾತಂತ್ರ್ಯವನ್ನು ಅನುಭವದಲ್ಲಿ ತಂದುಕೊಳ್ಳಬೇಕು. 'ತಿಳಿವೆಂಬುವ ನೀನೇ, ತಿಳಿದು ತಿಳಿಸುವ ನೀನೇ, ತಿಳಿದ ವಸ್ತುವು ನೀನೇ ತೀರ್ಥಪದನೆ, ತಿಳಿದುದಕೆ ಫಲ ನೀನೇ, ತಿಳಿಯಗೊಡದವ ನೀನೇ, ತಿಳಿವ ಸ್ವತಂತ್ರ ನಿನ್ನದು, ತಿಳಿಸೂ ಸರ್ವೇಶ.' ಆದರೆ ಈ ಸ್ವಾತಂತ್ರ್ಯಭ್ರಮೆಗೆ ಕಾರಣವೇನು ಎಂದು ದಾಸರು ಪ್ರಶ್ನಿಸಿ 'ನಾನೇ ಭ್ರಮಿಸಿದೆನೋ ವಿಷಯದಿ ಮಮತೆ ನೀನೆ ಸೃಜಿಸಿದೆಯೊ ?' ಎಂದು ಮಾರ್ಮಿಕವಾಗಿ ನುಡಿದಿದ್ದಾರೆ.

ವಿಷಯಗಳೂ ಸಾಧನಕ್ಕೆಂದೇ ಸಿದ್ಧವಾದುವು. 'ಇಂದ್ರಿಯಂಗಳನಿತ್ತೆ ಅದಕೆ ವಿಷಯಂಗಳನಿತ್ತೆ, ಒಂದರ ಸಾಧನಗಳೊಂದಕ್ಕಾಗಿವೆ ಅಯ್ಯ.' ಇರುವುದನ್ನೆಲ್ಲ ದೇವರ ಕಡೆ ತಿರುಗಿಸಿ, ಹರಿ ದೈವ, ಗುರು ಮುಖ್ಯ, ಪರ ಉಪಕಾರ, ಪ್ರತಿಕ್ಷಣ ಪರರು ತನ್ನವರು ಸಮ–ಹೀಗೆನ್ನುವ ಭಾವನೆಯಿಂದ ಹರಿಕರುಣವನ್ನು ಸಂಪಾದಿಸಿ ಮುಕ್ತಿಯೋಗ್ಯರಾಗಬೇಕು.

ವಿಜಯದಾಸರಂತೆ ಗೋಪಾಲದಾಸರಿಗೂ ಹಲವಾರು ಪ್ರತಿಭಾವಂತ ಶಿಷ್ಯರಿದ್ದುದರಿಂದ ಅವರ ಪೀಳಿಗೆ ಬೆಳೆಯಿತು. ಅವರ ಶಿಷ್ಯರಲ್ಲಿ ಜಗನ್ನಾಥದಾಸರು ಪ್ರಮುಖರು. ಅವರಲ್ಲದೆ, ಗೋಪಾಲದಾಸರ ತಮ್ಮಂದಿರು ಮೂವರೂ ಅವರಿಂದ ಅಂಕಿತಗಳನ್ನು ಪಡೆದು ಹರಿದಾಸರಾದರು. ಗೋಪಾಲದಾಸರ ಒಡನಾಡಿಯೂ ವಿಜಯದಾಸರ ಶಿಷ್ಯರೂ ಆಗಿದ್ದ ಐಜಿ ವೆಂಕಟರಾಮಾಚಾರ್ಯರೆಂಬ ಪಂಡಿತರೂ ಜ್ಞಾನಿಗಳೂ ರಾಘವೇಂದ್ರ ಸ್ವಾಮಿಗಳ ಮಠದ ಭುವನೇಂದ್ರತೀರ್ಥದಲ್ಲಿ ಬಿಡಿ

ಸಂನ್ಯಾಸವನ್ನು ಪಡೆದು 'ವ್ಯಾಸತತ್ತ್ವಜ್ಞ'ರಾಗಿ ಗೋಪಾಲದಾಸರಲ್ಲಿಯೇ ಹರಿದಾಸರಾಗಿ ನಿಂತರು. 'ವಾಸುದೇವವಿಠಲ' ಎನ್ನುವ ಅಂಕಿತದಿಂದ ಇವರು ಪದಗಳನ್ನು ರಚಿಸಿದ್ದಾರೆ.

ವಿಜಯದಾಸರ ಇನ್ನೊಬ್ಬ ಶಿಷ್ಯರಾದ ವೇಣುಗೋಪಾಲದಾಸರ ಮೊದಲ ಹೆಸರು ತಿಮ್ಮಣ್ಣ ; 1768ರ ಸುಮಾರಿನಲ್ಲಿ ಇವರು ಆದವಾನಿಯ ಸುಬಾದಾರ ಬಸಾಲತ್‌ಜಂಗನ ಬಳಿ ಪ್ರಧಾನಿಯಾಗಿದ್ದರು. ಅಧಿಕಾರದಲ್ಲಿದ್ದಾಗಲೇ ವಿಜಯದಾಸರಿಂದ ಹರಿದಾಸದೀಕ್ಷೆಯನ್ನು ಪಡೆದು 'ವೇಣುಗೋಪಾಲವಿಠಲ' ಎಂಬ ಮುದ್ರಿಕೆಯಲ್ಲಿ ಪದಗಳನ್ನು ರಚಿಸಲಾರಂಭಿಸಿದರು. ಹರಿದಾಸರಾದವರು ಅಧಿಕಾರವನ್ನು ಮಾಡಬಾರದೆನ್ನುವ ನಿಯಮವಿದ್ದರೂ ವಿಜಯದಾಸರು ಇವರಿಗೆ ಅಧಿಕಾರದಲ್ಲಿಯೇ ಇರುವಂತೆ ಅಪ್ಪಣೆ ಮಾಡಿದುದು ಸ್ವಾರಸ್ಯವಾದ ವಿವರ. ವೇಣುಗೋಪಾಲದಾಸರಿಗೇನೊ ವಿರಕ್ತಿಯುಂಟಾಗಿ ಬಿಡುವ ಹಂಬಲದಲ್ಲಿಯೇ ಇದ್ದರು. ಇವರಿಗೆ ಬ್ಯಾಗವಟ್ಟಿ ನರಸಿಂಹಾಚಾರ್ಯರೆನ್ನುವ ಶಿಷ್ಯರಿದ್ದು ಅವರೂ 'ನರಸಿಂಹವಿಠಲ' ಎನ್ನುವ ಮುದ್ರಿಕೆಯಲ್ಲಿ ದೇವರ ನಾಮಗಳನ್ನು ಮಾಡಿದರು.

ಆನೆಗೊಂದಿಯ ಚಿನಿವಾರನೊಬ್ಬನ ಮಗನು ಅನಾಥನಾಗಿದ್ದಾಗ ವಿಜಯದಾಸರು ಅವನನ್ನು ಕಾಪಾಡಿ, ಅವನಿಗೆ ಮಂತ್ರೋಪದೇಶ ಮಾಡಿ, ಅವನನ್ನು ತಮ್ಮ ಸಾಕುಮಗನಾಗಿ ಇರಿಸಿಕೊಂಡು, ಅವನಿಗೆ ಹರಿದಾಸದೀಕ್ಷೆ ಕೊಟ್ಟರು. ಇವರೇ ಮೋಹನದಾಸರು ; 'ಮೋಹನವಿಠಲ' ಎನ್ನುವ ಅಂಕಿತದಿಂದ ನಾದನಾಮಕ್ರಿಯೆಯಲ್ಲಿ 'ಕೋಲುಹಾಡು' ಎಂದು 217 ನುಡಿಗಳ ಪದ್ಯಮಾಲೆಯೊಂದನ್ನು ರಚಿಸಿದರು. ಇದಲ್ಲದೆ ಅವರ ಹತ್ತಾರು ದೇವರನಾಮಗಳೂ ಒಂದೆರಡು ಸುಳಾದಿಗಳೂ ವಿಜಯದಾಸರನ್ನು ಸ್ತೋತ್ರಮಾಡಿರುವ ಪದಗಳೂ ಬಳಕೆಯಲ್ಲಿವೆ.

ಈ ನಡುಯುಗದಲ್ಲಿ ವಿಜಯದಾಸರ ಪ್ರಭಾವವನ್ನು ತಳೆದು ಹರಿದಾಸ್ಯವನ್ನು ಹಿಡಿದು ಪ್ರಸಿದ್ಧರಾದವರಲ್ಲಿ ಹೆಳವನಕಟ್ಟೆ ಗಿರಿಯಮ್ಮನೂ ಸೇರುತ್ತಾರೆ. ಧಾರವಾಡದ ರಾಣೇಬೆನ್ನೂರು ಇವರ ಜನ್ಮಸ್ಥಳ ; ಮದುವೆಯಾಗಿ ತಿಪ್ಪರಸ ಕುಲಕರಣಿಯೊಂದಿಗೆ ಹೆಳವನಕಟ್ಟೆ (ಮಳೆಬೆನ್ನೂರು)ಯಲ್ಲಿದ್ದಾಗ ವಿಜಯದಾಸರ ಶಿಷ್ಯ ಗೋಪಾಲದಾಸರನ್ನು ಕಂಡು ಅವರಿಂದ ಪ್ರಭಾವಿತಳಾಗಿ ಹರಿದಾಸ್ಯವನ್ನು ಹಿಡಿದರು. ಸಾಮಾನ್ಯ ಗೃಹಿಣಿಯಂತೆ ಇರುತ್ತಿದ್ದರೂ ದಿವ್ಯೋನ್ಮಾದವನ್ನು ಆಗಾಗ ಅನುಭವಿಸುತ್ತ 'ಹೆಳವನಕಟ್ಟೆ·ರಂಗ ಎನ್ನುವ ಮುದ್ರಿಕೆಯಲ್ಲಿ ದೇವರ ನಾಮಗಳನ್ನು ರಚಿಸಿದರು.*

---

* ಈಕೆಯ ಕೀರ್ತನೆಗಳನ್ನು ದೇಶಪಾಂಡೆ ರಂಗರಾಯರು ಬೆಂಗಳೂರಿನಲ್ಲಿ ಅಚ್ಚು ಮಾಡಿಸಿದ್ದಾರೆ. ಈಕೆ ಬಿಡಿಪದಗಳನ್ನಲ್ಲದೆ "ಚಂದ್ರಹಾಸಕಥೆ", "ಸೀತಾಕಲ್ಯಾಣ", "ಉದ್ದಾಲಕನ ಕಥೆ" ಗಳನ್ನೂ ದಾದಿಬ ರ್ದರೆ.

ಸಮಾಜದಲ್ಲಿ ಈಕೆಯ ಬಗ್ಗೆ ಕುಹಕನುಡಿಯೂ ವಿರೋಧವೂ ಬಲ[redacted] ರಾಘವೇಂದ್ರಸ್ವಾಮಿಗಳ ಮಠದ ಸುಮತೀಂದ್ರತೀರ್ಥರು ಈಕೆಯ ಹಿರಿಮೆಯನ್ನು ಜನರಿಗೆ ತಿಳಿಯಹೇಳಿದರು. ಗಿರಿಯಮ್ಮನು ಅನೇಕ ಭಕ್ತರಿಂದೊಡಗೂಡಿ, ಅವರಿಗೆ ಭಕ್ತಿಯ ರಸವನ್ನು ಮನದಟ್ಟುಮಾಡಿಕೊಟ್ಟು, ಭಕ್ತರು ಕೊಟ್ಟ ಅಪಾರ ಧನವನ್ನು ಸದ್ವಿನಿಯೋಗಮಾಡಿ, ವಿರಕ್ತರಾಗಿ ಬಾಳನ್ನು ಕಳೆದರು. ಹೊನ್ನಾಳಿಯ ಹತ್ತಿರ ತುಂಗಭದ್ರಾತೀರದ ಕಮ್ಮಾರೆಗಟ್ಟೆ ಎನ್ನುವ ಹಳ್ಳಿಯಲ್ಲಿ ಇವರು ತೀರಿಕೊಂಡರೆಂದು ಹೇಳುತ್ತಾರೆ. ಅಲ್ಲಿ ಆಕೆ ಕಟ್ಟಿಸಿದ ಹನುಮಂತನ ಗುಡಿಯೊಂದಿದೆ; ಅಲ್ಲಿ ರಥೋತ್ಸವವಾಗುವ ಶ್ರಾವಣಶುದ್ಧಪಂಚಮಿಯೇ ಆಕೆಯು ತೀರಿಕೊಂಡ ದಿನವೆಂದು ಪ್ರತೀತಿ. ಆಕೆಗೆ ಹರಕೆ ಹೊತ್ತು ನಡೆಸುಕೊಳ್ಳುವವರು ಇಂದಿಗೂ ಇದ್ದಾರೆ.

ಹರಿದಾಸ ಪರಂಪರೆಯ ನಡುಯುಗ ವಿಜಯದಾಸರಿಂದ ಆರಂಭವಾಗುತ್ತದೆ; ಅವರೂ, ಪ್ರಸನ್ನವೆಂಕಟದಾಸರೂ, ವಿಜಯದಾಸರ ಶಿಷ್ಯ ಗೋಪಾಲದಾಸರೂ, ಹೆಳವನಕಟ್ಟೆ ಗಿರಿಯಮ್ಮನವರೂ ಈ ಯುಗದ ಪ್ರಮುಖ ಹರಿದಾಸರು. ನಡುಯುಗ ಆರಂಭವಾಗಲು ದಾರಿ ಮಾಡಿಕೊಟ್ಟ ಮಹಾನುಭಾವರು ಮಂತ್ರಾಲಯದ ರಾಘವೇಂದ್ರಸ್ವಾಮಿಗಳು. ಇವರ ಪ್ರಭಾವ ನಡುಯುಗದಲ್ಲಿಯೂ ನಡೆದು ಬಂದಿತು.

## ಪೀಳಿಗೆಯ ಇಳಿಮುಖ

ವಿಜಯದಾಸರು ಮತ್ತು ಗೋಪಾಲದಾಸರು ಇದ್ದು, ಒಟ್ಟಿಗೆ ಕೆಲಸಮಾಡಿದ ಕಾಲವನ್ನು ಹರಿದಾಸಸಾಹಿತ್ಯದ ವಿಸ್ತಾರಕಾಲ ಎಂದು ಹೇಳಬಹುದು. ಪ್ರಾಚೀನ ದಾಸರಾದ ಶ್ರೀಪಾದರಾಜರು, ವ್ಯಾಸರಾಯರು, ಪುರಂದರದಾಸರು, ಕನಕದಾಸರು ಇವರ ಕೃತಿಗಳನ್ನೆಲ್ಲ ಹಾಡಿ ಬಳಕೆಗೆ ತಂದವರು ಇವರಿಬ್ಬರೇ ; ಹರಿದಾಸಪಂಥಕ್ಕೂ ಹರಿದಾಸಸಾಹಿತ್ಯಕ್ಕೂ ಹೊಸಜೀವ ಬಂದುದು ಇವರ ಕಾಲದಲ್ಲಿಯೇ. ಇವರಿಬ್ಬರು ಸಿದ್ಧಪಡಿಸಿದ ಸಾಹಿತ್ಯವೂ ವಿಪುಲವಾದುದು. ಗೋಪಾಲದಾಸರಿಗೆ ಹಲವಾರು ಶಿಷ್ಯರಿದ್ದರೆಂದು ಹೇಳಿತಷ್ಟೆ. ಇವರಲ್ಲಿ ಪ್ರಮುಖರಾದವರು, ಮುಂದಿನ ತಲೆಮಾರಿನ ದಾಸಕೂಟಕ್ಕೆ ಆಚಾರ್ಯಪುರುಷರಂತಿದ್ದರು, ಜಗನ್ನಾಥದಾಸರು. ಗೋಪಾಲದಾಸರ ತಮ್ಮಂದಿರು ಮೂವರು ಗೋಪಾಲದಾಸರಿಂದಲೇ ಹರಿದಾಸದೀಕ್ಷೆಯನ್ನು ಪಡೆದು, 'ಗುರುಗೋಪಾಲ ವಿಠಲ', 'ವರದಗೋಪಾಲವಿಠಲ', 'ತಂದೆ ಗೋಪಾಲ ವಿಠಲ' ಎನ್ನುವ ಅಂಕಿತಗಳಿಂದ ದೇವರ ನಾಮಗಳನ್ನು ರಚಿಸಿದರು. ಈ ಮೂವರ

ಪೀಳಿಗೆ ಉಳಿದು ಬರಲಿಲ್ಲ. ಗೋಪಾಲದಾಸರ ಇನ್ನೊಬ್ಬ ಶಿಷ್ಯ ಗದ್ವಾಲದ ಸುಬ್ಬಣ್ಣ ದಾಸ (ಕೇಶವವಿಠಲ)ರ ಪೀಳಿಗೆ ಸುರಪುರದ ಆನಂದದಾಸರ ಮೂಲಕ ಮುಂದು ವರಿಯಿತು. ಆದರೆ ಗೋಪಾಲದಾಸರ ಹೆಸರನ್ನೂ ಪರಂಪರೆಯನ್ನೂ ಉಳಿಸಿದವರು, ಬೆಳೆಸಿದವರು ಜಗನ್ನಾಥದಾಸರೇ.

ಇವರು ಇತರ ದಾಸರಂತಲ್ಲದೆ ಮಹಾಪಂಡಿತರು, ಸಂಸ್ಕೃತವೈದುಷ್ಯದಲ್ಲಿ ಸಿದ್ಧಿ ಯನ್ನು ಪಡೆದವರು; ಶಾಸ್ತ್ರಭಾಗದಲ್ಲಿ ಎತ್ತಿದ ಕೈ ಅವರದು. ಇವರ ತಂದೆ ಬ್ಯಾಗವಟ್ಟಿ ನರಸಿಂಹಾಚಾರ್ಯರು ವೇಣುಗೋಪಾಲದಾಸರಲ್ಲಿ ಹರಿದಾಸದೀಕ್ಷೆಯನ್ನು ಪಡೆದು ವಿಜಯದಾಸರ ಪರಂಪರೆಗೇ ಸೇರಿದ್ದರು ; ಮಗ ಶ್ರೀನಿವಾಸಚಾರ್ಯರೂ (ಇದು ಜಗನ್ನಾಥದಾಸರ ಹೆಸರು) ಅದೇ ಪರಂಪರೆಯಲ್ಲಿ ಗೋಪಾಲ ದಾಸರಿಂದ ಹರಿದಾಸದೀಕ್ಷೆಯನ್ನು ಪಡೆದರು. ಬ್ಯಾಗವಟ್ಟಿ ರಾಯಚೂರು ಜಿಲ್ಲೆಯ ಮಾನ್ವಿ ತಾಲ್ಲೂಕಿಗೆ ಸೇರಿದ ಹಳ್ಳಿ. ಆ ಕಾಲಕ್ಕೆ ರಾಯಚೂರು ಹರಿದಾಸ ಪಂಥದ ಕೇಂದ್ರವಾಗಿದ್ದಿತು. ಜಗನ್ನಾಥದಾಸರು ಇಲ್ಲಿ 1728ರಲ್ಲಿ ಹುಟ್ಟಿ 1809ರಲ್ಲಿ ತೀರಿಕೊಂಡರು. ಹುಡುಗರಾಗಿದ್ದಾಗಲೇ ರಾಘವೇಂದ್ರಸ್ವಾಮಿ ಮಠದ ವರದೇಂದ್ರ ತೀರ್ಥರಲ್ಲಿ ಶಿಷ್ಯವೃತ್ತಿ ಮಾಡಿ ನಾಲ್ಕುಶಾಸ್ತ್ರಗಳಲ್ಲಿಯೂ ಪಾರಂಗತರಾದರು, ವಾದ ವಾಕ್ಯಾರ್ಥಗಳಲ್ಲಿಯೂ ನಿಸ್ಸೀಮರೆನಿಸಿದರು.

ಮೊದಮೊದಲು ಇವರಿಗೆ ಹರಿದಾಸಪಂಥದ ವಿಚಾರವಾಗಿ ತುಂಬ ಅಸಡ್ಡೆ ಇದ್ದಿತು ; ಕನ್ನಡದ ಪದಗಳನ್ನು ಹೀಯಾಳಿಸುತ್ತಿದ್ದರು. ಶಾಸ್ತ್ರಮರ್ಯಾದೆಯೂ ಸಂಸ್ಕೃತಾಭಿಮಾನವೂ ಬಲವಾಗಿದ್ದುದು ಇದಕ್ಕೆ ಕಾರಣ. ವಿಜಯದಾಸರನ್ನೆ ಉದಾ ಸೀನರಾಗಿ ಕಂಡರಂತೆ ; ಮಾನ್ವಿಗೆ ಅವರು ಬಂದಾಗ ಅವಮಾನವನ್ನೂ ಮಾಡಿದರಂತೆ. ಈ ಅಪಚಾರಕ್ಕೆನೊಂದು ವಿಜಯದಾಸರ ಶಿಷ್ಯರಾದ ಗೋಪಾಲದಾಸರು ಉಪವಾಸ ಕೈಗೊಂಡರಂತೆ. ಆಗ ಇದ್ದಕ್ಕಿದ್ದಂತೆ ಜಗನ್ನಾಥದಾಸರಿಗೆ ಅಸಹ್ಯವಾದ ಉದರವ್ಯಾಧಿ ತಲೆದೋರಿ ಯಾರಿಂದಲೂ ಅದರ ಪರಿಹಾರ ದೊರೆಯದೆ ಕಡೆಗೆ ಗೋಪಾಲದಾಸರಲ್ಲಿ ಬಂದು ಕ್ಷಮೆಬೇಡಿದರೆಂದೂ ಅನಂತರ ಅವರ ಆರೋಗ್ಯ ಸುಧಾರಿಸಿತೆಂದೂ ಪ್ರತೀತಿ ಯಿದೆ. ಇದಾದ ಮೇಲೆ ಅವರು ಗೋಪಾಲದಾಸರಿಂದಲೇ ಹರಿದಾಸದೀಕ್ಷೆಯನ್ನು ಪಡೆದು 'ಜಗನ್ನಾಥವಿಠಲ' ಎನ್ನುವ ಅಂಕಿತದಿಂದ ನೂರಾರು ಪದ್ಯಗಳನ್ನೂ ಸುಳಾದಿ ಗಳನ್ನೂ 600 ನುಡಿಗಳ ತತ್ತ್ವಸುವ್ವಾಲಿಯನ್ನೂ ರಚಿಸಿದರು.

ಇವರ ಕೃತಿಗಳಲ್ಲಿ ಸುಪ್ರಸಿದ್ಧವಾಗಿರುವುದು ಹರಿಕಥಾಮೃತಸಾರ' ದಾಸ ಸಾಹಿತ್ಯದಲ್ಲಿ ಇಷ್ಟು ಪ್ರೌಢವಾದ, ಸಮಗ್ರವಾದ, ವಿದ್ವತ್ಪೂರ್ಣವಾದ, ಪ್ರಮೇಯ ಪುಷ್ಟವಾದ ಗ್ರಂಥ ಇನ್ನೊಂದಿಲ್ಲ. ವಿವರಣೆಯಿಲ್ಲದೆ ಇದು ಅರ್ಥವಾಗುವುದು ಕಷ್ಟವೆಂದು ಇದಕ್ಕೆ ಹಲವಾರು ವ್ಯಾಖ್ಯಾನಗಳೂ ಟಿಪ್ಪಣಿಗಳೂ ಮೈದಳೆದುವು.

ಕಮಲಾಪತಿದಾಸರು, ಸಂಕರ್ಷಣ ಒಡೆಯರು, ಪದ್ಮನಾಭದಾಸರು ಇವರ ವ್ಯಾಖ್ಯಾನಗಳು ಪ್ರಸಿದ್ಧವಾಗಿವೆ. ಕಡೆಯ ಲೇಖಕರ 'ಭಾವಪ್ರಕಾಶಿಕೆ' ದಾಸಕೂಟದವರಲ್ಲಿ ತುಂಬಾ ಬಳಕೆಯಲ್ಲಿದೆ. ಜಗನ್ನಾಥದಾಸರ 'ಹರಿಕಥಾಮೃತಸಾರ'ವು ಮೂವತ್ತೆರಡು ಸಂಧಿಗಳಲ್ಲಿ ರಚಿಸಿದ 988 ಷಟ್ಪದಿಗಳಿಂದ ಕೂಡಿದ ಪದ್ಯಗ್ರಂಥ. ಇದಕ್ಕೆ ಶ್ರೀದವಿಠಲದಾಸರು (ಕರ್ಜಗಿ ದಾಸಪ್ಪ) ಇನ್ನೊಂದು ಸಂಧಿಯನ್ನು ಸೇರಿಸಿ ಅದರ 24 ಷಟ್ಪದಿಗಳನ್ನು ಫಲಶ್ರುತಿಯೆಂದು ಕರೆದರು. ಈ ದಾಸರು ಜಗನ್ನಾಥದಾಸರ ಶಿಷ್ಯರೇ; ಇವರ ಪೀಳಿಗೆಯಲ್ಲಿ ಭೀಮೇಶವಿಠಲದಾಸರೆಂಬ ಇನ್ನೊಬ್ಬ ಹರಿದಾಸರು ಬಂದರು.

ಈ 'ಹರಿಕಥಾಮೃತಸಾರ'ವು ಒಟ್ಟವಾಗಿಯೂ 'ನವರಸಭರಿತ ಗುಣಗಂಭೀರ ರತ್ನಾಕರ ರುಚಿರ ಶೃಂಗಾರ – ಸಾಲಂಕಾರ ವಿಸ್ತಾರ'ವಾಗಿಯೇ ಇದೆ. ಹರಿದಾಸ ಸಾಹಿತ್ಯದಲ್ಲಿ ಇದು ಶಾಸ್ತ್ರಪ್ರಬಂಧ; ಮಾಧ್ವಸಿದ್ಧಾಂತದ ಎಲ್ಲ ಪ್ರಮೇಯಗಳನ್ನು ಪ್ರೌಢವಾದ ಕನ್ನಡದಲ್ಲಿ ಇಲ್ಲಿ ಖಚಿತವಾಗಿ ನಿರೂಪಿಸಿದ್ದಾರೆ. ಸೃಷ್ಟಿ, ಸ್ಥಿತಿ, ಪರಮಾತ್ಮನ ಗುಣಗಳು, ಜೀವನಲಕ್ಷಣ, ಸ್ವಾತಂತ್ರ್ಯವಿಚಾರ, ಅಪರೋಕ್ಷಜ್ಞಾನ, ಮಹಾಪೂಜೆ ಮೊದಲಾದ ವಿವರಗಳೆಲ್ಲ ಇಲ್ಲಿ ಸ್ವಾರಸ್ಯವಾಗಿ ಪರಿಶೀಲನೆಗೆ ಬರುತ್ತವೆ.

ಜಗನ್ನಾಥದಾಸರು ಗುರುಗಳಾದ ಗೋಪಾಲದಾಸರ ಮೇಲೂ, ರಾಘವೇಂದ್ರ ಸ್ವಾಮಿಗಳ ಮೇಲೂ, ಮಾಧ್ವಪ್ರಮೇಯಗಳನ್ನು ರಚಿಸಿದ್ದಾರೆ. 'ಭಯಪರಿಹಾರ ಸುಳಾದಿ', 'ತಂತ್ರಸಾರ ಸುಳಾದಿ' ಮೊದಲಾದುವೂ ಉಗಾಭೋಗಗಳೂ ದಾಸಕೂಟದಲ್ಲಿ ಇಂದಿಗೂ ಜನಪ್ರಿಯವಾಗಿವೆ. ಇವರು 'ರಂಗನೊಲಿದ' ಭಾಗವತರೆಂದೂ ಅಪರೋಕ್ಷಜ್ಞಾನಿಗಳೆಂದೂ ಪ್ರಸಿದ್ಧರಾಗಿದ್ದರು. ಇವರು ಮೈಸೂರು ರಾಜ್ಯಕ್ಕೂ ಬಂದಿದ್ದು ದಿವಾನ ಪೂರ್ಣಯ್ಯನವರಿಂದ ಸತ್ಕೃತರಾಗಿದ್ದರು. ಮಾನ್ವಿಯಲ್ಲಿ ತೀರಿಕೊಂಡರು; ಅವರ ವಂಶೀಕರು ಇಂದಿಗೂ ಇದ್ದಾರೆ.

ಭಕ್ತಿಯಲ್ಲಿಯೂ ವಿರಕ್ತಿಯಲ್ಲಿಯೂ ಪ್ರತಿಭೆಯಲ್ಲಿಯೂ ಪ್ರಭಾವದಲ್ಲಿಯೂ ಜಗನ್ನಾಥದಾಸರಂಥ ಹರಿದಾಸರು ಮತ್ತೆ ಕಾಣಿಸಿಕೊಳ್ಳಲಿಲ್ಲ. ಹರಿದಾಸ ಪರಂಪರೆಯಲ್ಲಿ ಕಡೆಯ ದೊಡ್ಡ ಹೆಸರೆಂದರೆ ಅವರದೇ. ಆದರೆ ಅವರಿಗೆ ಎಂಟು – ಹತ್ತು ಮಂದಿ ಶಿಷ್ಯರಿದ್ದು ಇವರೆಲ್ಲರೂ ದಾಸಸಾಹಿತ್ಯವನ್ನು ವಿಸ್ತರಿಸಿದರು; ಇಬ್ಬರು ಮೂವರ ಪೀಳಿಗೆಗಳೂ ಮುಂಬರಿದವು. ಲಿಂಗಸುಗೂರು ಯೋಗೀಂದ್ರ (ಪ್ರಾಣೇಶವಿಠಲ) ಎಂಬ ಶಿಷ್ಯರು 1822ರ ಸುಮಾರಿಗಿದ್ದು ಸೊಗಸಾದ ಪದಗಳನ್ನೂ ಹತ್ತಾರು ಕಾವ್ಯಗಳನ್ನೂ ಬರೆದಿದ್ದಾರೆ. ಕರ್ಜಗಿ ದಾಸಪ್ಪ (ಶ್ರೀದವಿಠಲ)ನ ವಿಚಾರ ಆಗಲೇ ಬಂದಿದೆ. 'ಶ್ರೀಶವಿಠಲ', 'ಲಕ್ಷ್ಮೀಶವಿಠಲ', 'ಸುಂದರವಿಠಲ', 'ಗುರುಶ್ರೀಶವಿಠಲ', 'ಸುಖನಿಧಿವಿಠಲ', 'ವರದೇಂದ್ರವಿಠಲ', ಮೊದಲಾದ ಮುದ್ರಿಕೆಯ ಪದಗಳೆಲ್ಲ ಜಗನ್ನಾಥದಾಸರ ಪರಂಪರೆಗೆ ಸೇರಿದ ದಾಸರವೇ. ಕದರಮಂಡಿಗೆ, ಇಛರಾಮಪುರ,

ಹೊನ್ನಾಳಿ, ಮೊದಲಕಲ್ಲು, ಬಳ್ಳಾರಿ ಮುಂತಾದ ಸ್ಥಳಗಳು ಹರಿದಾಸರ ಕೇಂದ್ರಗಳಾದುದು ಅವರ ಕಾಲದಲ್ಲಿಯೇ.

ಗೋಪಾಲದಾಸರ ಶಿಷ್ಯರಲ್ಲಿ ಒಬ್ಬರಾದ ಗದ್ವಾಲದ ಸುಬ್ಬಣ್ಣದಾಸರು (ಕೇಶವವಿಠಲ) ತಮ್ಮ ಶಿಷ್ಯರಾದ ಸುರಪುರದ ಆನಂದದಾಸರಿಂದ ಪ್ರಸಿದ್ಧವಷ್ಟೆ. ಆನಂದದಾಸರು ವಿಜಯದಾಸರ ಊರಾದ ಚೀಕಲಪರಿಯವರೇ ; ಗುಲ್ಬರ್ಗಾ ಜಿಲ್ಲೆಯ ಸುರಪುರ ಸಂಸ್ಥಾನಕ್ಕೆ ಬಂದು ಅಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿದರು. ಅಲ್ಲಿಯೇ ಅವರಿಗೆ ಸಂಗೀತಶಿಕ್ಷಣವೂ ದೊರೆಯಿತು; ಸುರಪುರದ ಅರಸನ ಆಸ್ಥಾನದಲ್ಲಿ ವಿದ್ವಾಂಸರಾದರು. ಪ್ರಾಪಂಚಿಕ ಅಭ್ಯುದಯದಲ್ಲಿಯೇ ನಿರತರಾಗಿದ್ದ ಅವರ ಅಂತರಂಗದ ಕಣ್ಣನ್ನು ತೆರೆಯಿಸಿದವರು ಗದ್ವಾಲದ ಸುಬ್ಬಣ್ಣದಾಸರು; ಶ್ರೀಶವಿಠಲ' ಎನ್ನುವಂಕಿತದ ಹುಂಡೇಕಾರದಾಸರು ಎನ್ನುವ ಅಭಿಪ್ರಾಯವೂ ಬಂದಿದೆ (ಈ ದಾಸರು ಜಗನ್ನಾಥದಾಸರ ಶಿಷ್ಯರು). ಯಾರೋ, ಅಂತೂ ಸುರಪುರದ ಆನಂದದಾಸರು; ಕೀರ್ತನಪದ್ಧತಿಯನ್ನು ಕೈಗೊಂಡವರಾದರೂ ಲೌಕಿಕವನ್ನು ಬಿಡಲಿಲ್ಲ.

ಹರಿದಾಸನಂತರವೂ ಗಾಯನ, ರುದ್ರವೀಣಾವಾದನಗಳಲ್ಲಿ ಪ್ರಖ್ಯಾತಿಯನ್ನು ಪಡೆದು ಗದ್ವಾಲ, ವನಪರ್ತಿ ಮೊದಲಾದ ರಾಜಾಸ್ಥಾನಗಳಲ್ಲಿ ಸನ್ಮಾನಿತರಾದವರು. ಮೈಸೂರಿಗೂ ಬಂದಿದ್ದು ಸದಾಶಿವರಾಯರೆದುರು ಹಾಡಿ, ವೀಣೆಯನ್ನು ನುಡಿಸಿ 'ಭಲೆ' ಎನಿಸಿಕೊಂಡರಂತೆ; ಸದಾಶಿವರಾಯರು ವೀಣೆ ಶೇಷಣ್ಣನವರ ಗುರುಗಳು, ದೊಡ್ಡ ವಾಗ್ಗೇಯಕಾರರು. ಮುಮ್ಮಡಿಕೃಷ್ಣರಾಜಒಡೆಯರು ಅವರಿಗೆ ತುಂಬ ಸನ್ಮಾನಮಾಡಿ ಕಳುಹಿಸಿದರಂತೆ. ಲೌಕಿಕ ಮರ್ಯಾದೆಗಳಿಂದ ಬೇಸತ್ತು ಮಂತ್ರಾಲಯದಲ್ಲಿ ಕೆಲಕಾಲ ನಿಂತು ರಾಘವೇಂದ್ರಸ್ವಾಮಿಗಳ ಸೇವೆ ಮಾಡಿದರು. ಅಲ್ಲಿ ಇಭರಾಮಪುರದ ಕೃಷ್ಣಾಚಾರ್ಯರೆಂಬ ಜ್ಞಾನಿಗಳ ಸಹವಾಸ ದೊರೆತು ಅಪರೋಕ್ಷ ಜ್ಞಾನಿಗಳಾದರೆಂದು ಐತಿಹ್ಯವಿದೆ. ಅನಂತರ ರಾಜಸಭೆಗಳಿಗೆ ಹೋಗುವುದನ್ನು ಬಿಟ್ಟು ಹರಿದಾಸವೃತ್ತಿಯನ್ನೇ ಹಿಡಿದು ಕೀರ್ತನೆಗಳನ್ನು ಮಾಡಲಾರಂಭಿಸಿದರು. ಸುರಪುರದ ಗೋಪಾಲಕೃಷ್ಣ ಗುಡಿಯಲ್ಲಿಯೇ ಕೀರ್ತನೆ ಮಾಡುತ್ತ ಪ್ರಾಣಬಿಟ್ಟರೆಂದು ಹೇಳುತ್ತಾರೆ.

ಇವರ ಪದಗಳು ಸರಳವಾದ ಕನ್ನಡ ಮಾತುಗಳಿಂದ ಕೂಡಿದ್ದು ದಿನಬಳಕೆಯ ಭಾವನೆಗಳಲ್ಲಿಯೇ ಅಧ್ಯಾತ್ಮದ ಆಳವನ್ನು ಮುಟ್ಟಿಸುವಂಥವು. ಇವರು 'ಕೀರ್ತನ ಗೀತೆ'ಯನ್ನು ಬರೆದಿದ್ದಾರೆಂದು ಬೇಲೂರು ಕೇಶವದಾಸರು ತಿಳಿಸುತ್ತಾರೆ; ಅದರ ಮೊದಲ ಪದವನ್ನು ಉದ್ಧರಿಸಿಯೂ ಇದ್ದಾರೆ. ಇದಲ್ಲದೆ ಅವರ ಹಲವಾರು ದೇವರ ನಾಮಗಳೂ ಪ್ರಚಲಿತವಾಗಿವೆ. ಇವರ ಪರಂಪರೆಯಲ್ಲಿ ಸುರಪುರದ ಭೀಮದಾಸರು (ಶ್ರೀಶಕೇಶವವಿಠಲ), ಸಂತೆಬೆನ್ನೂರು ರಾಮಾಚಾರ್ಯರು (ಕಮಲಾಪತಿ

ವಿಠಲ) ಎಂಬಿಬ್ಬರು ಹರಿದಾಸರು ಒಂದು ಎರಡನೆಯವರ ಪೀಳಿಗೆ ಸ್ವಲ್ಪಕಾಲ ನಡೆಯಿತು. ಅವರ ಶಿಷ್ಯರಲ್ಲಿ ಗರ್ಗೇಶ್ವರಿ ಕೇಶವರಾಯರು (ಮಧ್ವೇಶವಿಠಲ) ಪ್ರಮುಖರು. ಇಲ್ಲಿಗೆ 1820ರ ಸುಮಾರು ಮುಟ್ಟುತ್ತದೆ.

ಗೋಪಾಲದಾಸರ ಪೀಳಿಗೆಯನ್ನು ಜಗನ್ನಾಥದಾಸರ ಮೂಲಕ ಪ್ರಾಣೇಶ ವಿಠಲದಾಸರ ಪೀಳಿಗೆಯಲ್ಲಿ ಕರ್ಜಗಿ ಏರಿ ನಾರಾಯಣಾಚಾರ್ಯರು (ಸುಖನಿಧಿ ವಿಠಲ, 1912ರ ಸುಮಾರು), ಅವರಿಂದ ಅಂಕಿತ ಪಡೆದ ಕಲಮದಾನಿ ನಾರಾಯಣ ರಾಯರು (ಸಿರಿವಿಠಲ) ನಮ್ಮ ಕಾಲದವರೆಗೆ ಉಳಿಸಿಕೊಂಡುಬಂದಿದ್ದಾರೆ. ವಿಜಯ ದಾಸರ ಪೀಳಿಗೆಯನ್ನೇ ವೆಂಕಟ ವಿಠಲದಾಸರ ಮೂಲಕ ಬೇಲೂರು ಕೇಶವದಾಸರು (ಮರಣ 1945) ಉಳಿಸಿದರು. ವಿಜಯದಾಸರ ಮತ್ತೊಬ್ಬ ಶಿಷ್ಯರಾದ ಮೋಹನ ದಾಸರು ತಮ್ಮ ಪರಂಪರೆಯನ್ನು ನಾಲ್ವರು ಶಿಷ್ಯರಲ್ಲಿ ಇರಿಸಿದರು; ಅವರಲ್ಲಿ ಚಿಕ್ಕೇನ ಹಳ್ಳಿ ತಿಮ್ಮಣ್ಣದಾಸರೆಂಬುವರು (ರಘುಪತಿವಿಠಲ) ಈ ಪರಂಪರೆಯನ್ನು ಬೆಳೆ ಸಿದರು. ಇವರ ಪರಂಪರೆಯಲ್ಲಿ ಬಂದ ದೊಡ್ಡಬಳ್ಳಾಪುರದ ಮುದ್ದುಮೋಹನ ವಿಠಲದಾಸರು ಮೋಹನದಾಸರ ಪೀಳಿಗೆಯನ್ನು ಮುಂದುವರಿಸಿ, ದೇವರಾಯನ ದುರ್ಗದ ಸುಬ್ಬರಾಯದಾಸ (ತಂದೆ ಮುದ್ದುಮೋಹನವಿಠಲ)ರ ಮೂಲಕ ಇಂದಿನ ವರೆಗೆ ಉಳಿಸಿದ್ದಾರೆ. ದೇವರಾಯನದುರ್ಗದ ದಾಸರಿಗೆ ಚಿತ್ರದುರ್ಗದ ಶ್ರೀನಿವಾಸ ರಾಯರು (ಉರಗಾದ್ರಿವಾಸವಿಠಲ)ರೆನ್ನುವ ಶಿಷ್ಯರಿದ್ದು ಇವರಿಗೆ ಅರವತ್ತೆರಡು ಮಂದಿ ಶಿಷ್ಯರಾದರು. ಇವರ ಪೀಳಿಗೆಗಳು ನಮ್ಮ ಕಾಲದವರೆಗೆ ಬಂದಿವೆ. ದೇವ ರಾಯನದುರ್ಗದ ದಾಸರಿಗೆ ಒಂದು ಸಾವಿರ ಮಂದಿ ಶಿಷ್ಯರಿದ್ದರೆಂದು ಹೇಳುತ್ತಾರೆ. ಇವರಲ್ಲಿ ಎಂ. ಆರ್. ಗೋವಿಂದರಾವ್ (ಗುರುಗೋವಿಂದ ವಿಠಲ) ಎನ್ನುವವರು ಇನ್ನೂ ಇದ್ದಾರೆ; ಹರಿದಾಸರಾಗಿ ಹಲವಾರು ದೇವರನಾಮಗಳನ್ನು ರಚಿಸಿ ಗ್ರಂಥ ಕರ್ತರೂ ಆಗಿದ್ದಾರೆ. ಹೀಗೆಯೇ ರಾಣೇಬೆನ್ನೂರು ಹಯವದನಾಚಾರ್ಯ (ಮಧ್ವಾಂತರ್ಗತವಿಠಲ), ಆರ್. ರಾಮಚಂದ್ರರಾಯರು (ತಂದೆ ವೆಂಕಟೇಶ ವಿಠಲ) ಮೊದಲಾದವರು ನಮ್ಮ ಕಾಲದ ಹರಿದಾಸರೇ.

ಹರಿದಾಸಪಂಥದ ಶಕ್ತಿಯೂ ಆ ಸಾಹಿತ್ಯದ ಸಂಪತ್ತೂ ಕಡಮೆಯಾಗುತ್ತಾ ಬಂದಿದೆಯೆನ್ನುವುದರಲ್ಲಿ ಸಂಶಯವಿಲ್ಲ. ವಿಸ್ತಾರದಲ್ಲಿಯೂ ಸಾರ್ಥಕ್ಯದಲ್ಲಿಯೂ ಹರಿದಾಸಸಾಹಿತ್ಯ ಗೋಪಾಲದಾಸರ ಕಾಲದಿಂದ ಇಳಿಮುಖವೇ. ಕಳೆದ ತಲೆಮಾರಿ ನಲ್ಲಿ ಅವರು ಗಳಿಸಿದ್ದ ಜನಪ್ರೀತಿಯೂ ಈಗ ಬಹುಮಟ್ಟಿಗೆ ಮರೆಯಾಗಿದೆ; ಈಗಿನ ಹರಿದಾಸಸಾಹಿತ್ಯದಲ್ಲಿ ಪ್ರತಿಭೆಯಾಗಲಿ ಸ್ವಾರಸ್ಯವಾಗಲಿ ಕಂಡು ಬರದೆ ಪದಗಳು ನೀರಸವಾಗಿವೆ. 'ಹೇಳಿದ್ದೆ ಹೇಳೋ ಕಿಸುಬಾಯಿದಾಸ' ಎನ್ನುವ ಗಾದೆ ಇಂಥ ದಾಸರನ್ನು ನೋಡಿಯೇ ಮಾಡಿದುದೊ ಎನಿಸುತ್ತದೆ. ಲೋಕಾನುಭವವಿದ್ದರೆ

ಆಧ್ಯಾತ್ಮಿಕ ದೃಷ್ಟಿಯಿಲ್ಲ, ಆಧ್ಯಾತ್ಮಿಕದೃಷ್ಟಿಯಿದ್ದರೆ ಲೋಕಾನುಭವವಿಲ್ಲ, ಎರಡೂ ಇದ್ದರೆ ಲೋಕಸಂಗ್ರಹದ ತವಕವಿಲ್ಲ—ಹೀಗಾಗಿ ಈಚಿನ ಹರಿದಾಸಸಾಹಿತ್ಯ ದುರ್ಬಲವಾಗಿದೆ, ನಿರರ್ಥಕವಾಗಿದೆ. ಜನರನ್ನು ಆಕರ್ಷಿಸುವ ಸಾಮಗ್ರಿಯಾಗಲಿ ಸತ್ತ್ವವಾಗಲಿ ಇಲ್ಲಿ ಕಾಣಬರುವುದಿಲ್ಲ. ಯುಗಧರ್ಮವೇ ಇಂಥ ಸಾಹಿತ್ಯಕ್ಕೆ ಪ್ರತಿಕೂಲವೊ ಏನೊ! ಆದರೆ ಒಂದು ಕಾಲದಲ್ಲಿ ನಮ್ಮ ನಾಡಿನ ಹಿರಿಯರು ಬೆಳೆಸಿದ ಹರಿದಾಸ ಪಂಥ, ಅದರಿಂದ ಹೊರಹೊಮ್ಮಿದ ಅಪೂರ್ವಸಾಹಿತ್ಯ, ಎರಡೂ ನಾಡಿಗೆ ಬಲವನ್ನೂ ಕಳೆಯನ್ನೂ ಒದಗಿಸಿದುವು ಎನ್ನುವುದು ಹೆಮ್ಮೆಯನ್ನೂ ಸಮಾಧಾನವನ್ನೂ ತರುವ ನೆನಪು.

## ಸಾರಸ್ವತ ಋಣ

ಬೆಂಗಳೂರಿನ ಸುಬೋಧ ಕುಸುಮಾಂಜಲಿ ಗ್ರಂಥಮಾಲೆಯ ಸುಬೋಧ ರಾಮರಾಯರು ಅತ್ಯಂತ ಪ್ರಯಾಸದಿಂದ ಹರಿದಾಸರ ಕೃತಿಗಳನ್ನೆಲ್ಲ ಸಂಪಾದಿಸಿ, ಸಂಗ್ರಹಿಸಿ 'ಹರಿದಾಸಕೀರ್ತನ ತರಂಗಿಣಿ' ಎನ್ನುವ ಮಾಲೆಯಲ್ಲಿ ಪ್ರಕಟಿಸಿದರು. ಇದು ನಲವತ್ತು—ನಲವತ್ತೈದು ವರ್ಷಗಳ ಹಿಂದೆಯೇ ಆರಂಭವಾದ ಉದ್ಯಮ. ಉಡುಪಿಯ ಪಾವಂಜೆ ಗುರುರಾಯರು ಕೂಡ ಇಂಥವೇ ಪ್ರಯತ್ನವನ್ನು ನಡೆಸಿದರು. ಇದೇ ನಮಗಿರುವ ಮೂಲಸಂಪತ್ತು. ಮುಂದೆ ಲಿಂಗಸುಗೂರಿನ ಗೋರಾಬಾಳ ಹನುಮಂತರಾಯರು ಈ ಸಂಪತ್ತನ್ನು ಹಿಂಗ್ಗಿಸಿದರು. ದಾಸಸಾಹಿತ್ಯದ ಬಗ್ಗೆ ಮೊಟ್ಟ ಮೊದಲಿಗೆ ಸಂಶೋಧನಾತ್ಮಕವಾದ, ಸಮಗ್ರವಾದ ಅಧ್ಯಯನವನ್ನು ನಡೆಸಿದವರು ಧಾರವಾಡದ ರಾಘವೇಂದ್ರಾಚಾರ್ಯ ಪಂಚಮುಖಿಯವರು ; ಅವರ 'ಕರ್ಣಾಟಕ ಹರಿದಾಸಸಾಹಿತ್ಯ' (ಕನ್ನಡ ಸಾಹಿತ್ಯ ಪರಿಷತ್ತು, 1952) ಈ ಅಧ್ಯಯನದ ಫಲ. ಇದಕ್ಕೆ ದೊದಲೇ ಇಂಗ್ಲಿಷಿನಲ್ಲಿ ಎ. ಪಿ, ಕರಮಕರರೂ ನಾರಾಯಣರಾವ್ ಕಲಮದಾನಿಯವರೂ ಕೂಡಿ Mystic Teachings of Haridasas of Karnataka ಎನ್ನುವ ಪುಸ್ತಕವನ್ನು ಪ್ರಕಟಿಸಿದ್ದರು (ಕರ್ನಾಟಕ ವಿದ್ಯಾವರ್ಧಕ ಸಂಘ. ಧಾರವಾಡ 1939). ಅದಕ್ಕೂ ಮೊದಲು ಬೇಲೂರು ಕೇಶವದಾಸರು ಎರಡು ಭಾಗಗಳಲ್ಲಿ 'ಕರ್ಣಾಟಕ ಭಕ್ತವಿಜಯ'ವನ್ನು ರಚಿಸಿ ಅದರಲ್ಲಿ ಪ್ರಮುಖ ಹರಿದಾಸರ ಜೀವನ ಕಥೆಗಳನ್ನೂ ಕೃತಿವಿಮರ್ಶೆಯನ್ನೂ ಕೊಟ್ಟಿದ್ದರು (1932). ಇದು ಸ್ವಾರಸ್ಯವಾದ

ನಿರೂಪಣೆಯಾದರೂ ಇತಿಹಾಸ ಪ್ರಜ್ಞೆ ಅಷ್ಟಕ್ಕಷ್ಟೇ ಎನಿಸುತ್ತದೆ, ಆದರೆ ಮುಂದಿನ ಅಧ್ಯಯನಕ್ಕೆ ಬೇಕಾದ ಸಾಮಗ್ರಿಯನ್ನು ಈ ಪ್ರಕಟಣೆ ಸಿದ್ಧಮಾಡಿತು. 1965ರಲ್ಲಿ ನಂಜನಗೂಡಿನ ಪರಿಮಳ ಪ್ರಕಾಶನಮಂದಿರದವರು ಎಚ್. ಕೆ. ವೇದವ್ಯಾಸಾಚಾರ್ಯರ 'ಕರ್ಣಾಟಕ ಹರಿದಾಸರು' ಎನ್ನುವ ವಿಮರ್ಶಾತ್ಮಕವಾದ ಅಧ್ಯಯನವನ್ನು ಅಚ್ಚುಮಾಡಿಸಿದರು.

ಇಷ್ಟು ಹರಿದಾಸಸಾಹಿತ್ಯದ ಸಮಗ್ರ ಪರಿಶೀಲನೆಯಾದರೆ ಕಟ್ಟಿಶೇಷಾಚಾರ್ಯರು ಬರೆದ 'ಕವಿಕನಕದಾಸರು' (ಬೆಳಗಾವಿ, 1938), ಅನಂತರಾವ್ ಪಾಟೀಲರು ಸಿದ್ಧಪಡಿಸಿದ 'ಪ್ರಸನ್ನವೆಂಕಟದಾಸರು ಮತ್ತು ಅವರ ಕೃತಿಗಳು' (ಧಾರವಾಡದ ಮಿಂಚಿನ ಬಳ್ಳಿ ಕಾರ್ಯಾಲಯ, 1956), ಕೆ. ಎಂ. ಕೃಷ್ಣರಾಯರ 'ಜಗನ್ನಾಥದಾಸರು' (ಮೈಸೂರಿನ ಉಷಾಸಾಹಿತ್ಯಮಾಲೆ 1956), ಎಸ್.ಕೆ.ರಾಮಚಂದ್ರರಾಯರ 'ಪುರಂದರದಾಸರು' (ಬೆಂಗಳೂರು ಪುರಂದರದಾಸರ ಚತುರ್ಥ ಶತಮಾನೋತ್ಸವ ಸಮಿತಿ, 1964), ಮೊದಲಾದುವು ಆಯಾ ಹರಿದಾಸರನ್ನು ಕುರಿತು ನಡೆಸಿದ ಅಧ್ಯಯನಗಳು. ಮುಳಬಾಗಲು ಸತ್ಯನಿಧಿತೀರ್ಥರು ಶ್ರೀಪಾದರಾಜರನ್ನು ಕುರಿತು ಸಣ್ಣದೊಂದು ಪುಸ್ತಕವೊಂದನ್ನು ಬರೆದಿದ್ದಾರೆ (1965); ಶ್ರೀನಿವಾಸ ಹರಿದಾಸಾನುದಾಸರು ಹೀಗೆಯೇ ವ್ಯಾಸರಾಯರ ಚರಿತ್ರೆಯನ್ನು ರಚಿಸಿ ಅವರ ದಾಸಸಾಹಿತ್ಯದ ವಿಚಾರವಾಗಿ ಬರೆದಿದ್ದಾರೆ (1950). ಹರಿದಾಸರತ್ನ ಗೋಪಾಲದಾಸರು 'ಹರಿದಾಸಭಾರತೀ' ಎನ್ನುವ ಮಾಸಪತ್ರಿಕೆಯನ್ನು ಬೆಂಗಳೂರಿನಿಂದ ನಡೆಸುತ್ತಿದ್ದು ಅದರಲ್ಲಿ ದಾಸಸಾಹಿತ್ಯವನ್ನು ಪ್ರಕಟಿಸಿದರು (1950 ರಿಂದ). 'ಹರಿದಾಸಗೋಕುಲ ಗ್ರಂಥಮಾಲೆ'ಯು ಮೈಸೂರಿನಿಂದ ಹರಿಕಥಾಮೃತ ಸಾರವೇ ಮೊದಲಾದ ಗ್ರಂಥಗಳನ್ನು ಹೊರತಂದಿತು.

ಹರಿದಾಸಸಾಹಿತ್ಯಕ್ಕೂ ಸಂಗೀತಕ್ಕೂ ಇರುವ ಸಂಬಂಧವನ್ನು ಕುರಿತು ಹಲಗೂರು ಕೃಷ್ಣಾಚಾರ್ಯರು ('ಕರ್ಣಾಟಕ ಸಂಗೀತವೂ ದಾಸಕೂಟವೂ') ಮೊಟ್ಟ ಮೊದಲು ಅಧ್ಯಯನ ನಡೆಸಿದರು. ಅನಂತರ ಮದ್ರಾಸಿನ ಟಿ. ವಿ. ಸುಬ್ಬರಾಯರೂ ಮತ್ತಿತರೂ ಇದನ್ನು ಮುಂದರಿಸಿದರು. ದಾಸರ ಕೃತಿಗಳಿಗೆ ಸ್ವರಪ್ರಸ್ತಾರ ಹಾಕುವ ಕೆಲಸವನ್ನು ವೈಣಿಕವಿದ್ವಾನ್ ಎಲ್. ರಾಜಾರಾಯರು ಕೈಗೊಂಡರು; ಕನ್ನಡ ಸಾಹಿತ್ಯ ಪರಿಷತ್ತು ಇವರ ಸಂಕಲನವನ್ನು ಪ್ರಕಟಿಸಿತು. ಇದೇ ಕೆಲಸವನ್ನು ಆಸ್ಥಾನ ವಿದ್ವಾನ್ ಎನ್. ಚನ್ನಕೇಶವಯ್ಯನವರು ತಮ್ಮ 'ಕೀರ್ತನಸುಧಾಸಾಗರ' ದಲ್ಲಿ ನಡೆಸಿದರು. (1967); ಇದರಲ್ಲಿ ನರಹರಿತೀರ್ಥರು, ಶ್ರೀಪಾದರಾಯರು, ವ್ಯಾಸತೀರ್ಥರು, ವಾದಿರಾಜರು, ವೈಕುಂಠದಾಸರು ಮತ್ತು ಕನಕದಾಸರು ಇವರ

ಕೆಲವು ಕೃತಿಗಳನ್ನು (ಒಟ್ಟು 54) ಆಯ್ದು ಅವಕ್ಕೆ ಪ್ರಾಚೀನ ಪದ್ಧತಿಯಂತೆ ಸ್ವರಪ್ರಸ್ತಾರ ಹಾಕಿದ್ದಾರೆ. ಇದು ಪ್ರಥಮ ತರಂಗವಷ್ಟೆ; ಉಳಿದ ತರಂಗಗಳು ಹೊರಬರುವುವೆಂದು ನಿರೀಕ್ಷೆಯಿದೆ. ದಾಸಸಾಹಿತ್ಯದ ಸಂಗೀತ ಸಂಯೋಜನಗೆ ಇದು ಮೈಲಿಗಲ್ಲಾಗುವ ಪ್ರಯತ್ನ.

ದಾಸ ಸಾಹಿತ್ಯ

ಭಾಗ : ಮೂರು

# ದಾಸ ಸಾಹಿತ್ಯದ ಕೊಡುಗೆ

ಪ್ರೊ. ಕೆ. ಸಂಪದ್ಗಿರಿರಾವ್

# ದಾಸ ಸಾಹಿತ್ಯದ ಕೊಡುಗೆ

## ವ್ಯಾಸಕೂಟ — ದಾಸಕೂಟ

'ವ್ಯಾಸಕೂಟ' ಮತ್ತು 'ದಾಸಕೂಟ'ಗಳು ವ್ಯಾಸತೀರ್ಥರ ಹಾಗೂ ಪುರಂದರ ದಾಸರ ಕಾಲದಲ್ಲಿ ರೂಪುಗೊಂಡುವೆಂದು ಹೇಳಬಹುದು. ಅದು ವಿಜಯನಗರದ ರಾಜ್ಯದ ಉಚ್ಛ್ರಾಯಕಾಲ. ಶ್ರೀಕೃಷ್ಣದೇವರಾಯನ ಆಳ್ವಿಕೆಯ ಕಾಲ. ಹಿಂದು ಸಂಸ್ಕೃತಿಯ ಪುನರುದ್ಧಾರಕ್ಕೆ ಹೊಸ ಹುರುಪಿನಿಂದ ಪ್ರಯತ್ನಗಳು ನಡೆಯುತ್ತಿದ್ದವು. ಸಾಯಣಾಚಾರ್ಯರು ವೇದ ಭಾಷ್ಯಗಳನ್ನು ರಚಿಸಿದ್ದರು. ಸಂಸ್ಕೃತದಲ್ಲಿರುವ ಅನೇಕ ಶಾಸ್ತ್ರಗಳ ವ್ಯಾಸಂಗಕ್ಕೆ ಉತ್ತೇಜನವಿತ್ತು ಸಂಗೀತ, ನೃತ್ಯ, ವಾಸ್ತುಶಿಲ್ಪ ಮುಂತಾದ ಕಲೆಗಳ ಅಭ್ಯಾಸ ರಾಜಾಶ್ರಯವನ್ನು ಪಡೆದು ಅಭಿವೃದ್ಧಿಯಾಗುತ್ತಿದ್ದವು. ಸಂಸ್ಕೃತ ದಲ್ಲಿದ್ದ ವಿಷಯಗಳನ್ನು ಜನಸಾಮಾನ್ಯರಿಗೆ ಒದಗಿಸಬೇಕೆಂಬ ಹಂಬಲವೂ ಇತ್ತು. ಇದೇ 'ದಾಸಕೂಟ'ದ ಪ್ರೇರಣೆಯಾಯಿತು.

## ಜನತಾಶಿಕ್ಷಣ

ಇಂತಹ ಪ್ರೇರಣೆ ನಮ್ಮ ದೇಶದಲ್ಲಿ ಹೊಸದೇನೂ ಅಲ್ಲ. ಪ್ರಾಚೀನ ಕಾಲ ದಿಂದಲೂ ಜನತಾ ಶಿಕ್ಷಣಕ್ಕೆ ಗಮನ ಕೊಡಲಾಗುತ್ತಿತ್ತು. ಬೌದ್ಧ ಮತ್ತು ಜೈನ ಧರ್ಮಗಳು ಎಲ್ಲೆಡೆಯಲ್ಲಿ ಪ್ರಚಾರಗೊಳ್ಳಲು ಸಂಸ್ಕೃತಕ್ಕೆ ಬದಲಾಗಿ ಜನಸಾಮಾನ್ಯರು ಅರ್ಥ ಮಾಡಿಕೊಳ್ಳಬೇಕೆಂದು ಪಾಲಿ, ಪ್ರಾಕೃತ ಮುಂತಾದ ದೇಶೀಯ ಭಾಷೆಗಳನ್ನು ಪಯೋಗಿಸುತ್ತಿದ್ದರು. ರಾಮಾಯಣ, ಮಹಾಭಾರತ, ಪುರಾಣಗಳು ವೈದಿಕ ಧರ್ಮದ ತತ್ತ್ವಗಳನ್ನು ನಿದರ್ಶನಗಳ ಮೂಲಕ ವಿಶದಪಡಿಸುವ ಗ್ರಂಥಗಳಾದುದ ರಿಂದ, ಪೌರಾಣಿಕರು ಅವುಗಳನ್ನು ದೇಶಭಾಷೆಗಳಲ್ಲಿ ಅನುವಾದ ಮಾಡಿ ಜನ ಸಾಮಾನ್ಯರಿಗೆ ಮುಟ್ಟಿಸುತ್ತಿದ್ದರು. ದಕ್ಷಿಣ ದೇಶದಲ್ಲಿ ಶಿವಭಕ್ತರೂ (ನಾಯನ್ಮಾರು ಗಳು), ವೈಷ್ಣವ ಭಕ್ತರೂ (ಆಳ್ವಾರುಗಳು) ಸಂಸ್ಕೃತಭಾಷೆಯಲ್ಲಿರುವ ತತ್ತ್ವಗಳನ್ನೂ ಸ್ತೋತ್ರಗಳನ್ನೂ ತಮಿಳುಭಾಷೆಯಲ್ಲಿ ಜನರಿಗೆ ಒದಗಿಸಿದರು. ಈ ಬಗೆಯಲ್ಲಿ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಜನರೆಲ್ಲರಿಗೂ ಅವಕಾಶಗಳನ್ನು ಕಲ್ಪಿಸುವ ಪ್ರಯತ್ನಗಳು ಪೂರ್ವಕಾಲದಿಂದಲೂ ನಡೆಯುತ್ತಾ ಬಂದಿವೆ.

## ಭಕ್ತಿ ಪಂಥಗಳು

ಭಾರತ ದೇಶದ ಧಾರ್ಮಿಕ ಜೀವನದ ಇತಿಹಾಸದಲ್ಲಿ (12–13ರಂತೆ) 15-16 ಶತಮಾನಗಳೂ ಭಕ್ತಿಯ ಪ್ರಸಾರದ ಕಾಲವೆಂದು ಹೇಳಬಹುದು. ಮಹಾರಾಷ್ಟ್ರದಲ್ಲಿ ನಾಮದೇವ್ ಮತ್ತು ಏಕನಾಥ, ಗುಜರಾತಿನಲ್ಲಿ ಬಹಳ ಪ್ರಭಾವ ಬೀರಿದ ಆಂಧ್ರ ಪ್ರದೇಶದ ವಲ್ಲಭಾಚಾರ್ಯರೂ ಅವರ ಮಗ ವಿಠಲನಾಥ, ಪಂಜಾಬಿನಲ್ಲಿ ಸಿಖ್ ಮತದ ಪ್ರವರ್ತರೂ ಪರಮ ಭಕ್ತರೂ ಆದ ನಾನಕ, ಉತ್ತರ ಪ್ರದೇಶದಲ್ಲಿ ಬೀರ್ ಮತ್ತು ತುಲಸೀದಾಸ್ ಬಂಗಾಳದಲ್ಲಿ ಶ್ರೀಕೃಷ್ಣಚೈತನ್ಯ – ಇವರೆಲ್ಲರೂ ಈ ಕಾಲದಲ್ಲಿ ಜನ್ಮತಾಳಿ ದೇಶ ಭಾಷೆಗಳಲ್ಲಿ ಹಾಡುಗಳನ್ನು ರಚಿಸಿ, ಭಜನೆ – ಕೀರ್ತನೆಗಳ ಮೂಲಕ ಭಗವದ್ಭಕ್ತಿಯನ್ನು ಪರಿಣಾಮಕಾರಿಯಾಗಿ ಪ್ರಸರಿಸಿದರು. ದೇಶಾದ್ಯಂತ ಧರ್ಮ ಜಾಗೃತಿಯೂ, ಜಾತಿ ಭೇಧಗಳನ್ನು ಮರೆತು, ಒಂದು ಸಂಘಟನೆಯೂ ಉಂಟಾದವು.

ಈ ಪರಿಸ್ಥಿತಿಯಲ್ಲಿ ಕರ್ಣಾಟಕದಲ್ಲಿ ಜನ್ಮತಾಳಿದ ದಾಸಕೂಟದವರ ಕಾರ್ಯ ವೈಶಿಷ್ಟ್ಯಪೂರ್ಣವಾದುದು.

ಪುರಂದರದಾಸರಿಗೆ ಪೂರ್ವದಲ್ಲೇ ಕನ್ನಡದಲ್ಲಿ ದೇವರನಾಮಗಳನ್ನು ರಚಿಸಿ ಕನ್ನಡಭಾಷೆಗೆ ಪ್ರಾಶಸ್ತ್ಯವನ್ನೂ ಕೊಟ್ಟವರಿದ್ದರೆಂದು ಈ ಮುಂಚೆ ತಿಳಿಸಿದೆ. ನರಹರಿ ತೀರ್ಥರು, ಶ್ರೀಪಾದರಾಯರು, ವ್ಯಾಸತೀರ್ಥರು ಸಂಸ್ಕೃತದಲ್ಲಿ ಉದ್ದಾಮ ಪಂಡಿತ ರಾಗಿದ್ದಾಗ್ಯೂ ಕನ್ನಡದಲ್ಲಿ ಕೃತಿಗಳನ್ನು ರಚಿಸಿದರು. ಇದು ಅವರ ಹೃದಯ ವೈಶಾಲ್ಯ ವನ್ನೂ ಲೌಕಿಕಪ್ರಜ್ಞೆಯನ್ನೂ ತೋರಿಸುತ್ತದೆ. ದಾಸಪರಂಪರಗೆ ಶ್ರೀಪಾದ ರಾಯರೇ ಮೊದಲಿಗರೆಂದು ಅವರಿಗೆ ಮನ್ನಣೆ ಕೊಡಲಾಗಿದೆ. ಇವರು ಬೆಂಗಳೂರು ಜಿಲ್ಲೆಯ ಅಬ್ಬೂರಿನಲ್ಲಿ ಹುಟ್ಟಿದವರಾದರೂ ವಿದ್ಯಾಭ್ಯಾಸಕ್ಕೆ ದಕ್ಷಿಣ ದೇಶದ ಶ್ರೀರಂಗದಲ್ಲಿ ಸ್ವರ್ಣತೀರ್ಥರೆಂಬ ಮಧ್ವಮಠಾಧಿಪತಿಗಳ ಆಶ್ರಯವನ್ನು ಪಡೆದರು. ಇಲ್ಲೇ ತಮ್ಮ ಬಾಲ್ಯವನ್ನು ಕಳೆದರು. ಶ್ರೀರಂಗ ಶ್ರೀವೈಷ್ಣವರ (ಶ್ರೀರಾಮಾನುಜ ಮತಾನುಯಾಯಿಗಳ) ಪುಣ್ಯಕ್ಷೇತ್ರ. ಸಂಸ್ಕೃತದೊಂದಿಗೆ ತಮಿಳು ಭಾಷೆಯಲ್ಲಿ ಆಳ್ವಾರರು ರಚಿಸಿದ ಸ್ತೋತ್ರಗಳನ್ನು ಪೂಜಾಕಾಲದಲ್ಲಿಯೂ ಉತ್ಸವಾದಿಗಳಲ್ಲಿಯೂ ವಿಪುಲವಾಗಿ ಬಳಸಲಾಗುತ್ತಿತ್ತು. ಶ್ರೀಪಾದರಾಯರು ಇದರಿಂದ ಪ್ರಭಾವಿತರಾಗಿ ದ್ದಿರಬೇಕು. ಸ್ವರ್ಣತೀರ್ಥರ ತರುವಾಯ ಇವರೇ ಮಠಾಧಿಪತಿಗಳಾದರು. ಮುಳು ಬಾಗಿಲಲ್ಲಿ ನೆಲೆಸಿದರು. ಶಾಸ್ತ್ರೀಯ ಸಂಗೀತಜ್ಞಾನವನ್ನು ಪಡೆದವರಾಗಿದ್ದರು. ಕನ್ನಡ ದಲ್ಲಿ ದೇವರನಾಮಗಳನ್ನೂ ಸುಳಾದಿಗಳನ್ನೂ ರಚಿಸಿದರು. ಆ ಕಾಲಕ್ಕಾಗಲೇ ಪಂಢರಾಪುರದ ಪಾಂಡುರಂಗ ವಿಠಲನು ಕರ್ಣಾಟಕ – ಮಹಾರಾಷ್ಟ್ರ ದೇಶಗಳ ವಿಷ್ಣು ಭಕ್ತರಿಗೆ ಆರಾಧ್ಯದೇವತೆಯಾಗಿದ್ದನು ಮತ್ತು ಶ್ರೀಪಾದರಾಯರಿಗೆ ಶ್ರೀರಂಗದ ರಂಗ

ನಾಥನು ಪೂಜ್ಯದೇವತೆಯಾಗಿದ್ದರಿಂದ ಅವರು ತಮ್ಮ ಕೃತಿಗಳಿಗೆ 'ರಂಗವಿಠಲ'ನೆಂಬ ಅಂಕಿತವನ್ನಿಟ್ಟುಕೊಂಡರು. ಇದನ್ನು ಯಾವ ಗುರುಗಳೂ ಕೊಟ್ಟಂತೆ ಕಾಣುವುದಿಲ್ಲ.

ವ್ಯಾಸತೀರ್ಥರು ಬಾಲ್ಯದಲ್ಲಿಯೇ ಸಂನ್ಯಾಸ ಸ್ವೀಕರಿಸಿ ಶಾಸ್ತ್ರಾಧ್ಯಯನಕ್ಕೆ ಶ್ರೀಪಾದರಾಯರ ಬಳಿಗೆ ಹೋಗಿ ಹನ್ನೆರಡುವರ್ಷ ಶಿಷ್ಯವೃತ್ತಿ ಮಾಡಿದರು. ತಮ್ಮ ಗುರುಗಳಂತೆ ಅವರೂ ಕನ್ನಡದಲ್ಲಿ ಕೃತಿಗಳನ್ನು ರಚಿಸಿದರು. ಅವರೂ ಸಂಗೀತದಲ್ಲಿ ಪ್ರಾವೀಣ್ಯವನ್ನು ಪಡೆದಿರಬೇಕು, ಅವರ ಕೀರ್ತನೆಗಳಲ್ಲಿರುವ ಲಯ - ಬಂಧ ಇದಕ್ಕೆ ಸಾಕ್ಷಿಯಾಗಿದೆ. ವ್ಯಾಸತೀರ್ಥರು ಶಾಸ್ತ್ರಗಳಲ್ಲಿ ಪ್ರಕಾಂಡ ಪಂಡಿತರು. ಅಷ್ಟೇ ಅಲ್ಲ ಪರಮಭಕ್ತರು : ಅನುಭಾವಿಗಳು. ಪೂಜಾ ಕಾಲದಲ್ಲಿ ತದೇಕಚಿತ್ತರಾಗಿ ತಾವು ಪೂಜಿಸುತ್ತಿದ್ದ ಮೂರ್ತಿಯೊಂದಿಗೆ ಮಾತಾಡುತ್ತಿದ್ದರೆಂದೂ, ಭಕ್ತಿಯ ಆವೇಶದಲ್ಲಿ ಹಾಡುತ್ತಿದ್ದರೆಂದೂ, ನೃತ್ಯ ಮಾಡುತ್ತಿದ್ದರೆಂದೂ ಎರಡು ಸಾಲಿಗ್ರಾಮಗಳನ್ನು ಕೈಯಲ್ಲೆತ್ತಿಕೊಂಡು ತಾಳ ಹಾಕುತ್ತಿದ್ದರೆಂದೂ ಪ್ರತೀತಿ ಇದೆ. ತಮ್ಮ ಪೂಜಾಕಾಲದಲ್ಲಿ ಕನ್ನಡ ದೇವರನಾಮಗಳನ್ನು ಹಾಡಿಸುವ ಪದ್ಧತಿಯನ್ನು ಶ್ರೀಪಾದರಾಯರಂತೆಯೇ ತಮ್ಮ ಮಠದಲ್ಲಿ ರೂಢಿಗೆ ತಂದರು.

ಶ್ರೀರಾಗದ ಈ ಹಾಡು :

ಕಣ್ಣಿಗೆ ಕಟ್ಟಿದಂತಿದೆ
ಬಣ್ಣದ ಕೊಳಲ ಭಾವಿಸಿ ನೋಡಬಾರದೆ
ಕೂಡಿಹ ಸೋಗೆ ಗೌರಿಯ ಕಡುಸೊಂಪು
ಸೊಗಸುವಡೆದ ಸುಳಿಗುರುಳಿನ ಗುಂಪು
ಆಡುವ ಮುರುಹು ಮಾಗಾಯ್ಗಳ ಪೆಂಪು
ಕೂಡಿ ಕುಣಿವ ಕುಡಿಹುಬ್ಬಿನಲಂಪು

ಒಂದಡಿ ನೆಲದೊಳು ನಿಂದಿಹ ನಿಲುವು . . .
ಮತ್ತೊಂದಡಿ ಸಾರ್ಚಿಪ ಬಲು ಗೆಲುವು
ಮುಂದೆ ಪಶುಗಳ ಮನ್ನಿಪ ನಿಲುವು
ತಂದೆ ಶ್ರೀಕೃಷ್ಣನಂದಿಗೆ ಪಾಡದೊಲವು

ವ್ಯಾಸತೀರ್ಥರ ಶ್ರೀಕೃಷ್ಣ ಭಕ್ತಿಗೂ, ಕಲ್ಪನಾಶಕ್ತಿಗೂ ತಿಳಿಗನ್ನಡ ಶಬ್ದಪ್ರಯೋಗ ಇವು ನಿದರ್ಶನಗಳು. 'ಕೃಷ್ಣ' ಅಥವಾ 'ಶ್ರೀಕೃಷ್ಣ' — ಅವರ ಅಂಕಿತ ; ಉಪಾಸನಾ ಮೂರ್ತಿಯ ಹೆಸರನ್ನೇ ಇಟ್ಟುಕೊಂಡರು. ಇದನ್ನು ಗುರುಗಳಿಂದ ಪಡೆದುದಕ್ಕೆ ಯಾವ ಪ್ರಸ್ತಾಪವೂ ಇಲ್ಲ.

## ದಾಸ ಕೂಟದ ವ್ಯವಸ್ಥೆ

ಹಂಪಿಯಲ್ಲಿ ಪುರಂದರದಾಸರು ವ್ಯಾಸತೀರ್ಥರ ಬಳಿ ಬಂದು ಅವರ ಅನುಗ್ರಹಕ್ಕೆ ಪಾತ್ರರಾದ ಮೇಲೆ ದಾಸಕೂಟದ ಕಲ್ಪನೆ ರೂಪ ತಾಳಿರಬೇಕೆಂದು ತೋರುತ್ತದೆ. ಪುರಂದರದಾಸರು ಗುರುಗಳ ಅಚ್ಚುಮೆಚ್ಚಿನ ಶಿಷ್ಯರಾದರು. ಗುರುಗಳಿಗೆ ಒಂದು ನಿಧಿಯೇ ದೊರೆತಂತಾಯಿತು. ಪುರಂದರದಾಸರದು ಅಸಾಧಾರಣ ವ್ಯಕ್ತಿತ್ವ ; ಅವರು ವೈರಾಗ್ಯಶಿರೋಮಣಿ, ಪರಮಭಕ್ತ ಮತ್ತು ಜ್ಞಾನಿ - ಮತ್ತು ಎಲ್ಲಕ್ಕೂ ಮಿಗಿಲಾಗಿ ಸಂಗೀತ ಶಾಸ್ತ್ರ ಸಂಪನ್ನ ಮತ್ತು ಕೆಚ್ಚೆದೆಯ ಭಕ್ತಿ ಪ್ರಚಾರಕ. ಗುರುಗಳಿಗೆ ಇವರೇ ಆದರ್ಶದಾಸರಾದರು. ಅವರೊಂದಿಗೆ ಸಹಕರಿಸಿ ದಾಸಕೂಟದ ವ್ಯವಸ್ಥೆಯನ್ನು ಮಾಡಿದರು. ವ್ಯಾಸತೀರ್ಥರೇ ಅಕಾಲದ ವ್ಯಾಸಕೂಟಕ್ಕೆ – ಅಂದರೆ ಶಾಸ್ತ್ರಪಾಂಡಿತ್ಯವಿದ್ದ ವಿದ್ವಾಂಸರಿಗೆ ನಾಯಕರಾಗಿದ್ದರು. ಈ ಮೊದಲೇ ಕನ್ನಡ ಕೃತಿಗಳನ್ನು ರಚಿಸಿ ಹಾಡಿದವರಿದ್ದರೂ ವ್ಯವಸ್ಥಿತವಾದ ರೀತಿಯಲ್ಲಿ 'ದಾಸಕೂಟ' ಇರಲಿಲ್ಲವೆಂದು ಹೇಳಬಹುದು.

ಹೀಗೆ ವ್ಯವಸ್ಥೆಯಾದ ಮೇಲೆ ದಾಸಕೂಟಕ್ಕೆ ಸೇರುವವರಲ್ಲಿ ಕೆಲವು ವಿಶಿಷ್ಟ ಯೋಗ್ಯತೆಯನ್ನು ನಿರೀಕ್ಷಿಸಲಾಯಿತು. ಅವರಲ್ಲಿ ಸಾಕಷ್ಟು ಸಂಗೀತಜ್ಞಾನವಿರಬೇಕು. ಸಾಕಷ್ಟುಮಟ್ಟಿಗೆ ಇತಿಹಾಸ, ಪುರಾಣಗಳ ಜ್ಞಾನ ಅವುಗಳಲ್ಲಿ ಶ್ರದ್ಧೆ, ಭಕ್ತಿಭಾವ, ವೈರಾಗ್ಯ, ನಿತ್ಯತೃಪ್ತಿ – ಈ ಅರ್ಹತೆಗಳನ್ನು ಪಡೆದಿರಬೇಕು. ತಕ್ಕಮಟ್ಟಿಗೆ ದೇಹದಾರ್ಢ್ಯವೂ ಅವಶ್ಯಕ. ಇಂತಹವರು ಯೋಗ್ಯ ಗುರುವನ್ನು ಆಶ್ರಯಿಸಿ, ಪ್ರಾಯಶಃ ಅವರ ಶುಶ್ರೂಷೆಮಾಡಿ. ಅವರ ಮನವನ್ನೊಲಿಸಬೇಕು. ದಾಸದೀಕ್ಷೆಯನ್ನು ಪಡೆಯುವುದಕ್ಕೆ ಮೊದಲು ಕೆಲವು ಪ್ರತಿಜ್ಞೆಗಳನ್ನು ಕೈಗೊಳ್ಳಬೇಕಾಗಿತ್ತು. ಇದೇ ಅವರ ಶೀಲದ ಪರೀಕ್ಷೆ; 'ಸಾಲ ಮಾಡೆನು' 'ಸಾಲದು ಎನೆನು' 'ನಾಳೆಗಿಡೆನು' ಇವು ಮಹತ್ವಪೂರ್ಣವಾದ ಪ್ರತಿಜ್ಞೆಗಳು. ದಾಸಕೂಟಕ್ಕೆ ಸೇರಲು ಬಯಸುವರು ಸಾಮಾನ್ಯವಾಗಿ ಗೃಹಸ್ಥರೇ. ಇಂತಹವರಿಗೆ ಜೀವನದ ನಿರ್ವಹಣೆಯಲ್ಲಿ ಪದಾರ್ಥಗಳ ಅಭಾವ ಉಂಟಾಗುವುದು ಸರ್ವಸಾಮಾನ್ಯ. ಆದರೆ ದಾಸಕೂಟದವರು ಇತರ ಸಂಸಾರಿಗಳಂತೆ ಸಾಲ ಮಾಡಬಾರದು. ಇದರಿಂದ ಒಂದು ಸಂಯಮ ಮತ್ತು ತಾಪಸ ಮನೋವೃತ್ತಿ ದಾಸನಲ್ಲಿ ಬೆಳೆಯುತ್ತದೆ. ಇದೇ ರೀತಿ 'ಸಾಲದು ಎನನು' ಎನ್ನುವ ಪ್ರತಿಜ್ಞೆಯಿಂದ ದಾಸನಲ್ಲಿ ನಿತ್ಯತೃಪ್ತಿಯೂ ಯದೃಚ್ಛಾಲಾಭ ಸಂತಷ್ಟಿಯೂ ಬೆಳೆಯುತ್ತದೆ. ದಾಸನು ಮಧುಕರಿಗೆ (ಭಿಕ್ಷೆಗೆ) ಹೊರಟಾಗ ಎಲ್ಲೆಡೆಯಲ್ಲಿಯೂ ಎಲ್ಲಕಾಲದಲ್ಲಿಯೂ ಏಕರೀತಿಯ ಆದರ ಸಿಗುವ ನಿರೀಕ್ಷೆ ಮಾಡಬಾರದು. ತಮ್ಮ ಸೇವೆಯಾದ ಭಗವನ್ನಾಮ ಸಂಕೀರ್ತನೆಯನ್ನೂ, ಭಜನೆಯನ್ನೂ ದಾಸರು ಮಾಡುತ್ತ ಹೋಗಬೇಕೆ ಹೊರತು,

ಯೋಗ್ಯ ಪುರಸ್ಕಾರ ಸಿಗಲಿಲ್ಲವೆಂದು ಮನೋವಿಕಾರ ತಾಳಬಾರದು. "ಹರಿ ಚಿತ್ತ – ಒಂದು ಕಡೆ ಪುರಸ್ಕಾರವಿಲ್ಲದಿದ್ದರೆ ಮತ್ತೊಂದು ಕಡೆ ಪುರಸ್ಕಾರ ಸಿಗುತ್ತದೆ" ಎಂಬ ದೃಢ ಚಿತ್ತದಿಂದ ತನ್ನ ವೃತ್ತಿಯನ್ನು ನಡೆಸುತ್ತ ಹೋಗಬೇಕು. ಸಾಮಾನ್ಯವಾಗಿ ದಾಸರು ಮನೆಯ ಬಾಗಿಲ ಬಳಿ ಬಂದು ಭಿಕ್ಷೆ ಬೇಡುವ ಪದ್ಧತಿ ಇರಲಿಲ್ಲ. ಗಾನ ನರ್ತನಗಳನ್ನು ಮಾಡುತ್ತ ನಡುರಸ್ತೆಯಲ್ಲಿ ಹೋಗುವುದೇ ಅವರ ರೂಢಿ. ಅವರ ಬರುವಿಕೆಯೇ ಕಣ್ಣು ಕಿವಿಗಳಿಗೆ ಹಬ್ಬವೆಂದು ಸಾಮಾನ್ಯವಾಗಿ ಜನ ಭಾವಿಸುತ್ತಿದ್ದರು. ಮನೆಯಿಂದ ಗೃಹಿಣಿಯರೂ, ಇತರರೂ ಬಂದು ತಮ್ಮ ಕಾಣಿಕೆಯನ್ನು, ಕೊನೆಯಪಕ್ಷ ಒಂದುಹಿಡಿ ಅಕ್ಕಿಯನ್ನು, ನೀಡಿ ದಾಸರ ಆಶೀರ್ವಾದ ಪಡೆಯುತ್ತಿದ್ದರು. ಕೊನೆಯ ಪ್ರತಿಜ್ಞೆಯಾದ 'ನಾಳೆಗಿಡೆನು' ಅವರಲ್ಲಿ ಅಸಂಗ್ರಹ ಬುದ್ಧಿಯನ್ನು ಬೆಳೆಸುತ್ತಿತ್ತು. ಭಗವಂತನ ದಾಸರಾದುದರಿಂದ ಅವರ ಯೋಗಕ್ಷೇಮವನ್ನು ಭಗವಂತನೇ ನೋಡಿ ಕೊಳ್ಳುವನೆಂಬ ಭರವಸೆ ಮೂಡಬೇಕು. ಜನರ ಪ್ರೀತ್ಯಾದರಗಳನ್ನು ಗಳಿಸಿದ ಮೇಲೆ ಅವರಿಗೆ ಏತರ ಕೊರತೆ ಅಲ್ಲದೆ ಹಿಂದಿನಕಾಲದಲ್ಲಿ ಸಾತ್ವಿಕವೂ ಸರಳವೂ ಆದ ಜೀವನ ವನ್ನು ನಡೆಸುತ್ತಿದ್ದ ದಾಸರಿಗೆ ಅನ್ನವಸ್ತ್ರವಸತಿಗಳಿಗಿಂತಲೂ ಮಿಗಿಲಾಗಿ ಯಾವ ಭೋಗವೂ ಬೇಕಾಗಿರಲಿಲ್ಲ. ಅನಾಯಾಸವಾಗಿ ಈ ಆವಶ್ಯಕತೆಗಳನ್ನು ಜನರೇ ಅವರಿಗೆ ಪೂರೈಸುತ್ತಿದ್ದರು.

ಈ ಪ್ರತಿಜ್ಞೆಗಳನ್ನು ಪಾಲಿಸುವ ಭರವಸೆಯನ್ನು ಕೊಟ್ಟ ಮೇಲೆ ಗುರುಗಳು ಇವರಿಗೆ ಒಂದು ಅಂಕಿತವನ್ನು ಅನುಗ್ರಹಿಸುವರು. ಇಲ್ಲಿಗೆ ದಾಸನು ದೀಕ್ಷೆಯನ್ನು ವಹಿಸಿದಂತಾಗುವುದು. ಈ ದೀಕ್ಷೆಯನ್ನು ಪಡೆಯುವುದು ಕಷ್ಟವೆಂದು ಪುರಂದರ ದಾಸರೇ ಒಂದು ಪದದಲ್ಲಿ ಹೇಳಿದ್ದಾರೆ.

'ವನಜ ಭವಾಂಡದೊಳು ಹರಿದಾಸತ್ವದೀಕ್ಷೆ
ಬಲುಕಷ್ಟ ಕಷ್ಟವೆಂದು ಕಾಣೋ
ಮನುಜಾಧಮಗೆ ಇದು ಸುಲಭವಲ್ಲನೋ ಪ್ರಾಣಿ'

ಎಂದಿದ್ದಾರೆ. ವಿಜಯದಾಸರೂ ಅಂಕಿತಕ್ಕೆ ಬಹಳ ಪ್ರಾಶಸ್ತ್ಯ ಕೊಟ್ಟಿದ್ದಾರೆ. 'ಮನುಜಂಗಂಕಿತವು ಶಾಂತಿಯು ಇಲ್ಲದಲೆ ಅನುವಾಗಿ ಪೇಳ್ದ ತತ್ವಗಳು ವ್ಯರ್ಥ ಕಾಣೊ' ಎಂದು ಹೇಳಿದ್ದಾರೆ.

ಈ ರೀತಿಯ ದೀಕ್ಷೆಯನ್ನು ಕೈಗೊಂಡ ದಾಸರು ಭಿಕ್ಷೆಗೆ ಹೊರಡುವುದಕ್ಕೆ

ಮುನ್ನ ಒಂದು ವಿಶಿಷ್ಟವಾದ ಪೋಷಾಕನ್ನು ಧರಿಸುತ್ತಿದ್ದರು.* ದಾಸಕೂಟಕ್ಕೆ ಸೇರಿದನೇಕರು ಇದೊಂದನ್ನೇ ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡು ತಮ್ಮ ಜೀವನವನ್ನು ಸಾಗಿಸಿದರು. ಆದರೆ ಕೆಲವರು ದೀಕ್ಷೆಯನ್ನು ವಹಿಸಿ ಜೀವನೋಪಾಯಕ್ಕೆ ಬೇರೆ ವೃತ್ತಿಗಳಿದ್ದದ್ದರಿಂದ, ಪ್ರತಿನಿತ್ಯ ಕ್ಲುಪ್ತಕಾಲದಲ್ಲಿ ದೇವರನಾಮಗಳನ್ನು ಹಾಡುತ್ತ ಮಧುಕರಿ ಮಾಡುತ್ತಿದ್ದುದೂ ಉಂಟು.

ತಮಗೆ ಅನುಗ್ರಹೀತವಾದ ಅಂಕಿತನಾಮವನ್ನು ಸಾರ್ಥಕಗೊಳಿಸಲು ದಾಸಕೂಟದವರೆಲ್ಲರೂ ಹಾಡುಗಳ ರಚನೆಗೆ ಪ್ರಯತ್ನಿಸಿದರೆನ್ನಬಹುದು. ಶಕ್ತಿಸಾಮರ್ಥ್ಯವಿದ್ದವರು ಸ್ವಂತ ರಚನೆಗಳನ್ನೂ, ಪ್ರಸಿದ್ಧರಾದ ದಾಸರ ರಚನೆಗಳ ಜೊತೆಗೆ ಹಾಡುತ್ತ ಹೋಗಿರಬೇಕು. ಆತ್ಮತೃಪ್ತಿಗಾಗಿ ರಚಿತವಾದ ಇಂತಹ ಅನೇಕ ರಚನೆಗಳು ಪ್ರಕಾಶಕ್ಕೆ ಬರಲಿಲ್ಲ.

ದಾಸಕೂಟದವರನ್ನು ಸಂಗೀತದ ಮೂಲಕ ಸಾಮಾನ್ಯ ಜನರಲ್ಲಿ ಜ್ಞಾನ ಭಕ್ತಿ ವೈರಾಗ್ಯಗಳನ್ನು ಬೋಧಿಸುವ ಒಂದು ಭಗವಂತನ ಸ್ವಯಂಸೇವಕದಳವೆಂದು ಕರೆಯಬಹುದು. ಆದರೆ ಈ ದಳಕ್ಕೆ ಯಾವ ಬಗೆಯ ಕೇಂದ್ರೀಕೃತ ವ್ಯವಸ್ಥೆ ಇರಲಿಲ್ಲ. ಅಧಿಕಾರ ವರ್ಗವಿರಲಿಲ್ಲ. ಪ್ರತಿಯೊಬ್ಬರೂ ಪ್ರೇರಣೆಗನುಸಾರವಾಗಿ, ಶಕ್ತ್ಯುತ್ಸಾಹಗಳಿಗನುಸಾರವಾಗಿ ಜನತಾ ಶಿಕ್ಷಣದ ಪುಣ್ಯಕಾರ್ಯವನ್ನು ಕೈಗೊಂಡರು. ಶ್ರೀ ಪುರಂದರದಾಸರ ಹಾಗೂ ತಮ್ಮ ಕಾಲದಲ್ಲಿದ್ದ ಇತರ ಪ್ರತಿಭಾವಂತರಾದ ದಾಸರ ವ್ಯಕ್ತಿತ್ವವೇ ಸ್ಫೂರ್ತಿಯನ್ನೊದಗಿಸುತ್ತಿತ್ತು.

ಹಿಂದೆ ಹೇಳಿದಂತೆ ವ್ಯಾಸತೀರ್ಥರ ಆಶ್ರಯದಲ್ಲಿ ವ್ಯಾಸಕೂಟವೂ ದಾಸಕೂಟವೂ ಸಮಾನ ರೀತಿಯಲ್ಲಿ ಪೋಷಣೆ ಪಡೆದುವು. ಪುರಂದರದಾಸರ ಕೃತಿಗಳಿಗೆ ಪುರಂದರೋಪನಿಷತ್ತೆಂಬ ಪ್ರಶಸ್ತಿ ದೊರೆಯಿತು. ಗುರುಗಳು ಈ ಕೃತಿಗಳಿಗೆ ಶ್ರೀ ಮಧ್ವಾಚಾರ್ಯರ ಶಾಸ್ತ್ರಗಳಿಗೆ ತೋರಿಸುವಷ್ಟು ಆದರವನ್ನೇ ತೋರಿಸಿದರು. ಪುರಂದರದಾಸರ ಗುಣವನ್ನೂ ವ್ಯಕ್ತಿತ್ವವನ್ನೂ ಮನಸಾರೆ ಪ್ರಶಂಸಿದರು.

ಆ ಕಾಲದಲ್ಲೇ ಬೂಟಾಟಿಕೆ ದಾಸರೂ ಇದ್ದರೆಂದು ತೋರುತ್ತದೆ.

---

* ಶುಭ್ರವಾದ ಪಂಚಕಚ್ಚೆ ಹಾಕಿದ ದೋತ್ರ, ಮೈಮೇಲೆ ಅಂಗವಸ್ತ್ರ, ಕಾವಿಬಣ್ಣದ ಮುಂಡಾಸು, ಅದರ ಕೊನೆಯನ್ನು ಹಿಂದಕ್ಕೆ ಬೆನ್ನನ್ನು ಮುಚ್ಚುವಂತೆ ಇಳಿಯ ಬಿಟ್ಟಿರುವುದು, ಕತ್ತಿನಲ್ಲಿ ತುಳಸಿಮಾಲೆ, ಹೆಗಲಿಗೆ "ಗೋಪಾಳ" ಬುಟ್ಟಿ (ಭಿಕ್ಷಾಪಾತ್ರೆ), ಬಲಗೈಯಲ್ಲಿ ತಂಬೂರಿ, ಎಡಗೈಯಲ್ಲಿ ಚಿಪ್ಳಾತಾಳ, ಕಾಲಿಗೆ ಗೆಜ್ಜೆ– ಇದೇ ದಾಸರ ಸಮವಸ್ತ್ರ. ಕೆಲವರು ಒಬ್ಬರೇ ಹೋಗುವವರು, ಕೆಲವರು ಶಿಷ್ಯ ಸಮೇತ, ಅಥವಾ ದಂಪತಿ ಸಮೇತ ಹೋಗುವುದೂ ಉಂಟು.

ಕ್ರಮಬದ್ಧವಾಗಿ ದಾಸದೀಕ್ಷೆಯನ್ನು ಪಡೆಯುದೆ ಅನೇಕ ಜನ ಈ ವೃತ್ತಿಯನ್ನು ಅವಲಂಬಿಸುತ್ತಿದ್ದವರೂ ಇದ್ದರು. ವೈಷ್ಣವ ಅಥವಾ ವೈಷ್ಣವ ಧರ್ಮಕ್ಕೆ ಸೇರಿದ ಎಲ್ಲ ಪಂಗಡದ ಜನರು ಪಟ್ಟಣಗಳಲ್ಲಿ ಹಳ್ಳಿಗಳಲ್ಲಿ ಭಿಕ್ಷುಕ ವೃತ್ತಿಯನ್ನು ಕೈಗೊಂಡು ದಾಸರ ಪದಗಳನ್ನು ಹಾಡಿ ಇವನ್ನು ಪ್ರಚಾರಮಾಡಿದರು. ಭಕ್ತಿಪಂಥದಲ್ಲಿ ಜಾತಿ–ಕುಲದ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಇಂತಹ ಬಿಡಿ ದಾಸರೂ ತಮ್ಮ ಶಕ್ತ್ಯನುಸಾರ ಜನತಾ ಶಿಕ್ಷಣವನ್ನು ಮಾಡಿದರು. ದಾಸಸಾಹಿತ್ಯದಲ್ಲಿ ಸಂಶೋಧನೆ ನಡೆಸಿರುವವರು ಸುಮಾರು 200 ಅಂಕಿತವನ್ನು ಪಡೆದ ದಾಸರಿದ್ದರೆಂದು ಪಟ್ಟಿ ಮಾಡಿದ್ದಾರೆ. ಆದರೆ ಇದೇ ರೀತಿಯ ಕಾರ್ಯವನ್ನು ಮಾಡಿದ ಒಟ್ಟಿನಲ್ಲಿ ದಾಸರ ಸಂಖ್ಯೆ ಅಸಂಖ್ಯಾತವೆಂದು ನಾವು ನೆನಪಿನಲ್ಲಿಡಬೇಕು. ಇವರನೇಕರಿಗೆ ಪ್ರತಿಭಾವಂತರಾದ ಹರಿದಾಸರ ದೇವರನಾಮಗಳೇ ಮುಖ್ಯ ಸಾಮಗ್ರಿ— ಪರೋಕ್ಷವಾಗಿ ಇವರೆಲ್ಲರೂ ಅವರ ಶಿಷ್ಯವರ್ಗಕ್ಕೇ ಸೇರಿದವರೆಂದೇ ಹೇಳಬೇಕು. ಧಾರ್ಮಿಕ ಹಾಗೂ ಪಾರಮಾರ್ಥಿಕ ಜೀವನದ ಕಡೆ ಜನರ ಮನಸ್ಸನ್ನು ಎಳೆಯುವುದೇ ಇವರ ಉದ್ದೇಶ.

## ಆಧ್ಯಾತ್ಮಿಕ ಶಿಕ್ಷಣ (ಭಕ್ತಿ ಜ್ಞಾನ ವೈರಾಗ್ಯ)

ಹರಿದಾಸರು ಹಾಡುಗಳ ಮೂಲಕ ಜನತೆಗೆ ಮಾಡಿದ ಧಾರ್ಮಿಕ ಶಿಕ್ಷಣದ ಮುಖ್ಯಾಂಶಗಳನ್ನು ಈಗ ಪ್ರಸ್ತಾಪಿಸಬಹುದು. ಇವರೆಲ್ಲರೂ ವೈಷ್ಣವರು, ಅಂದರೆ ಪರಮಾತ್ಮನನು ವಿಷ್ಣುವೆಂದು ಕರೆದವರು. ವಿಷ್ಣುವೆಂಬ ಪದ ಸರ್ವವ್ಯಾಪಕತ್ವವನ್ನು ಸೂಚಿಸುತ್ತದೆ. ಪರಮಾತ್ಮನು ಎಲ್ಲೆಡೆಯಲ್ಲಿಯೂ ಇದ್ದಾನೆ. ಎಲ್ಲ ಪ್ರಾಣಿಗಳ ಪ್ರಾಣವಾಗಿಯೂ ಅಂತರ್ಯಾಮಿಯಾಗಿಯೂ ಇದ್ದಾನೆ. ಅವನೇ ಸರ್ವಕರ್ತ, ಸರ್ವನಿಯಾಮಕ, ಸರ್ವದಾ ಅವನನ್ನು ನೆನೆಯುತ್ತ ಮನುಷ್ಯನು ತನ್ನ ಕೆಲಸಗಳೆಲ್ಲವನ್ನು ಮಾಡಬೇಕು— ಎಲ್ಲವನ್ನೂ ಅವನಿಗೇ ಸಮರ್ಪಣೆ ಮಾಡಬೇಕು. ವಿಷ್ಣುವಿಗೆ ಎಷ್ಟೋ ಹೆಸರಿಗಳಿವೆ— ಒಂದು ಸಹಸ್ರ ಹೆಸರುಗಳಿರುವ ವಿಷ್ಣು ಸಹಸ್ರನಾಮ ಪ್ರಸಿದ್ಧವಾದ ಪಾರಾಯಣ ಪುಸ್ತಕವೇ ಇದೆ. ಆದರೆ ಇವುಗಳಲ್ಲಿ ಹೆಚ್ಚು ಬಳಕೆಯಲ್ಲಿರುವವೆಂದರೆ, ಹರಿ, ನಾರಾಯಣ,ವಾಸುದೇವ, ಕೇಶವ, ರಾಮ, ಕೃಷ್ಣ, ಗೋವಿಂದ ಗೋಪಾಲ ಇತ್ಯಾದಿ. ಈ ಹೆಸರುಗಳ ಉಚ್ಚಾರಣೆಯೇ ಮನುಷ್ಯನನ್ನ ಪವಿತ್ರನನ್ನಾಗಿ ಮಾಡುವುದು. ಅವನ ಪಾಪಗಳನ್ನು ಪರಿಹರಿಸುವದು. ಭಾಗವತದಲ್ಲಿ ವಿಷ್ಣು ಭಕ್ತಿಯ ವಿಧಾನಗಳನ್ನು ವಿವರಿಸುವ ಶ್ಲೋಕ ವಿದೆ.

ಭಕ್ತಿಸಾಧಕರಿಗೆ— ಕರ್ಣಾಟಕ ಮಾತ್ರವಲ್ಲದೆ ಎಲ್ಲ ಪ್ರಾಂತಗಳಲ್ಲಿಯೂ ಇದೇ ಮುಖ್ಯ ಸೂಚಿ ಆಯಿತು. ಇವುಗಳಲ್ಲಿ 'ಕೀರ್ತನಂ' 'ಸ್ಮರಣಂ', 'ವಂದನಂ'

ಇವುಗಳನುಸಾರವಾಗಿ ಹರಿದಾಸರು ನೂರಾರು ಹಾಡುಗಳನ್ನು ರಚಿಸಿ ಭಗವಂತನ ನಾಮೋಚ್ಚಾರಣೆಯನ್ನೂ, ಸ್ಮರಣೆಯನ್ನೂ, ವಂದನೆಯನ್ನೂ ಮಾಡಿ ಚಿತ್ತಶುದ್ಧಿಯನ್ನು ಮಾಡಿಕೊಳ್ಳಬೇಕೆಂದು ಕರೆಯಿತ್ತರು. 'ಹರಿ ಭಜನೆ ಮಾಡೊ ನಿರಂತರ' 'ಕಲಿಯುಗದಲಿ ಹರಿನಾಮವ ನೆನೆದರೆ' ಇವೇ ಮುಂತಾದ ಅಸಂಖ್ಯಾತ ಹಾಡುಗಳು ಜನರಲ್ಲಿ ಭಕ್ತಿಭಾವವನ್ನು ಮೂಡಿಸಲು ಸಹಾಯವಾದುವು.

ಇದು ಕೇವಲ ಕುರುಡ ಭಕ್ತಿಯಾಗಬಾರದೆಂಬ ಉದ್ದೇಶದಿಂದ ಭಗವಂತನ ಮಹಿಮೆಯ ಜ್ಞಾನವನ್ನೂ ಬೋಧಿಸಿದರು. ಮಧ್ವಾಚಾರ್ಯರು ಭಕ್ತಿಗೆ ಕೊಟ್ಟ ವ್ಯಾಖ್ಯೆ ಈ ರೀತಿಯ ಜ್ಞಾನವೂ ಅತ್ಯಾವಶ್ಯವಾಗಿರಬೇಕೆಂದು ಸೂಚಿಸುತ್ತದೆ.

"ಮಾಹಾತ್ಮ್ಯಜ್ಞಾನ ಪೂರ್ವಸ್ತು ಸುದೃಢ ಸರ್ವತೋಧಿಕಃ ಸ್ನೇಹೋ ಭಕ್ತಿರಿತಿ ಪ್ರೋಕ್ತಃ" ಎಂದು ಆಚಾರ್ಯರು ಹೇಳಿದ್ದಾರೆ – ಅಂದರೆ ಭಗವಂತನ ಮಾಹಾತ್ಮ್ಯ ಜ್ಞಾನದಿಂದ ಹುಟ್ಟುವ ಎಲ್ಲಕ್ಕೂ ದೃಢವೂ ಅಧಿಕವೂ ಆದ ಸ್ನೇಹಕ್ಕೆ ಭಕ್ತಿಯೆಂದು ಹೇಳಲಾಗಿದೆ. ಮಧ್ವಾಚಾರ್ಯರು ತತ್ತ್ವತಃ ಸಗುಣೋಪಾಸಕರು. ಹರಿಯೇ ಸರ್ವೋತ್ತಮನು ಸಮಸ್ತ ಕಲ್ಯಾಣಗುಣಗಳಿಂದ ಕೂಡಿದವನು. ನಿರ್ಗುಣ, ನಿರಾಕಾರ, ನಿರಾಮಯನೆಂದು ಹೇಳಲಾದ ಉಪನಿಷದ್ ಬ್ರಹ್ಮದಂತೆ ಅಲ್ಲ. ಶ್ರೀರಾಮಾನುಜಾಚಾರ್ಯರೂ ಇದೇ ನಿಲುವನ್ನು ತಾಳಿದವರು. ಹರಿದಾಸರಲ್ಲಿ ಬಹು ಮಟ್ಟಿಗೆ ಮಧ್ವಾಚಾರ್ಯರ ಅನುಯಾಯಿಗಳೇ ಇದ್ದರು. ಕನಕದಾಸರು, ವೈಕುಂಠ ದಾಸರು, ಪಂಗನಾಮದ ತಿಮ್ಮಣ್ಣದಾಸರು ಮುಂತಾದವರು ಕೆಲವರು ರಾಮಾನುಜ ಪಂಥಕ್ಕೆ ಸೇರಿದವರೂ ಇದ್ದರು – ಆದರೆ ಭಗವಂತನ ಗುಣಗಾನ ಮಾಡುವುದರಲ್ಲಿ ಅಭಿಪ್ರಾಯ ಭೇದ ಇರಲಿಲ್ಲ.

ಈ ಕಲ್ಯಾಣಗುಣಗಳನ್ನು ಬಗೆಬಗೆಯಲ್ಲಿ ಇಂಪಾದ ಹಾಡುಗಳಲ್ಲಿ ರಸವತ್ತಾಗಿ ವರ್ಣಿಸುವುದೇ ತಮ್ಮ ಭಾಗ್ಯವೆಂದು ದಾಸರು ಭಾವಿಸಿದರು. 'ದಾಸ'ರೆಂದು ತಮ್ಮನ್ನು ತಾವೇ ಕರೆದುಕೊಂಡು 'ಪಾದಸೇವನ' 'ದಾಸಭಾವ' 'ಆತ್ಮನಿವೇದನ' ಇವನ್ನು ತಮ್ಮಲ್ಲಿ ಬೆಳೆಸಿಕೊಳ್ಳಲು ಯತ್ನಿಸಿದರು. ಭಗವಂತನೊಬ್ಬನೆ ಸರ್ವಸ್ವತಂತ್ರನು ಜೀವರೆಲ್ಲರೂ ಅಸ್ವತಂತ್ರರು ; ಅವನು ಬಿಂಬವಾದರೆ ಇವರೆಲ್ಲರೂ ಪ್ರತಿಬಿಂಬಗಳಂತೆ ಇವರ ಚಲನವಲನಗಳೆಲ್ಲವೂ ಅವನ ಅಧೀನ – ಇದು ಮಧ್ವಸಿದ್ಧಾಂತದ ಮೂಲ ತತ್ತ್ವಗಳಲ್ಲೊಂದು. 'ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್' ಎಂದು ಭಗವದ್ಗೀತೆಯಲ್ಲಿ ಭಗವಂತನು ಸಾರಿದ್ದಾನೆ (ಅಂದರೆ ನಾನೇ ಗತಿ, ಭರ್ತ, ಪೋಷಕನು, ಸಾಕ್ಷಿ, ವಾಸಸ್ಥಾನ ಎಲ್ಲರಿಗೂ ಆಶ್ರಯ ಮಿತ್ರ). ಇಂತಹವನನ್ನು ಒಲಿಸಿಕೊಳ್ಳುವುದು, ಅವನನ್ನು ಪ್ರೀತಿಗೊಳಿಸುವುದೇ ತಮ್ಮ ಪವಿತ್ರ ಕರ್ತವ್ಯವೆಂದು ದಾಸರು ಭಾವಿಸಿದರು. ಈ ಪುಣ್ಯಕಾರ್ಯದಲ್ಲಿ ಜನರೆಲ್ಲರೂ ಭಾಗಿಗಳಾಗುವಂತೆ

ಅವರಲ್ಲಿ ಪ್ರೇರಣೆ ಉಂಟುಮಾಡಿ ಭಕ್ತಿಭಾವನ್ನು ಮೂಡಿಸಲು ಉದ್ಯುಕ್ತರಾದರು. ದೇವರನ್ನು ಸಂತೋಷ ಪಡಿಸುವುದೇ ನಮ್ಮ ಕರ್ತವ್ಯ. ಇದಕ್ಕೆ ಮಧ್ವಾಚಾರ್ಯರೇ ಹರಿಗೀತೆಯೆಂಬ ತಮ್ಮ 'ದ್ವಾದಶ ಸ್ತೋತ್ರ'ವೆಂಬ ಗೀತ ಪ್ರಬಂಧದಲ್ಲಿ ಒಂದು ಸ್ತೋತ್ರಕ್ಕೆ 'ಪ್ರೀಣಯಾಮೋ ವಾಸುದೇವಂ ದೇವತಾಮಂಡಲಾಖಂಡ ಮಂಡನಂ' (ಅಖಂಡ ದೇವತಾಸಮೂಹಕ್ಕೆ ಭೂಷಣನಾದ ವಾಸುದೇವನನ್ನು (ಕೃಷ್ಣನನ್ನು) ಸಂತೋಷಗೊಳಿಸೋಣ) ಎಂಬ ಪಲ್ಲವಿಯನ್ನು ರಚಿಸಿ ಮಾರ್ಗದರ್ಶಕರಾದರು.

ನಾಮಕೀರ್ತನೆಯನ್ನೂ, ನಾಮದ ಮಹಿಮೆಯನ್ನೂ ತಿಳಿಸುವ ಅನೇಕ ಹಾಡುಗಳ ಜೊತೆಯಲ್ಲಿ ದೇವರ ಅತಿಶಯ ಮಹಿಮೆ, ದುಷ್ಟರ ಶಿಕ್ಷೆ ಶಿಷ್ಟರ ರಕ್ಷಣೆಗಾಗಿ ಅವನು ಮಾಡಿದ ಅವತಾರಗಳು, ಅವನ ಲೀಲೆಗಳು — ಇವು ನೂರಾರು ಸಾವಿರಾರು ದೇವರನಾಮಗಳ ವಿಷಯವಾಗಿದೆ. ಈ ನಿದರ್ಶನಗಳೆಲ್ಲ ನಮ್ಮ ಇತಿಹಾಸ ಪುರಾಣಗಳಿಂದ ಆಯ್ದುವು. ಮಧ್ವಾಚಾರ್ಯರೂ ತಾವು ರಚಿಸಿದ ಗ್ರಂಥಗಳಲ್ಲಿ 'ಮಹಾಭಾರತ ತಾತ್ಪರ್ಯ ನಿರ್ಣಯ' 'ಭಾಗವತತಾತ್ಪರ್ಯ'ಗಳಿಗೆ ವಿಶೇಷ ಸ್ಥಾನ ಉಂಟು. ವೇದೋಪನಿಷತ್ತುಗಳಲ್ಲಿ ಬೋಧಿಸಿರುವ ನಿಗೂಢವಾದ ತತ್ತ್ವಗಳನ್ನು ಅರ್ಥಮಾಡಿಕೊಳ್ಳಲು ಇತಿಹಾಸ - ಪುರಾಣಗಳು, ಕಥೆ ಸಂವಾದಗಳು ಸಾಮಾನ್ಯ ಜನರಿಗೆ ಸಹಾಯಕವಾಗುತ್ತವೆ. ಇದಕ್ಕಾಗಿಯೇ ವೇದದಲ್ಲಿ ವರ್ಣಿಸಿರುವ ಪರಮ ಪುರುಷನು ದಶರಥನ ಮಗನಾಗಿ ಹುಟ್ಟಿದನೆಂದೂ ವೇದತತ್ತ್ವಗಳು ವಾಲ್ಮೀಕಿ ರಚಿಸಿದ ರಾಮಾಯಣದಲ್ಲಿ ಅಂತರ್ಗತವಾಗಿದೆಯೆಂದೂ ಹೇಳಲಾಗಿದೆ :

ವೇದವೇದ್ಯೇ ಪರೇ ಪುಂಸಿ ಜಾತೇ ಧಶರಥಾತ್ಮಜೇ
ವೇದಃ ಪ್ರಾಚೇತಸಾಸೀತ್ ಸಾಕ್ಷಾದ್ರಾಮಾಯಣಾತ್ಮನಾ

ಇದೇ ರೀತಿಯಲ್ಲಿ ಮಹಾಭಾರತವನ್ನು ಪಂಚಮವೇದವೆಂದು ಗೌರವಿಸಲಾಗಿದೆ. ಭಾಗವತಪುರಾಣಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟು ನಮ್ಮ ಜನರ ಆಧ್ಯಾತ್ಮಿಕ ಶಿಕ್ಷಣಕ್ಕೆ ಅದನ್ನು ವಿಶೇಷ ರೀತಿಯಲ್ಲಿ ಬಳಸಿಕೊಂಡವರು ಮಧ್ಯಯುಗದಲ್ಲಿದ್ದ ವೈಷ್ಣವ ಸಂತರು ಮತ್ತು ಭಕ್ತರು. ಪಾಮರ ಜನರಿಗೆ ವೇದೋಕ್ತ ತತ್ತ್ವಗಳನ್ನು ಭೋಧಿಸುವುದು ಇವರೆಲ್ಲರ ಗುರಿಯಾಗಿತ್ತು. ಇದನ್ನು ಪುರಾಣ ಪ್ರವಚನಗಳ ಮೂಲಕವೂ, ಹರಿಕಥೆ (ಕಾಲಕ್ಷೇಪ)ಗಳ ಮೂಲಕವೂ ಎಲ್ಲ ಪ್ರಾಂತಗಳಲ್ಲೂ ನಡೆಸಲಾಗುತ್ತಿತ್ತು. ಅಷ್ಟೇ ಅಲ್ಲದೆ ; ಪ್ರತಿಯೊಂದು ಪ್ರಾಂತದಲ್ಲಿಯೂ ತಮ್ಮದೇ ಆದ ರೀತಿಯಲ್ಲಿ ನಾಟಕಗಳ ಮೂಲಕವೂ ಹಾಡುಗಳ ಮತ್ತು ಅಭಿನಯಗಳ ಮೂಲಕವೂ ಈ ಕಥೆಗಳು ಪಾಮರ ಜನರಿಗೆ, ವಿಶೇಷವಾಗಿ ಮಹಿಳೆಯರಿಗೆ ಪರಿಚಯವಾದುವು. ಕರ್ಣಾಟಕದಲ್ಲಿಯೂ. ಈ ಎಲ್ಲ ಪ್ರಕಾರಗಳಲ್ಲಿ ಜನತಾ ಶಿಕ್ಷಣ ನಡೆಯುತ್ತಿತ್ತು.

ಈ ನಾನಾ ಪ್ರಕಾರಗಳ ಜನತಾಶಿಕ್ಷಣದಲ್ಲಿ ಹರಿದಾಸರು ಒದಗಿಸುತ್ತಿದ್ದುದು ವಿಶಿಷ್ಟಗುಣದ್ದು. ಅದು ಉತ್ತಮ ಸಂಗೀತ – ಸಾಹಿತ್ಯಗಳ ಮೂಲಕ ಜನರನ್ನು ಸುಸಂಸ್ಕೃತರನ್ನಾಗಿ ಮಾಡುವ ಶಿಕ್ಷಣವಾಗಿತ್ತು. ಅವರ ಬುದ್ಧಿಯ ಮತ್ತು ಹೃದಯದ ವಿಕಾಸಕ್ಕೆ ಏಕಕಾಲದಲ್ಲಿ ದಾಸರಪದಗಳು ಉತ್ತೇಜನ ಕೊಡುತ್ತಿದ್ದವು.

ಎಲ್ಲ ದಾಸರೂ ಭಗವಂತನ ಮಹಿಮೆಯನ್ನು ಕೊಂಡಾಡುವುದಕ್ಕೆ ಅವನ ಅವತಾರಗಳ ಕಥೆಯನ್ನೂ, ಇತಿಹಾಸ ಪುರಾಣಗಳಲ್ಲಿ ಹೇಳಿರುವ ಭಕ್ತರ ಕಥೆಗಳನ್ನೂ ವಿಪುಲವಾಗಿ ಉಪಯೋಗಿಸುತ್ತಿದ್ದರು. ಭಗವಂತನ ಮಹಿಮೆಯನ್ನು ತಿಳಿಸಲು ತರ್ಕ ಅಥವಾ ಜಿಜ್ಞಾಸೆಯ ಮಾರ್ಗವನ್ನನುಸರಿಸುವುದಕ್ಕಿಂತಲೂ ಈ ರೀತಿಯ ಕಥಾನಕಗಳೂ, ನಿದರ್ಶನಗಳೂ ಹೆಚ್ಚು ಪರಿಣಾಮಕಾರಿಯಾಗುವವು.

'ನಿಖಿಳರಕ್ಷಕ ನೀನೆ ವಿಶ್ವವ್ಯಾಪಕ' ಎಂಬಂತಹ ಮಾತುಗಳಲ್ಲಿ ಎಲ್ಲ ಕಾಲಗಳಲ್ಲಿಯೂ ಧರ್ಮವನ್ನು ಕಾಪಾಡಿ, ಶಿಷ್ಟರನ್ನು ರಕ್ಷಿಸಲು ಭಗವಂತನು ಅವತಾರವನ್ನೆತ್ತುವನು ಎಂಬುದನ್ನು ದಾಸರಪದಗಳು ಆಗಾಗ್ಗೆ ಪ್ರಸ್ತಾಪಿಸಿ ಜನರು ಧರ್ಮಮಾರ್ಗಾವಲಂಬಿಗಳಾಗಿರಬೇಕೆಂದು ಪ್ರೋತ್ಸಾಹಿಸುತ್ತವೆ. ದಶಾವತಾರದ ಪ್ರಸ್ತಾಪ ಈ ಪದಗಳಲ್ಲಿ ನಾವು ಆಗಾಗ್ಗೆ ಕಾಣುತ್ತೇವೆ. ಈ ಒಕ್ಕಣೆಯ ವೈವಿಧ್ಯ ದಾಸ ಸಾಹಿತ್ಯಾಭಿಮಾನಿಗಳ ಅಧ್ಯಯನಕ್ಕೆ ಒಂದು ಸ್ವಾರಸ್ಯವಾದ ವಿಷಯ. ಉದಾಹರಣೆಗೆ ವ್ಯಾಸತೀರ್ಥರು 'ಶರಣು ಶರಣು' ಎಂಬ ಕೀರ್ತನೆಯಲ್ಲಿ ಸಂಕ್ಷೇಪವಾಗಿ ಒಂದೇ ಚರಣದಲ್ಲಿ–

'ಶರಣು ಮತ್ಸ್ಯನೆ ಕೂರ್ಮಕೋಡ
ನರಹರಿ ವಟು ಭಾರ್ಗವ
ಶರಣು ರಾಘವ ಕೃಷ್ಣ ಬುದ್ಧ
ಶರಣು ಕಲಿ ರೂಪನೆ'

ಎಂದು ದಶಾವತರಗಳನ್ನು ನಿರೂಪಿಸಿದ್ದಾರೆ.

ಪುರಂದರದಾಸರು 'ಅಂಬೆಗಾಲಿಕ್ಕುತ್ತ ಬಂದ ಗೋವಿಂದ' ಎಂಬ ದನ್ಯಾಸಿ ರಾಗದ ಕೀರ್ತನೆಯಲ್ಲಿ ಈ ರೀತಿ ವರ್ಣಿಸಿದ್ದಾರೆ :

ಕಣ್ಣು ಬಿಡುವನು ತನ್ನ ಬೆನ್ನ ತಗ್ಗಿಸುವನು
ಮಣ್ಣು ಕೆದರಿ ಕೋರ ಬಾಯ ತೆರೆದು
ಚಿಣ್ಣ ಭಾರ್ಗವ ಲಕ್ಷ್ಮಣಣ್ಣ ಬೆಣ್ಣೆಯ ಕಳ್ಳ
ಮಾನವ ಬಿಟ್ಟು ಕುದುರೆಯ ವೇರಿದ

ಕನಕದಾಸರು ಸ್ವಲ್ಪ ವಿಸ್ತಾರವಾಗಿ 'ರಾಮ ಗೋವಿಂದಹರೇ' ಎಂಬ ಸೌರಾಷ್ಟ್ರ ರಾಗದ ಕೀರ್ತನೆಯಲ್ಲಿ ಹೀಗೆ ವರ್ಣಿಸಿದ್ದಾರೆ :

'ಮಚ್ಛಾವತಾರದೊಳಾಡಿದವನೆ
ಮಂದರಾಚಲವ ಬೆನ್ನೊಳಾಂತವನೆ
ಅಚ್ಚ ಸೂಕರವಾಗಿ ಬಾಳಿದನೆ
ಮದ ಹೆಚ್ಚಿ ಹಿರಣ್ಯನ ಸೀಳಿದೆನೆ

ಬಲಿಯೊಳು ದಾನವ ಬೇಡಿದನೆ
ಕ್ಷತ್ರಕುಲವ ಬಿಡದೆ ಕ್ಷಯ ಮಾಡಿದನೆ
ಜಲನಿಧಿಗೆ ಬಿಲ್ಲ ಹೂಡಿದನೆ
ಕಾಮುಗೊಲಿದು ಗೊಲ್ಲತಿಯೊಳಾಡಿದನೆ
ಸಾಧಿಸಿ ತ್ರಿಪುರ ಗೆಲಿದನೆ
ಪ್ರತಿವಾದಿಸಿ ಹಯವೇರಿ ನಲಿದವನೆ
ಭೇದಿಸಿ ವಿಶ್ವವ ಗೆಲಿದವನೆ
ಬಾಡದಾದಿಕೇಶವರಾಯನಮಗೊಲಿದವನೆ

ಹೀಗೆ ನೂರಾರು ಬಗೆಯಲ್ಲಿ ಭಗವಂತನ ದಶಾವತಾರದ ವರ್ಣನೆಯನ್ನು ಕೇಳಿ ಜನರಿಗೆ ಬಾಯಿಪಾಠವಾಗಿತ್ತು.

ಅಂತೆಯೇ ದಾಸರು ಇತಿಹಾಸ ಪುರಾಣಗಳಲ್ಲಿನ ಭಕ್ತರ ಕಥೆಗಳನ್ನು ಜನರಿಗೆ ನೆನೆಪು ಮಾಡಿಸುತ್ತಿದ್ದರು. ಪ್ರಹ್ಲಾದ, ಧ್ರುವ, ಅಜಾಮಿಳ, ರುಕ್ಮಾಂಗದ, ಗಜೇಂದ್ರ, ದ್ರೌಪದಿ, ಅಕ್ರೂರ, ಬಲಿ, ವಿದುರ, ವಾಲ್ಮೀಕಿ ಮುಂತಾದವರ ಕಥೆ ಗಳನ್ನು ಪ್ರಸ್ತಾಪಿಸಿ, ಹೇಗೆ ಭಗವಂತನು ಕರುಣಾಮಯನು, ದೀನರಕ್ಷಕನು ಎಂಬು ದನ್ನು ಅನೇಕ ಪದಗಳಲ್ಲಿ ವರ್ಣಿಸಿದ್ದಾರೆ. ವಿಶೇಷವಾಗಿ ಹನುಮಂತನ ಪರಾಕ್ರಮ, ಅವನ ಭಕ್ತಿ ಪರಾಕಾಷ್ಟತೆ, ಅವನ ಮೂರು ಅವತಾರಗಳ ವರ್ಣನೆ (ಅಂದರೆ, ಹನುಮ, ಭೀಮ, ಮಧ್ವ—ಇದು ಮಧ್ವಾಚಾರ್ಯರ ಅನುಯಾಯಿಗಳ ದೃಢವಾದ ನಂಬಿಕೆ) ಇದು ಅನೇಕ ಪದಗಳ ವಿಷಯವಾಗಿದೆ.

ಇದೇ ಅಲ್ಲದೆ ಗಣಪತಿ, ಸ್ವರಸ್ವತಿ, ಲಕ್ಷ್ಮಿ, ಭಾರತಿ, ಪಾರ್ವತಿ, ಶಿವ ಮುಂತಾದ ದೇವತೆಗಳನ್ನು ಪ್ರಾರ್ಥಿಸುವ ಅನೇಕ ಹಾಡುಗಳೂ ವಿಶೇಷವಾಗಿ ನಮ್ಮ ಮಹಿಳೆಯರು ತಮ್ಮ ಪೂಜಾಕಾಲದಲ್ಲಿ ಬಳಸುವಂತಹ ಅನೇಕ ದಾಸರ ಪದಗಳೂ ಇವೆ.

ಕೃಷ್ಣಾವತಾರವಂತೂ ಎಲ್ಲ ದಾಸರಿಗೆ ಯಥೇಷ್ಟವಾದ ಸಾಮಗ್ರಿಯನ್ನೊದಗಿಸಿದೆ. ಕೃಷ್ಣನ ಲೀಲೆಗಳನ್ನೂ, ಯಶೋದೆಯ ವಾತ್ಸಲ್ಯವನ್ನೂ ಗೋಪಿಯರ ಪರಾಭಕ್ತಿಯನ್ನು ಬಹಳ ರಸವತ್ತಾಗಿ ವರ್ಣಿಸುವ ದಾಸರ ಪದಗಳು ಅಸಂಖ್ಯಾತ. ಶಾಂತ, ಸಖ್ಯ, ದಾಸ್ಯ, ವಾತ್ಸಲ್ಯ ಮತ್ತು ಮಧುರ— ಈ ಐದು ರೀತಿಗಳಲ್ಲಿ ಭಕ್ತಿಭಾವ ಅಭಿವ್ಯಕ್ತವಾಗುವುದೆಂದು ವಿವರಿಸಲಾಗಿದೆ. ಇವುಗಳಲ್ಲಿ ಗೋಪಿಯರು ತೋರಿಸಿದ ನಿರ್ವ್ಯಾಜ ಪ್ರೇಮವು (ಮಾಧುರ್ಯ ಮಧುರಭಾವ) ಎಲ್ಲಕ್ಕೂ ಉತ್ತಮವಾದುದೆಂದು ನಾರದ ಭಕ್ತಿಸೂತ್ರಗಳಲ್ಲಿ ಹೇಳಿದೆ. ಭಗವಂತನ ಸ್ಮರಣೆ ತಪ್ಪಿದರೆ ಅತಿವ್ಯಾಕುಲವನ್ನು ಅನುಭವಿಸುವುದು, ಎಲ್ಲ ಕಾರ್ಯಗಳನ್ನೂ ಭಗವದರ್ಪಣ ಬುದ್ಧಿಯಿಂದ ಮಾಡುವುದು— ಇದೇ ಭಕ್ತಿಯ ಪರಾಕಾಂಕ್ಷೆಯೆಂದು ಭಕ್ತಿಸೂತ್ರಗಳ ಅಭಿಪ್ರಾಯ. ಈ ಭಕ್ತಿಯಲ್ಲಿ ಭಗವಂತನ ಮಾಹಾತ್ಮ್ಯೆಯನ್ನು ಗೋಪಿಯರು ಮರೆಯಲಿಲ್ಲ. ಹಾಗೆ ಮರೆತಿದ್ದರೆ ಅದು ಕೇವಲ ಕಾಮುಕವಾಗುತ್ತಿತ್ತು. ಹೀಗೆ ಹೇಳಲು ಭಾಗವತಪುರಾಣದಲ್ಲಿ ವರ್ಣಿಸಿರುವ ಪ್ರಸಂಗ ಅವಕಾಶ ಕೊಡುವುದಿಲ್ಲ. ಇವು ಕೃಷ್ಣನ ಬಾಲ್ಯದ ಪ್ರಸಂಗಗಳು, ತದೇಕ ಧ್ಯಾನದಲ್ಲಿ ಯೋಗಿಗಳು ಪರವಸ್ತುವಿನಲ್ಲಿ ತಲ್ಲೀನವಾಗುವಂತೆ ಗೋಪಿಯರೂ ತಲ್ಲೀನರಾದರೆಂದೂ, ತಮ್ಮ ಲೌಕಿಕ ಬಂಧನಗಳೆಲ್ಲವನ್ನೂ ಕಡಿದುಹಾಕಿ ಕೃಷ್ಣನ ಅಂತರಪ್ರಜ್ಞಾಸ್ವರೂಪದಲ್ಲಿ ಲೀನರಾದರೆಂದು ಭಾಗವತ ವರ್ಣಿಸುತ್ತದೆ. ಇದೇ ವೈಷ್ಣವಧರ್ಮದಲ್ಲಿ ಮೋಕ್ಷದ ಸ್ವರೂಪ. ಇದನ್ನೇ ಉತ್ತರದಲ್ಲಿ ಜಯದೇವ, ಕೃಷ್ಣಚೈತನ್ಯ ಮತ್ತು ವಲ್ಲಭಾಚಾರ್ಯರು ಉಪದೇಶಿದರು. ಕರ್ಣಾಟಕದಲ್ಲಿ ಇದನ್ನು ಪ್ರಚುರಗೊಳಿಸಿದವರು ಹರಿದಾಸರು.

ಗೋಪಿಯರ ಭಕ್ತಿಯನ್ನೂ, ಭಾಗ್ಯವನ್ನೂ ಕೃಷ್ಣನ ಬಾಲಲೀಲೆಗಳನ್ನೂ ವರ್ಣಿಸುವ ದಾಸರ ಪದಗಳು ಕರ್ಣಾಟಕದಲ್ಲೆಲ್ಲ (ದಕ್ಷಿಣ ಪ್ರಾಂತಗಳಲ್ಲೆಲ್ಲವೆಂತಲೂ ಹೇಳಬಹುದು) ಬಹುಜನಪ್ರಿಯವಾದುವು. ನಮ್ಮ ನಾಡಿನ ಮಹಿಳೆಯರು ಈ ಹಾಡುಗಳನ್ನು ಹೇಳಿಕೊಳ್ಳುತ್ತ ತಮ್ಮ ಅಂತರಂಗ ಭಕ್ತಿಯನ್ನು ಬೆಳೆಸಿಕೊಂಡಿದ್ದಾರೆ. ತಮ್ಮ ಮಕ್ಕಳನ್ನುದ್ದೇಶಿಸಿ ಈ ಹಾಡುಗಳನ್ನು ಹಾಡಿ ಸಂತಸಗೊಂಡಿದ್ದಾರೆ. ತಮ್ಮ ಮನೆಗಳನ್ನು ಬೆಳಗಿಸಿದ್ದಾರೆ. ಜೀವನದ ರಸಪುಷ್ಟಿಗೆ ಈ ಪದಗಳು ಬಹಳ ಸಹಾಯಮಾಡಿವೆ.

ಜ್ಞಾನ ಭಕ್ತಿಗಳ ಜೊತೆಗೆ ಹರಿದಾಸರು ವೈರಾಗ್ಯವನ್ನೂ ಜನರಿಗೆ ಬೋಧಿಸಿದರು. ಅವರು ನಡೆಸುತ್ತಿದ್ದ ವಿರಕ್ತಜೀವನವೇ ಈ ಬೋಧನೆಗೆ ನಿದರ್ಶನವಾಗಿತ್ತು. ದಾಸರು ಸಂಸಾರಿಗಳಾಗಿದ್ದರೂ, ಯದೃಚ್ಛಾಲಾಭ ಸಂತುಷ್ಟರಾಗಿ, ಸಂಗ್ರಹ ಬುದ್ಧಿಯನ್ನು ತೊರೆದು ಹರಿನಾಮಸಂಕೀರ್ತನೆಯನ್ನು ಹರ್ಷಚಿತ್ತರಾಗಿ ತಮ್ಮ ಜೀವನವನ್ನು ಸಾಗಿಸುತ್ತಿದ್ದ ರೀತಿ ಎಲ್ಲ ಸಂಸಾರಿಗಳಿಗೂ ಆದರ್ಶಪ್ರಾಯವಾಗಿತ್ತು. ದಾಸರ ವೃತ್ತಿ ಭಿಕ್ಷೆ ಬೇಡುವುದು— ಮಧುಕರ ವೃತ್ತಿ. ಹೀಗೆ

ಮಾಡುತ್ತ ಅವರು ಯಾವ ರೀತಿಯ ದೈನ್ಯವನ್ನೂ ತಾಳಲಿಲ್ಲ. ಪ್ರತಿಯಾಗಿ ಹೆಮ್ಮೆಯನ್ನೇ ತಾಳಿ ನಿಶ್ಚಿಂತರಾಗಿದ್ದರು. ಪುರಂದರದಾಸರೇ ಇದನ್ನು ವರ್ಣಿಸಿದ್ದಾರೆ :

'ಮಧುಕರ ವೃತ್ತಿ ಎನ್ನದು, ಅದು ಬಲುಚೆನ್ನದು
ಪದುಮನಾಭನ ಪಾದಪದುಮ ಮಧುಪವೆಂಬ'

ಎಂದಿದ್ದಾರೆ. ಹಿಂದೆ ಚಿನಿವಾರರಾಗಿದ್ದರು, ಅಂಗಿ ಪೇಟವನ್ನು ಧರಿಸುತ್ತಿದ್ದವರು. ವ್ಯಾಪಾರದಲ್ಲಿ ತೊಡಗಿದ್ದವರು ದಾಸರಾಗಿ ಮಾಡುವ ವ್ಯಾಪಾರವನ್ನೂ ಧರಿಸುವ ವೇಷವನ್ನೂ ಹೋಲಿಸಿ ಇಂದು ಸ್ವಾರಸ್ಯವಾದ ಪದವನ್ನು ಹಾಡಿದ್ದಾರೆ :

'ವ್ಯಾಪಾರ ಎಮಗಾಯಿತು
ಶ್ರೀಪತಿಯ ಪಾದಾರವಿಂದ ಸೇವೆಯೆಂಬೋ
ಹರಿಕರುಣವೆ ಅಂಗಿ, ಗುರುಕರುಣವೆ ಮುಂಡಾಸು
ಹರಿದಾಸರ ದಯವೆಂಬೊ ವಲ್ಲಿ
ಪರಮ ಪಾಪಿ ಕಲಿಯೆಂಬೊ ಪಾಪಾಸು ಮೆಟ್ಟಿ
ದುರಾತ್ಮರ ಎದೆ ಮೇಲೆ ನಡೆವಂಥ
ಬಿಳಿಯ ಕಾಗದ ಹೃದಯ ಬಾಯಿ ಕಲಮದಾನಿ
ನಾಲಗೆ ಎಂಬೋದು ಲೇಖನಿಯು
.... .... .... .... .... .... ....
.... ... .... .... .... .... ...
ನುಡಿ ನುಡಿಗಾನಂದ ಬಾಷ್ಪ ರೋಮಾಂಚನ
ಮುಡುಪಿನೊಳಗಿಟ್ಟ ಕೈಜೀತವು।
.... .... .... .... .... ... ...
.... .... .... .... .... .... ....
ಪುಂಡರೀಕಾಕ್ಷ ಶ್ರೀಪುರಂದರವಿಠಲನು
ದಂಡಿಸಿ ವೀಳ್ಯವ ಕೊಟ್ಟು ಸೇವೆಯೊಳಿಟ್ಟ

'ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ತುತ್ತು ಹಿಟ್ಟಿಗಾಗಿ' ಎಂದು ಕನಕದಾಸರು ಸಾರಿದರು. ವೇದಶಾಸ್ತ್ರ ಪಂಚಾಂಗ ಓದುವವರು, ಚಂಡ ಭಟರು ಕತ್ತಿ ಢಾಲು ಕೈಲಿ ಹಿಡಿವವರು, ಅಂಗಡಿಗಳನ್ನು ಹೂಡುವವರು, ಕೊಟ್ಟಣ ಕುಟ್ಟುವವರು, ಸಂನ್ಯಾಸಿ, ಜಂಗಮ, ಜೋಗಿ, ಜಟ್ಟಿ, ಮೊಂಡಬೈರಾಗಿ, ಕಳ್ಳತನವ ಮಾಡುವವರು—ಇತ್ಯಾದಿ ಕೆಲಸಗನು ಇದಕ್ಕಾಗಿಯೇ. ಆದರೆ 'ಉನ್ನಂತ ನೆಲೆಯಾದಿ ಕೇಶವನ ಧ್ಯಾನವನ್ನು ಮನಮುಟ್ಟಿ ಮಾಡುವುದು ಮುಕ್ತಿಗಾಗಿ ಆನಂದಕಾಗಿ' ಎಂದರು.

ಪುರಂದರದಾಸರು ಬಹಳ ಲಲಿತವಾದ ಭಾಷೆಯಲ್ಲಿ ಹೀಗೆ ಉಪದೇಶ ಮಾಡಿದರು :

'ವಿಷಯದ ವಿಚಾರ ಬಿಡು ವಿಹಿತ ಕರ್ಮವಮಾಡು
ವೈರಾಗ್ಯ ಭಾಗ್ಯ ಬೇಡು
ವಿಷವೆಂದು ಕಾಮ ಕ್ರೋಧಗಳೆಲ್ಲವೀಡಾಡು
ವಸುಣ ಮನವೆ ಮಾಧವನ್ನ ಕೊಂಡಾಡು

ಅನುದಿನವು ಹರಿಕಥೆಯ ಕೇಳಿ ಸಂತೋಷಪಡು
ವಿನಯದಿ ಸಜ್ಜನರ ಕೂಡು
ಮನ ಮುಟ್ಟಿ ದುರಾಚಾರಮಾಳ್ಪರನು ನೀ ಕಾಡು
ಹಣಹೊನ್ನು ಪರಹೆಣ್ಣು ಹೆಂಚೆಂದು ನೋಡು'

ಆದರೆ ವೈರಾಗ್ಯವೆಂದರೆ ದಾರಿದ್ರ್ಯವನ್ನಪ್ಪಿಕೊಳ್ಳುವುದಲ್ಲ. ಹರಿದಾಸರು ತಕ್ಕ ಮಟ್ಟಿಗೆ ಪುಷ್ಟವಾದ ಜೀವನವನ್ನು ನಡೆಸುತ್ತಿದ್ದರು. ಅವರ ನಿತ್ಯತೃಪ್ತಿಯೇ ಇದಕ್ಕೆ ಕಾರಣ. ಗೋಪಾಲದಾಸರು ಒಂದು ಹಾಡಿನಲ್ಲಿ ವೈರಾಗ್ಯದ ಅರ್ಥವನ್ನು ವಿಶದ ಗೊಳಿಸಿದ್ದಾರೆ ;

'ವೈರಾಗ್ಯಮಾರ್ಗ ಕೇಳು ದಾರಿದ್ರಮಾರ್ಗ ಕೀಳು
ಶ್ರೀರಮಣನ ಪಾದಾರಾಧಿಸುವುದಕ್ಕೆ
ನಾರಿಯ ಧಾರುಣಿಯ ಧನವ ಬಿಟ್ಟರಾಯಿತೆ
ವೈರಾಗ್ಯವಲ್ಲ ಕಂಡ ಧೀರರಿಗೆ

ನಾರಿಸುತರುಗಳು ಶರೀರಸಂಬಂಧಿಗರು
ಎಂತೆಂದಿರಬೇಕು
ನೀರಿನೊಳಗೆ ಇನ್ನು ಕಮಲವು ಇದ್ದಂತೆ
ಕಾರಣವಾಗಿ ಕಾರ್ಯವಿಲ್ಲದಿರಬೇಕು

ಸ್ವಯೋಗ್ಯತೆಯೊಳಗೆ ಆಯತವಾದದ್ದು
ನೋಯದೆ ಉಣುವುದೆ ನ್ಯಾಯದ ವೈರಾಗ್ಯ
ಆಯಾಸ ಪಡದೆ ಪರರ ಶ್ರೇಯಸ್ಸು ನೋಡಿ
ಶ್ರೀಯರಸನಿತ್ತನೆಂಬುದೆ ವೈರಾಗ್ಯ

ಘನಮಹಿಮ ಚೆಲುವ ಗೋಪಾಲವಿಠಲನ
ನೆನೆದು ಸಕಲ ಸುಖವುಣುವುದೆ ವೈರಾಗ್ಯ

ಸಕಲ ಐಶ್ವರ್ಯವೂ ಈಶ್ವರನು ಕೊಟ್ಟದ್ದು— ಅದು ಅವನ ವರವೆಂದು ತಿಳಿದು ಭುಂಜಿಸಬೇಕು; ಪರರ ಧಾನವನ್ನು ಆಶಿಸಬಾರದು. 'ತೇನತ್ಯಕ್ತೇನ ಭುಂರಿಜೀಥಾ ಮಾಗೃಧಃ ಕಸ್ಯಸ್ವಿದ್ಧನಂ' ಎಂಬ ಈಶಾವಾಸ್ಯ ಉಪನಿಷತ್ ವಾಕ್ಯಕ್ಕೆ ಮಧ್ವಾಚಾರ್ಯರು ಮಾಡಿರುವ ವ್ಯಾಖ್ಯೆಯೂ ಇದೇ. ವೈರಾಗ್ಯವೆಂದರೆ ಈ ಲೋಕ ಕ್ಷಣಭಂಗುರ. ಮಿಥ್ಯೆ, ಮಾಯೆ– ಎನ್ನುವ ಭಾವದಿಂದ ಅದರಿಂದ ವಿಮುಖ ವಾಗುವುದೂ ಅಲ್ಲ. ಮಧ್ವಾಚಾರ್ಯರು ಜಗತ್ತು ಸತ್ಯ ಇದು ಮಿಥ್ಯವಲ್ಲ ಎಂದು ಒತ್ತಿ ಹೇಳಿದರು. ಮಾಯಾವಾದದ ತೀವ್ರ ಖಂಡನವೇ ಅವರ ಶಿಷ್ಯರು ಅದ್ವೈತಿ ಗಳೊಂದಿಗೆ ನಡೆಸಿದ ವಾದಗಳಲ್ಲಿ ಮುಖ್ಯ ವಿಷಯವಾಯಿತು. ಜಗತ್ತನ್ನು ಬರಿ ಭ್ರಾಂತಿಯೆಂದು ದಾಸರು ನಿರಾಕರಿಸಲಿಲ್ಲ. 'ಸಂಸಾರವೆಂಬಂಥ ಭಾಗ್ಯವಿರಲಿ ಕಂಸಾರಿ ನೆನೆವಂಥ ಸೌಭಾಗ್ಯವಿರಲಿ' ಎಂದು ಪುರಂದರದಾಸರು ಹಾಡಿದರು. ಇದೇ ಅಭಿ ಪ್ರಾಯವನ್ನೇ ಸರಳವಾದ ಮಾತುಗಳಲ್ಲಿ ದಾಸರು ತಮ್ಮ ಪಿಳ್ಳಾರಿ ಗೀತೆಯಲ್ಲಿ 'ಕೆರೆಯ ನೀರನು ಕೆರೆಗೆ ಚೆಲ್ಲಿ. ವರವ ಪಡೆದವರಂತೆ ಕಾಣಿರೊ' ಎಂದರು. ತಮ್ಮ ದ್ವಾದಶ ಸ್ತೋತ್ರದಲ್ಲಿ ಮಧ್ವಾಚಾರ್ಯರೂ 'ಕುರುಭುಂಕ್ಷ್ವ ಚ ಕರ್ಮನಿಜಂ ನಿಯತಂ ಹರಿ ಪಾದ ವಿನಮ್ರಧಿಯಾ ಸತತಂ— ಹರಿರೇವ ಪರೋ ಹರಿರೇವ ಗುರುಃ ಹರಿರೇವ ಜಗತ್ ಪಿತೃ ಮಾತೃ ಗತಿಃ ।' ಎಂದು ವಿವರಿಸಿದರು. ಪ್ರಾಪಂಚಿಕ ಜೀವನವನ್ನು ಹೇಗೆ ನಡೆಸಬೇಕೆನ್ನುವುದಕ್ಕೆ ಸಾರಸ್ಯವಾದ ಉಪಮಾನಗಳೊಂದಿಗೆ ದಾಸರು ಈರೀತಿ ಉಪದೇಶ ಮಾಡಿದರು :

'ಇದು ಭಾಗ್ಯ ಇದು ಭಾಗ್ಯ ಇದು ಭಾಗ್ಯವಯ್ಯಾ
ಪದುಮನಾಭನ ಪಾದ ಭಜನೆ ಸುಖವಯ್ಯಾ

ಕಲ್ಲಾಗಿರಬೇಕು ಕಠಿನಭವತೊರೆಯೊಳಗೆ
ಬಲ್ಲಾಗಿರಬೇಕು ಬಲ್ಲವರೊಳಗೆ
ಮೆಲ್ಲನೆ ಮಾಧವನ ಮನವ ಮೆಚ್ಚಿಸಬೇಕು
ಬೆಲ್ಲವಾಗಿರಬೇಕು ಬಂಧುಜನರೊಳಗೆ

ಬುದ್ಧಿಯಲಿ ತನುಮನವ ತಿದ್ದಿಕೊಳ್ಳಲು ಬೇಕು
ಮುದ್ದಾಗಬೇಕು ಮುನಿಯೋಗಿಗಳಿಗೆ

ವಿಷಯ ಭೋಗದ ತೃಣಕೆ ಉರಿಯಾಗಿರಬೇಕು
ನಿಶಿಹಗಲು ಶ್ರೀಹರಿಯ ನೆನೆಯಬೇಕು
ವಸುಧೇಶ ಪುರಂದರ ವಿಠಲರಾಮನ
ಹಸನಾದ ದಾಸರ ಸೇವಿಸಲು ಬೇಕು

## ನೀತಿಬೋಧೆ, ಸಮಾಜ ಸುಧಾರಣೆ

ಜ್ಞಾನ ಭಕ್ತಿ, ವೈರಾಗ್ಯಗಳು ಬೇರೂರಿ ಬೆಳೆಯಬೇಕಾದರೆ ವ್ಯಕ್ತಿಯ ಜೀವನ ನೀತಿ ನಿಯಮಗಳನ್ನು ಪಾಲಿಸಬೇಕು ; ಶೀಲದಿಂದ ಕೂಡಿರಬೇಕು. ಆದ್ದರಿಂದ ದಾಸರು (ವಿಶೇಷವಾಗಿ ಪುರಂದರದಾಸರೂ ಕನಕದಾಸರೂ) ತಮ್ಮ ಹಾಡುಗಳಲ್ಲಿ ಜನರನ್ನು ಎಚ್ಚರಿಸಿದ್ದಾರೆ. ಸಮಾಜದಲ್ಲಿನ ದೋಷಗಳನ್ನು ಟೀಕಿಸಿದ್ದಾರೆ. ಡಾಂಭಿಕತನ ಕಪಟ, ಅರ್ಥವಿಲ್ಲದ ಬಾಹ್ಯಾಚಾರಗಳು, ಜಾತಿಯ ಅಹಂಕಾರ ಮುಂತಾದ ಜನರ ನಡತೆಯಲ್ಲಿನ ವಕ್ರತೆಗಳನ್ನು ಖಂಡಿಸಿದ್ದಾರೆ. ಅಥವಾ ಹಾಸ್ಯಕ್ಕೆ ಗುರಿಮಾಡಿದ್ದಾರೆ. ಇದು ಯಾರೊಬ್ಬರನ್ನೂ ಉದ್ದೇಶಿಸಿ ಹೇಳಿದ ಮಾತುಗಳಲ್ಲ. ಕೇಳಿದವರು ತಮ್ಮನ್ನು ತಾವೇ ಪರೀಕ್ಷಿಸಿಕೊಂಡು ತಮ್ಮ ನಡತೆಯನ್ನು ತಿದ್ದಿಕೊಳ್ಳಬೇಕು.

ಹಿಂದು ಸಮಾಜದಲ್ಲಿ ಅಂತ್ಯಜರು ಶತಮಾನಗಳಿಂದ ತಿರಸ್ಕಾರಕ್ಕೆ ಗುರಿಯಾದವರು. ಅಲ್ಲದೆ ಉಳಿದ ಜಾತಿಗಳಲ್ಲಿಯೂ ಉಚ್ಚನೀಚವೆಂಬ ಭಾವನೆಗಳು ಬಹಳ ಕಾಲದ ಹಿಂದಿನಿಂದ ಬಂದುವು. ವ್ಯಕ್ತಿಯ ಸ್ವಾತಂತ್ರ್ಯಕ್ಕೂ ವ್ಯಕ್ತಿಯ ಗೌರವಕ್ಕೂ ಈಗಿನ ಕಾಲದಲ್ಲಿರುವಷ್ಟು ಪ್ರಾಧಾನ್ಯ ಆಗಿನ ಕಾಲದಲ್ಲಿ ಕೊಡುತ್ತಿರಲಿಲ್ಲ. ಆದರೆ ಎಲ್ಲರ ಅಂತರ್ಯಾಮಿಯಾಗಿ ಭಗವಂತನಿರುವನೆಂಬ ಭಾವವನ್ನು ತಾಳಿದ್ದ ವೈಷ್ಣವಸಂತರು ಇದಕ್ಕೆ ಅಪವಾದ.

'ಕುಲ ಕುಲ ಕುಲವೆನ್ನುತಿಹರು
ಕುಲವ್ಯಾವುದು ಸತ್ಯ ಸುಖವುಳ್ಳವರಿಗೆ

ಆತ್ಮ ಯಾವ ಕುಲ ಜೀವ ಯಾವ ಕುಲ
ತತ್ತ್ವೇಂದ್ರಿಯಗಳ ಕುಲಪೇಳಿರಯ್ಯಾ
ಆತ್ಮಂತರಾತ್ಮನು ನೆಲೆಯಾದಿಕೇಶವ
ಆತನೊಲಿದ ಮೇಲೆ ಯಾತರ ಕುಲವಯ್ಯಾ

ಎಂದು ಕನಕದಾಸರು ಪ್ರಶ್ನಿಸಿದರು.*

---

* ಅವರನ್ನು ಕುಲದ ಹೆಸರಿನಲ್ಲಿ ಹೀನಾಯದಿಂದ ಕಂಡಿರಬೇಕು. (ಸಂ.

ಪುರಂದರದಾಸರು ಉತ್ತಮ ನಡೆತೆಯೆ ಸತ್ಕುಲದ ಲಕ್ಷಣ, ದುರ್ನಡತೆಯುಳ್ಳವರೇ ನಿಜವಾದ ಹೊಲೆಯರೆಂದು ಚುಚ್ಚುವ ಮಾತುಗಳಲ್ಲಿ ಸಾರಿದರು. ಅಂತಹ ಹೊಲೆಯರ ಪಟ್ಟಿಯನ್ನು ಮಾಡಿದರು.

'ಹೊಲೆಯ ಹೊರಗಿಹನೆ ಊರೊಳಗಿಲ್ಲವೆ
ಶ್ರೀ ಹರಿಯ ಸ್ಮರಣೆಯನ್ನು ಬಲ್ಲವರು ಪೇಳಿ
ಶೀಲವನು ಕೈಗೊಂಡು ನಡೆಸದಾತನೆ ಹೊಲೆಯ
ಪೇಳಿದ ಹರಿಕಥೆಯ ಕೇಳದವ ಹೊಲೆಯ
ಆಳಾಗಿ ಅರಸಂಗೆ ಕೇಡು ಬಗೆವವ ಹೊಲೆಯ
ಸೂಳೆಯನು ಕಾಮಿಸುವ ಶುದ್ಧ ಹೊಲೆಯ
ಕೊಂಡ ಸಾಲಗಳನು ತಿದ್ದದಾತನೆ ಹೊಲೆಯ
ಲಂಡತನದಲ್ಲಿ ನಡೆವ ಭಂಡ ಹೊಲೆಯ
ಉಂಡ ಮನೆಗೆರಡನ್ನು ಬಗೆವಾತ ಹೊಲೆಯ
ಹೆಂಡತಿಯ ಇಚ್ಛೆಯಪ ಹೇಡಿ ಹೊಲೆಯ
ಇದ್ದಾಗ ದಾನಧರ್ಮವ ಮಾಡದವ ಹೊಲೆಯ
ಮದ್ದಿಕ್ಕಿ ಕೊಲ್ಲುವವ ಮಾರಿಹೊಲೆಯ
ಬದ್ಧವಾದ ನಂಬು ನುಡಿಯು ಇಲ್ಲದಾತನೆ ಹೊಲೆಯ
ಶುದ್ಧತಾನೆಂಬಾತ ಶುಂಠಹೊಲೆಯ
ಆಸೆಮಾತನು ಕೊಟ್ಟು ಭಾಷೆ ತಪ್ಪುವ ಹೊಲೆಯ
ಲೇಸು ಉಪಕಾರಗಳ ಮಾಡದವ ಹೊಲೆಯ
ಗುರುಹಿರಿಯರನು ನಮಿಸದಾತನೆ ಹೊಲೆಯ
ಪುರಂದರವಿಠಲನ ನೆನೆಯದವ ಹೊಲೆಯ

ಪುರಂದದರದಾಸರು ಮಾಡಿದ ನೀತಿ ನಡತೆಗಳ ಬೋಧೆಗೆ ಅವರು ಮೂರ್ಖರಾರೆಂಬುದನ್ನು ವಿವರಿಸುವ ಕೀರ್ತನೆ ಒಳ್ಳೆಯ ನಿದರ್ಶನ ;

'ಮೂರ್ಖರಾದರು ಜನರು ಲೋಕದೊಳಗೆ
ಏಕದೇವನ ಬಿಟ್ಟು ಕಾಕು ದೈವವ ಭಜಿಸಿ

ಎಂದು ಮೂರ್ಖರ ಪಟ್ಟಿಯನ್ನು ಮಾಡಿದ್ದಾರೆ.

'ಗಂಟನೊಬ್ಬರ ಕೈಯಲಿಡುವಾತ ; ನೆಂಟರಿಗೆ ಸಾಲವನು ಕೊಡುವಾತ ;
ಪಡೆದ ಮಕ್ಕಳ ಮಾರಿ ಒಡಲ ಪೊರೆವವ; ಮಡದಿ ಹುಟ್ಟಿದ ಮನೆಯಲಿರುವವ,
ಬಡತನ ಬಂದಾಗ ಬೈದುಕೊಂಬವ ; ದೃಢ ಭಕ್ತಿ ಇಲ್ಲದವ ;
ಮುಪ್ಪಿನಲ್ಲಿ ಮದುವೆ ಮಾಡಿ ಕೊಂಬವ;
ಸತ್ತ ಕರುವಿನ ತಾಯ ಹಾಲು ಕರೆವವ; ಒತ್ತೆಯಿಲ್ಲದೆ ಸಾಲ ಕೊಡುವವ ;
ಹತ್ತೆಂಟು ಬಗೆಯಲ್ಲಿ ಹಂಬಲಿಸುವವ ; ಹೆತ್ತ ತಾಯಿಯ ಬೈವವ ;
ತಾಮಸರ ಕೂಡಿ ಕೊಂಡವ ;
ಉಂಡ ಮನೆಗೆ ಎರಡನ್ನು ಬಗೆಯುವಾತ; ಕೊಂಡೆ ಮಾತನು ಕೇಳಿ ಕುಣಿಯುವವ;
ಪುರಂದರವಿಠಲನ ಕೊಂಡಾಡಿ ಭಜಿಸದವ '

ವ್ಯಕ್ತಿಯ ಶೀಲ ಬೆಳೆಯಬೇಕಾದರೆ ಆತ್ಮಪರೀಕ್ಷೆ ಅತ್ಯಾವಶ್ಯಕ. ಈ ಉಪದೇಶವನ್ನು ಮನಮುಟ್ಟುವ ರೀತಿಯಲ್ಲಿ ಪುರಂದರದಾಸರು ಮಾಡಿದರು. ಪರನಿಂದೆ ಮಾಡಬಾರದೆಂದು ವಿಜಯದಾಸರು ತಮ್ಮ ಕೀರ್ತನೆಯೊಂದರಲ್ಲಿ ಎಚ್ಚರಿಸಿದ್ದಾರೆ :

ಏನು ಕಾರಣ ಮತಿಯಿಲ್ಲ ಮನವೆ
ಹೀನಾಯವಾಡದಿರು ಪರರಗುಣಗಳ ಎಣಿಸಿ
ಅವನ ಗೊಡವೆಯೇಕೆ ಅವನಾರು ನೀನಾರು
ಅವನ ಪಾಪಕ್ಕೆ ನೀ ಭಾಗಿಯಾಗೀಯೆ

ನಿನ್ನೊಳಗೆ ನೀ ತಿಳಿದು ವಿಜಯ ವಿಠಲನ್ನ
ಸನ್ನುತಿಸಿ ಭವರೋಗ ಬನ್ನವನು ಕಳೆಯೊ

ಆದರೆ ನಿಂದಕರ ಪಾತ್ರವೂ ಅಗತ್ಯವೇ. ನಿನ್ನನು ಯಾರಾದರು ನಿಂದಿಸಿದರೆ ಅದರಿಂದ ನೀನು ಮನಗೆಡಬಾರದು ಭಕ್ತರ ಲಕ್ಷಣಗಳನ್ನು "ತುಲ್ಯನಿಂದಾಸ್ತುತಿಃ" ಎಂದು ಭಗವದ್ಗೀತೆಯಲ್ಲಿ ಹೇಳಿದೆ. ಇದನ್ನೇ ಜಗನ್ನಾಥದಾಸರು

'ಹಲವು ಪಾತಕಗಳ ಕಳೆದು ಪುಣ್ಯವನೀವ
ನಿಂದಕರು ಕರುಣಾಳು ಇಳೆಯೊಳಗೆ'

ಎಂದು ಹೇಳಿದ್ದಾರೆ. ಪುರಂದಸದಾಸರು ವ್ಯಂಗ್ಯೋಕ್ತಿಯಿಂದ ನಿಂ ದ ಕ ರ ನ್ನು ವರ್ಣಿಸಿದ್ದಾರೆ.

ಈ ದಾಸ ಶ್ರೇಷ್ಠರು ಹೇಳಿದಂತೆ 'ಕಠಿನಭವತೊರೆಯೊಳಗೆ ಕಲ್ಲಾಗಿರಬೇಕು' ಇಂತಹವರ ವಿಷಯದಲ್ಲಿ ನಾವು ಸಹನೆಯನ್ನು ತೋರುವುದು ಮಾತ್ರವಲ್ಲ ; ಅವರನ್ನು

ನಮ್ಮವರನ್ನಾಗಿ ಮಾಡಿಕೊಳ್ಳಬೇಕೆಂದು 'ಧರ್ಮವೇ ಜಯವೆಂಬ ದಿವ್ಯಮಂತ್ರ' ಎಂದು ಆರಂಭವಾಗುವ ದೇವರನಾಮದಲ್ಲಿ ಉದಾತ್ತವಾದ ಆದರ್ಶವನ್ನು ನಮ್ಮ ಮುಂದೆ ಇಟ್ಟಿದ್ದಾರೆ.

ವಿಷವನಿಕ್ಕಿದವಗೆ ಷಡ್ರಸವನುಣಿಸಬೇಕು
ದ್ವೇಷ ಮಾಡಿದವನ ಪೋಷಿಸಲು ಬೇಕು

ಕುಂದೆಣಿಸುವವರ ಗೆಳೆತನ ಮಾಡಬೇಕು

ಕಂಡು ಸಹಿಸದವರ ಕರೆಯಬೇಕು

ಇದೇ ರೀತಿಯ ಧೃತಿಯನ್ನೂ ತಾಳ್ಮೆಯ ಮಹಿಮಾತಿಶಯವನ್ನೂ ದಾಸರ ಮತ್ತೊಂದು ಪ್ರಸಿದ್ಧವಾದ ಕೀರ್ತನೆಯಲ್ಲಿ ನಾವು ಕಾಣುತ್ತೇವೆ :

ನಾನಿನ್ನ ಧ್ಯಾನದೊಳಿರಲು ಸದಾ
ಹೀನ ಮಾನವರೇನು ಮಾಡಬಲ್ಲರೋ ರಂಗ

ಕಿಚ್ಚಿಗೆ ಇರುವೆ ಮುತ್ತುವುದೇ ಕೇಳೆಲೋ ರಂಗ
ದಾಳಿಲಿ ಕುದುರೆ ವೈಯಾರದಿ ಕುಣಿಯಲು

ಧೂಳು ರವಿಯ ಮೇಲೆ ಮುಚ್ಚುವುದೆ
ತಾಳಿದವರಿಗೆ ವಿರುದ್ಧ ಲೋಕದಲುಂಟೆ

ಗಾಳಿಗೆ ಗಿರಿಯು ಅಲ್ಲಾಡಬಲ್ಲುದೆ

ಪುರಂದರದಾಸರು ಅನೇಕ ಕೀರ್ತನೆಗಳಲ್ಲಿ ಕಪಟಿಗಳನ್ನೂ ಡಂಭಾಚಾರಿಗಳನ್ನೂ ಪರಿಹಾಸಕ್ಕೆ ಗುರಿಮಾಡಿದ್ದಾರೆ. ಆಚಾರನಿಷ್ಠರು ತಮ್ಮ ಮಡಿವಂತಿಕೆಯನ್ನು ಕಾಪಾಡುವ ರೀತಿಯನ್ನು ನೋಡಿ 'ಮಡಿಮಡಿಯೆಂದು ಅಡಿಗಡಿಗ್ಹಾರುವೆ' ಎಂದಿದ್ದಾರೆ. ಮನುಜರೆಲ್ಲ ಹಗರಣವ ಮಾಡುವುದ ಕಂಡು........ಕಾಮಕ್ರೋಧ ಮನದೊಳಿಟ್ಟು....ಹರಿವ ನೀರಿವನೊಳಗೆ ಮುಳುಗಿ ಬೆರಳ ಎಣಿಸುತಿಹರ ಕಂಡು' ದಾಸರಿಗೆ 'ನಗೆಯು ಬರುತಿದೆ! ದುರ್ಜನರನ್ನು ಜಾಲಿಯ ಮರಕ್ಕೆ ಹೋಲಿಸಿ ಅವರ ಹೇಳಿದ ಹಾಡು ಒಮ್ಮೆ ಕೇಳಿದವರಿಗೆ ಎಂದೂ ಮರೆಯಲಾಗದಂತಹುದು.

ಬಿಸಿಲಲಿ ಬಳಲಿ ಬಂದವರಿಗೆ ನೆರಳಿಲ್ಲ
ಹಸಿದು ಬಂದವರಿಗೆ ಹಣ್ಣು ಇಲ್ಲ
ಕುಸುಮ ವಾಸನೆ, ಇಲ್ಲ ಕೂಡಲು ಸ್ಥಳವಿಲ್ಲ

ತನ್ನಿಂದ ಉಪಕಾರ ತಟಕಾದರು ಇಲ್ಲ
ಬನ್ನದ ಮಾತಿಗೆ ಕೊನೆಯಿಲ್ಲವು
ಅನ್ನಕ್ಕೆ ಸೇರಿದ ಕುನ್ನಿ ಮಾನವರಂತೆ
ಇನ್ನಿವರ ಕಾರ್ಯವು ಪುರಂದರವಿಠಲ

ಹುಟ್ಟು ಸ್ವಭಾವವನ್ನು ಮಾರ್ಪಡಿಸುವುದು ಬಹಳ ಕಷ್ಟ. ಇದಕ್ಕೆ ಸತ್ಸಂಗವೇ ಉಪಾಯವೆಂದು ಹಿಂದಿನ ಜ್ಞಾನಿಗಳು ಹೇಳಿದಂತೆ ದಾಸರೂ ಸತ್ಸಂಗದ ಆವಶ್ಯಕತೆಯನ್ನು ಒತ್ತಿ ಹೇಳಿದ್ದಾರೆ.

ಸಜ್ಜನರ ಸಂಗದೊಳಿರಿಸೆನ್ನ ರಂಗ
ದುರ್ಜನರ ಸಂಗ ನಾನೊಲ್ಲೆ ಮಂಗಳಾಂಗ
ಮೂಢಮೂರ್ಖರ ಸಂಗ ಬಲುಭಂಗ ಎಲೋ ರಂಗ

ಎಂದು ಕನಕದಾಸರು ಹಾಡಿದ್ದಾರೆ. ಪುರಂದರದಾಸರೂ ಒಂದು ಕೀರ್ತನೆಯಲ್ಲಿ

ಅಜ್ಞಾನಿಗಳ ಕೂಡ ಅಧಿಕ ಸ್ನೇಹಕ್ಕಿಂತ
ಸುಜ್ಞಾನಿಗಳ ಕೂಡೆ ಜಗಳವೆ ಲೇಸು

ಎಂದು ಹೇಳಿದ್ದಾರೆ.

ದುರ್ಜನರು ತಾವು ಮಾಡುವ ಕೆಟ್ಟ ಕರ್ಮಗಳಿಗೆ ಈ ಜನ್ಮದಲ್ಲೇ ತಕ್ಕ ಶಿಕ್ಷೆಯನ್ನನುಭವಿಸುತ್ತಾರೆಂದು ಅನೇಕ ರೋಗಗಳಿಗೆ ತುತ್ತಾಗುತ್ತಾರೆಂದೂ ಕನಕದಾಸರು ಬೆದರಿಕೆ ಹಾಕಿದ್ದಾರೆ.

ಜನರಲ್ಲಿ ಪಾಪಭೀತಿಯನ್ನು ಹುಟ್ಟಿಸಿ, ಅವರು ಸನ್ಮಾರ್ಗದಲ್ಲಿ ನಡೆಯುವಂತೆ ಉಪದೇಶಿಸಿದ್ದಾರೆ.

ಈಗಿನ ಕಾಲದಲ್ಲಿಯೂ ಅನೇಕ ಕಡೆಗಳಲ್ಲಿರುವಂತೆ ಆಗಿನ ಕಾಲದಲ್ಲಿಯೂ ಕ್ಷುದ್ರ ದೇವತೆಗಳ ಪೂಜೆ ಅವುಗಳಿಗೆ ಪ್ರಾಣಿಬಲಿ ಮುಂತಾದ ಪದ್ಧತಿಗಳಿದ್ದುವು. ಕನಕದಾಸರು ಕುರುಬರ ವಂಶಕ್ಕೆ ಸೇರಿದವರಾದರೂ ವೈಷ್ಣವ ಧರ್ಮವನ್ನು ಸ್ವೀಕರಿಸಿ ಸಾತ್ತ್ವಿಕವಾದ ಪೂಜಾವಿಧಾನಗಳನ್ನು ಕೈಗೊಂಡವರು. ಅಜ್ಞಾನಿಗಳು ಅನುಸರಿಸುತ್ತಿದ್ದ ತಾಮಸಿಕ ಪದ್ಧತಿಗಳನ್ನು ಖಂಡಿಸಿ ಸಮಾಜ ಸುಧಾರಣೆಯನ್ನು ಮಾಡಲು ಯತ್ನಿಸಿದರು.

ದಾನ ಧರ್ಮವ ಮಾಡಿ ಸುಖಿಯಾಗು ಮನವೆ
ಹೀನವೃತ್ತಿಯಲಿ ನೀ ಕೆಡಬೇಡ ಮನವೆ

ಎಕ್ಕನಾತಿ ಎಲ್ಲಮ್ಮ ಮಾರಿದುರ್ಗಿಯು ಚೌಡಿ
ಅಕ್ಕರಿಂದಲಿ ಪೂಜೆಯ ಮಾಡಲೇಕೆ

ಕೊಬ್ಬು, ಹೋತು ಕುರಿ ಕೋಣವಾ ಬಲಿಗೊಂಬ
ಡೊಂಬಿದೈವಗಳ ಭಜಿಸದಿರು ಮನವೆ

ಕನಕದಾಸರೂ ಪುರಂದರದಾಸರೂ ಇದ್ದ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯ ಅಪಾರವಾದ ಸಂಪದಭಿವೃದ್ಧಿಯನ್ನು ಹೊಂದಿತ್ತಾದರೂ ಜನರ ಶೀಲ ಶಿಥಿಲವಾಗುತ್ತಿತ್ತು. ಇದನ್ನು ಕಂಡು ಈ ದಾಸವರ್ಯರು ಕೊರಗಿದರು. ಎಚ್ಚರಿಕೆಯನ್ನಿತ್ತರು. ಕನಕದಾಸರು 'ಕಲಿ ಹೆಚ್ಚಿ ಬಂದಿತಲ್ಲ' ಎಂಬ ಕೀರ್ತನೆಯಲ್ಲಿ ಇದನ್ನು ಪ್ರಸ್ತಾಪಿಸಿದ್ದಾರೆ.

ಪಾತಕದಿ ಮನವೆರಗಿ ಮೋಹಿಪ
ಮಾತಾಪಿತೃ ಗುರುದೈವ ದ್ರೋಹದಿ
ಭೂತಳವು ನಡುಗುತಿಹುದು

ಬಣ್ಣಣೆ ಮಾತುಗಳು ಮತ್ತು ಮತ್ತು ಮತ್ಸರ ಕ್ರೋಧಗಳು
ಅನ್ಯಾಯದಿಂದ ಅರ್ಥವ ಗಳಿಸೋರು
'ಕಲಿಯುಗದ ಮಹಿಮೆಯನ್ನು ಕಂಡಷ್ಟು ಪೇಳುವೆನು'

ಎಂದು ಆರಂಭಿಸಿ ಆಗಿನ ಕಾಲದಲ್ಲಿ ನಡೆಯುತ್ತಿದ್ದ ಅತ್ಯಾಚಾರಗಳನ್ನು ವಿವರಿಸಿರುವರು.

'ನೆಚ್ಚದಿರೀ ಭಾಗ್ಯ ಯಾರಿಗೂ ಸ್ಥಿರವಿಲ್ಲ ನಿಶ್ಚಯವೆಚ್ಚರಿಕೆ' ಎಂದು ಪುರಂದರ ದಾಸರು ಹಾಡಿದರು.

ಈ ರೀತಿಯಲ್ಲಿ ರಾಗ ಮೆಟ್ಟುಗಳಲ್ಲಿ ಜನರ ಮನಸ್ಸನ್ನಾಕರ್ಷಿಸಿ ತಮ್ಮ ಮಾತುಗಳು ಅಚ್ಚಳಿಯದೆ ನಿಂತು ಆಗಾಗ್ಗೆ ಪ್ರತಿಧ್ವನಿಸುವಂತೆ ಜನರಿಗೆ ಧರ್ಮವನ್ನೂ ನೀತಿಯನ್ನೂ ಬೋಧಿಸಿದರು, ಜನಾಭಿಪ್ರಾಯವನ್ನು ರೂಪಿಸಲು ಯತ್ನಿಸಿದರು,

## ಸಾಹಿತ್ಯ ಸೇವೆ

ಹರಿದಾಸರು ಕನ್ನಡ ಸಾಹಿತ್ಯಕ್ಕೆ ಮಾಡಿದ ಸೇವೆ ಗುಣದಲ್ಲಿಯೂ ಪ್ರಮಾಣದಲ್ಲಿಯೂ ಗಣನೀಯವಾದುದು.

ನಮ್ಮ ದೇಶದಲ್ಲಿ ಮುದ್ರಣಾಲಯಗಳು ಬರುವುದಕ್ಕೆ ಪೂರ್ವದಲ್ಲಿ – ಅಂದರೆ 19ನೆಯ ಶತಮಾನದ ಮಧ್ಯಭಾಗದವರೆಗು ಹಿಂದಿನಕಾಲದ ಶಾಸ್ತ್ರವನ್ನೂ ಸಾಹಿತ್ಯವನ್ನೂ ರಕ್ಷಿಸಲು ಎರಡೇ ಮಾರ್ಗಗಳಿದ್ದುವು ; ಒಂದು ಬಾಯಿ ಪಾಠದಿಂದ ಒಬ್ಬರಿಂದೊಬ್ಬರಿಗೆ ತಲೆತಲಾಂತರವಾಗಿ ಬಂದುದು. ಎರಡನೆಯದು ಕೈ ಬರೆಹದ ಮೂಲಕ ಪ್ರತಿಗಳ ಮೂಲಕ ರಕ್ಷಿಸಲ್ಪಟ್ಟುದು. ದಾಸರು ರಚಿಸಿದ ಸಾಹಿತ್ಯ ಉಳಿದು ಬಂದುದೂ ಈ ಮಾರ್ಗಗಳಿಂದಲೇ. ಶಾಸ್ತ್ರಗ್ರಂಥಗಳನ್ನೂ ಇತಿಹಾಸ ಪುರಾಣಗಳನ್ನೂ ಬರೆದಿಡುವುದು ಒಂದು ಪುಣ್ಯಕಾರ್ಯವೆಂದು ಭಾವಿಸಲಾಗಿತ್ತು. ಕನ್ನಡದಲ್ಲಿರುವ ದಾಸರ ಪದಗಳನ್ನು ಬರೆದಿಡುವುದಕ್ಕೆ ಇಷ್ಟು ಪ್ರಶಸ್ತಿ ಇರಲಿಲ್ಲ. ದಾಸಕೂಟಕ್ಕೆ ಸೇರಿದವರೂ ಅವರ ಭಕ್ತರೂ – ಇವರೇ ಈ ಕೆಲಸವನ್ನು ಮಾಡಬೇಕಾಗಿತ್ತು. ತಕ್ಕಮಟ್ಟಿಗೆ ಮಾಡಿಯೂ ಮಾಡಿದರು, ಇಂತಹ ಕೆಲವೇ ಜನರು ಮಾಡಿದ ಸೇವೆಯಿಂದ ಈ ಐನೂರು ವರ್ಷಗಳಲ್ಲಿ ದಾಸಸಾಹಿತ್ಯದ ಒಂದು ಅಲ್ಪಭಾಗ ಮಾತ್ರ ನಮಗೆ ಈಗ ದೊರೆತಿದೆ. ಬಾಯಿಪಾಠ ಮಾಡಿ ಒಬ್ಬರಿಂದೊಬ್ಬರಿಗೆ ತಲೆತಲಾಂತರವಾಗಿ ಉಳಿದು ಬಂದದ್ದು ಇಷ್ಟು ಪ್ರಮಾಣದಲ್ಲಿಯೂ ಇಲ್ಲವೆಂದು ಹೇಳಬೇಕು. ಉದಾಹರಣೆಗೆ ಪುರಂದರದಾಸರು ನಾಲ್ಕುಮುಕ್ಕಾಲುಲಕ್ಷ ಪದಗಳನ್ನು ರಚಿಸಿದರೆಂದು ಪ್ರತೀತಿ ಇದೆ. ಈಗ ನಮಗೆ ದೊರೆತಿರುವುದೊ ಸುಮಾರು ಒಂದುಸಾವಿರ ಮಾತ್ರ. ಅವರು ಜೀವಂತವಾಗಿದ್ದಾಗಲೆ ಅನೇಕಾನೇಕ ಪದಗಳನ್ನು ಲಿಖಿತರೂಪದಲ್ಲಿ ಅವರ ಶಿಷ್ಯರೂ ಅವರಲ್ಲಿ ಭಕ್ತಿಯಿದ್ದವರೂ ಕಾಪಾಡಿರಬೇಕು. ಆದರೆ ಪುರಂದರದಾಸರು ದೇಹಾಂತವಾದ ಒಂದು ವರ್ಷದ ನಂತರ ವಿಜಯನಗರ ಪಟ್ಟಣ ಪೂರ್ಣನಾಶಕ್ಕೆ ಗುರಿಯಾಯಿತು. ಆ ವಿಪ್ಲವದಲ್ಲಿ ಆದ ಪ್ರಾಣಹಾನಿ, ದ್ರವ್ಯಹಾನಿ ಎಷ್ಟೆಂದು ಊಹಿಸುವುದೇ ಕಷ್ಟ. ಎಷ್ಟು ಗ್ರಂಥಗಳ ಹಸ್ತಲಿಖಿತ ಪ್ರತಿಗಳೂ ಅಳಿದವೊ ಹೇಳುವವರಾರು ? ಅಂದಿಗೆ ದಾಸಕೂಟವೇ ಕಣ್ಮರೆಯಾಯಿತು. ಸುಮಾರು ನೂರುವರ್ಷಗಳ ನಂತರ ವಿಜಯದಾಸರು ಪುನರುಜ್ಜೀವನಗೊಳಿಸಿದರು. ಅವರೂ 25ಸಾವಿರ ಪದಗಳನ್ನು ರಚಿಸಿದರೆಂದು ಪ್ರತೀತಿ, ಅವರ ಕಾಲದ ನಂತರ ಅಂತಹ ಘೋರವಾದ ವಿಪ್ಲವಗಳು ಸಂಭವಿಸಲಿಲ್ಲ. ಆದರೂ ವಿಜಯದಾಸರ ರಚನೆಗಳಲ್ಲಿಯೂ ಸ್ವಲ್ಪ ಭಾಗವೇ ನಮಗೆ ಉಳಿದು ಬಂದಿದೆ.

ಈವರೆಗೆ ಉಳಿದು ಬಂದಿರುವ ಕೃತಿಗಳಿಂದಲೇ ಇವುಗಳಲ್ಲಿ ಉತ್ತಮ ಸಾಹಿತ್ಯ ಲಕ್ಷಣಗಳನ್ನು ನಾವು ಗುರುತಿಸಬಹುದಾಗಿದೆ. ಹದಿನೈದನೆಯ ಶತಮಾನದಿಂದಲೇ ಕನ್ನಡದಲ್ಲಿ ಆಧುನಿಕಯುಗ ಪ್ರಾರಂಭವಾಗಿತ್ತು. ಆದ್ದರಿಂದ ಭಾಷೆಯಲ್ಲಿ ಕ್ಲಿಷ್ಟತೆಯಿಲ್ಲದೆ ಈಗಿನವರಿಗೂ ಈ ರಚನೆಗಳು ಸುಲಭವಾಗಿ ಅರ್ಥವಾಗುತ್ತವೆ.

ಭಾಷೆಯ ಸರಳತೆಯ ದೃಷ್ಟಿಯಿಂದಲೂ ಸಾಮಾನ್ಯ ಜನರನ್ನುದ್ದೇಶಿಸಿ ರಚಿತ

ವಾದುವೆಂಬ ಕಾರಣದಿಂದಲೂ ದಾಸರ ಪದಗಳನ್ನು ಜನಪದ ಸಾಹಿತ್ಯವೆಂದು ಪರಿಗಣಿಸ ಬಹುದಾದರೂ ಇವುಗಳನ್ನು ರಚಿಸಿದವರು ಮೇಧಾವಿಗಳು, ಸುಸಂಸ್ಕೃತರು, ಅನು ಭಾವಿಗಳು ಎನ್ನುವ ವಿಷಯವನ್ನು ನಾವು ಮರೆಯಬಾರದು. ಅವರಲ್ಲಿ ಕೆಲವರು ಸಂಸ್ಕೃತ – ಕನ್ನಡ ಭಾಷೆಗಳಲ್ಲಿ ನಿಷ್ಣಾತರು, ಶಾಸ್ತ್ರಪಾಂಡಿತ್ಯವನ್ನು ಪಡೆದಿದ್ದವರು. ಅವರ ರಚನೆಗಳು ಕೇವಲ ಮನರಂಜನೆಯನ್ನು ಮಾತ್ರ ಕೊಡುವಂತಹವಲ್ಲ, ವಿಚಾರ ವನ್ನು ಪ್ರಚೋದಿಸತಕ್ಕಂತಹವು. ಚಿತ್ತಶುದ್ಧಿಯನ್ನು ಮಾಡಬಲ್ಲಂತಹವು. ಅಂತ ರಂಗವನ್ನು ಪ್ರವೇಶಿಸಿ ರಸೋತ್ಪಾದನೆಯನ್ನು ಮಾಡುವ ಶಕ್ತಿಯುಳ್ಳವು. ಆದ್ದರಿಂದ ಈ ರಚನೆಗಳಲ್ಲಿ ಉತ್ತಮ ಕಾವ್ಯದಲ್ಲಿರುವ ಲಕ್ಷಣಗಳನ್ನು ಗುರುತಿಸುವಂತಿದೆ.

ಎಲ್ಲ ದಾಸರಪದಗಳೂ ಉತ್ತಮ ಕಾವ್ಯ ಮಟ್ಟಕ್ಕೆ ಬರದೆ ಹೋದರೂ ಶ್ರೀಪಾದರಾಯರು, ವ್ಯಾಸತೀರ್ಥರು, ಪುರಂದರದಾಸರು, ಕನಕದಾಸರು, ವಾದಿ ರಾಜರು, ವಿಜಯದಾಸರು, ಪ್ರಸನ್ನ ವೆಂಕಟದಾಸರು, ಗೋಪಾಲದಾಸರು, ಜಗನ್ನಾಥ ದಾಸರು, ಮೋಹನದಾಸರು – ಇಪರಂತಹವರು ರಚಿಸಿದ ನೂರಾರು ಪದಗಳು ಭಾಷೆಯ ದೃಷ್ಟಿಯಿಂದಲೂ, ಭಾವದ ದೃಷ್ಟಿಯಿಂದಲೂ ಕನ್ನಡ ಸಾಹಿತ್ಯ ಭಾಂಡಾರಕ್ಕೆ ಅಮೂಲ್ಯ ಕೊಡುಗೆಗಳಾಗಿವೆ, ರಸಾತ್ಮಕವಾಗಿವೆ. ದೇಶದಲ್ಲಿ ಸಂಚಾರ ಮಾಡಿದ, ಮಾಡುತ್ತಿರುವ ನೂರಾರು ದಾಸರು ಈ ಮಹನೀಯರ ಪದಗಳನ್ನೇ ಹೆಚ್ಚಾಗಿ ಪಾಠಮಾಡಿಕೊಂಡು ತಮ್ಮ ವೃತ್ತಿಯನ್ನು ಸಾಗಿಸಿರುವರು. ಭಕ್ತಿ, ಜ್ಞಾನ, ವೈರಾಗ್ಯಗಳ ಪ್ರಚಾರದೊಂದಿಗೆ ಕಾವ್ಯಪ್ರಚಾರವನ್ನೂ ಮಾಡುತ್ತ ಬಂದಿದ್ದಾರೆ. ಸಾಮಾನ್ಯಜನರಲ್ಲಿ ಸುಪ್ತವಾಗಿರುವ ಕಾವ್ಯಪ್ರಜ್ಞೆಯನ್ನೂ ರಸಜ್ಞತೆಯನ್ನು ಉದ್ದೀಪನಗೊಳಿಸಿದ್ದಾರೆ. ಅವರು ಹಾಡಿದ ರಾಗಭಾವವೂ ಸಾಹಿತ್ಯದೊಂದಿಗೆ ಬೆರೆತು ಕೇಳುವವರಲ್ಲಿ ಪ್ರಭಾವವನ್ನು ಬೀರಿದೆ. ಕೇವಲ ಮಾದರಿಗಾಗಿ ಕೆಲವು ಉದಾ ಹರಣೆಗಳನ್ನು ಇಲ್ಲಿ ಕೊಡಬಹುದು.

ಶ್ರೀಪಾದರಾಯರು ದೇವರನ್ನು ಬೇಡಿಕೊಳ್ಳುತ್ತಾರೆ :

ನಾ ನಿನಗೇನು ಬೇಡುವುದಿಲ್ಲ, ಎನ್ನ
ಹೃದಯ ಮಂಟಪದೊಳು ನಿಂದಿರೊ ಕೃಷ್ಣ
ಶಿರ ನಿನ್ನ ಚರಣದಲ್ಲೆರಗಲಿ, ಎನ್ನ
ಚಕ್ಷುಗಳು ನಿನ್ನ ನೋಡಲಿ
.... .... .... .... .... .... ....
ನಾಲಿಗೆ ನಿನ್ನ ಕೊಂಡಾಡಲಿ, ಎನ್ನ
ಕರಗಳೆರಡು ನಿನಗೆ ಮುಗಿಯಲಿ
.... ... .... .... .... .... ....

ಬುದ್ಧಿ ಎನ್ನೊಳು ಕುಣಿದಾಡಲಿ ಎನ್ನ
ಚಿತ್ತ ನಿನ್ನಲ್ಲಿ ನಲಿದಾಡಲಿ
ಭಕ್ತ ಜನರ ಸಂಗ ದೊರೆಯಲಿ ರಂಗ
ವಿಠಲ ನಿನ್ನಯ ದಯವಾಗಲಿ ಹರಿಯೆ

ಇಲ್ಲಿ ಸಂಸ್ಕೃತ ಮತ್ತು ಕನ್ನಡ ಪದಗಳ ಹಿತವಾದ ಮಿಶ್ರಣ, ಮೃದುವಾದ ನಡೆ ಮತ್ತು ಹಾಡಿನ ಭಕ್ತಿಭಾವ ಬಹಳ ಹೃದಯಂಗಮವಾಗಿವೆ.

ಪುರಂದರದಾಸರ ಪದ :

ಕಂಡು ಕಂಡು ಕೈ ಬಿಡುವರೆ ಕೃಷ್ಣ
ಪುಂಡರೀಕಾಕ್ಷ ಪುರುಷೋತ್ತಮ ಹರಿ

ಬಂಧುಗಳು ಎನಗಿಲ್ಲ ಒದುಕಿನಲಿ ಸುಖವಿಲ್ಲ
ನಿಂದೆಯಲಿ ನೊಂದೆನೈ ನೀರಜಾಕ್ಷ

ತಂದೆತಾಯಿಯು ನೀನೆ ಬಂಧು ಬಳಗವು ನೀನೆ
ಎಂದೆಂದಿಗೂ ನಿನ್ನ ನಂಬಿದೆನೊ ಕೃಷ್ಣ
.... .... .... .... .... .... ....
ಭಕ್ತ ವತ್ಸಲನೆಂಬ ಬಿರುದು ಪೊತ್ತಮೇಲೆ
ಭಕ್ತರಾಧೀನನಾಗಿರಬೇಡವೆ
.... .... .... .... .... .... ....

ದಾಸರ ಪದಲಾಲಿತ್ಯ, ಪ್ರಾಸದ ಸೊಗಸು ಕರುಣರಸ ಇದರಲ್ಲಿ ಎದ್ದು ಕಾಣುತ್ತವೆ.

ವ್ಯಾಸತೀರ್ಥರು ಕೃಷ್ಣನ ಅಂತರಂಗ ಭಕ್ತರು. ಅವರ ಅನೇಕ ಪದಗಳಲ್ಲಿ ವೃಂದಾವನದಲ್ಲಿ ಕೃಷ್ಣನು ನಡೆಸಿದ ಬಾಲಲೀಲೆಗಳನ್ನು ಕಣ್ಣಿಗೆ ಕಟ್ಟಿದಂತೆ ವರ್ಣಿಸಿದ್ದಾರೆ. ಒಂದನ್ನು ಇಲ್ಲಿ ಉದಾಹರಿಸಬಹುದು :

ಕೊಳಲನೂದಿದ ಚದುರನಾರೆ ಪೇಳಮ್ಮಯ್ಯ

ತಳಿರಂದದಿ ತಾ ಪೊಳೆವ ಕರದಿ ಪಿಡಿದು

ನಾದದಿ ತುಂಬಿತು ಗೋವರ್ಧನಗಿರಿ
ಯಾದವ ಕುಲ ಘನ ಒರೆದಿತು ಖಗ ಕುಲ
ಸಾಧಿಸಿ ನೋಡಲು ಕೃಷ್ಣನ ಈಗಲೆ
ಸಾಧ್ಯವೇನೇ ಬೃಂದಾವನದೊಳು

ಮೇವು ಮರೆತವು ಗೋವುಗಳೆಲ್ಲವು

ಸಾವಧಾನದಿ ಹರಿದಳು ಯಮುನಾ
ಆವು ಕಾವುತಲಿ ಗೋವಳರೆಲ್ಲರ
ಹಾವ ಭಾವದಲಿ ಬೃಂದಾವನದೊಳು

ಸುರರು ಸುರಿದರಾಕಾಶದಿ ಸುಮಗಳ
ಸರಿದು ಪೋಗಿ ನೋಡೆ ಬೃಂದಾವನದೊಳು
ಸಾರಿ ಸಾರಿ ಈ ಕೃಷ್ಣನು ಈಗಲೆ
ತುರುಗಳ ಕಾಯ್ವ ಕದಂಬ ವನದೊಳು

ಇದರಲ್ಲಿನ ಕನ್ನಡ ಪದಗಳ ಪ್ರಯೋಗ, ಪ್ರಾಸ, ವರ್ಣನೆಯ ರೀತಿ ಮನ ಮುಟ್ಟುತ್ತವೆ.

ಕೃಷ್ಣನ ಬಾಲಲೀಲೆಗಳನ್ನು ವರ್ಣಿಸುವ ಪದಗಳು ದಾಸಸಾಹಿತ್ಯದಲ್ಲಿ ಅಸಂಖ್ಯಾತವಾಗಿವೆ. ಇವುಗಳಲ್ಲಿನ ವಾತ್ಸಲ್ಯಭಾವ, ಮಾಧುರ್ಯ, ಅದ್ಭುತರಸದಿಂದ ಕೂಡಿದ ಕಾಳಿಂಗ ಮರ್ದನ, ಗೋವರ್ಧನೋದ್ಧರಣ, ಪೂತನಿಸಂಹಾರಗಳ ವರ್ಣನೆ ಹಾಸ್ಯರಸದಿಂದ ಕೂಡಿದ ಕೃಷ್ಣನ ಚೇಷ್ಟೆಗಳು, ರಾಸಕ್ರೀಡೆಯ ಶೃಂಗಾರರಸ—ಇವು ಕನ್ನಡ ನಾಡಿನ ಜನರಿಗೆಲ್ಲ ವಿಶೇಷವಾಗಿ ತಾಯಂದಿರಿಗೆ— ಬಹಳ ಪ್ರಿಯವಾದುವು. ಅತ್ಯಂತ ಸರಳವಾದ ಭಾಷೆಯಲ್ಲಿ ರಚಿತವಾಗಿರುವ ಅನೇಕ ಪದಗಳು ಕನ್ನಡದ ಶಿಶು ಸಾಹಿತ್ಯಕ್ಕೆ ಉತ್ತಮವಾದ ಕೊಡುಗೆಗಳು. ಲಾಲಿ ಜೋಗುಳ ಪದಗಳನ್ನು ಹಾಡಿ ನಮ್ಮ ಮಾತೆಯರು ತಮ್ಮ ಮಕ್ಕಳನ್ನು ನಿದ್ದೆ ಹೋಗಿಸಿದ್ದಾರೆ. ಈ ಹಾಡುಗಳು ನಮ್ಮ ಜನರ ಅಂತಃಕರಣಗಳನ್ನು ಶುದ್ಧಗೊಳಿಸುವೆ. ರಸಮಯವನ್ನಾಗಿಮಾಡಿವೆ.

ಶ್ರೀರಾಗದಲ್ಲಿರುವ ಈ ಹಾಡನ್ನು ಉದಾರಿಸಬಹುದು :

ಬಂದನೇನೆ ರಂಗ ಬಂದನೇನೆ–ಎನ್ನ
ತಂದೆ ಬಾಲಕೃಷ್ಣ ನವನೀತ ಚೋರ

ಇಲ್ಲಿನ ವರ್ಣನೆ, ಅನುಕರಣ ಶಬ್ದಗಳು ಉತ್ಸಾಹಪೂರ್ಣವಾಗಿವೆ. ವಯಸ್ಸಾದವರನ್ನೂ ಮಕ್ಕಳೊಂದಿಗೆ ಕುಣಿಯುವಂತೆ ಮಾಡುತ್ತವೆ.

ಹೀಗೆಯೇ 'ಕೈಯ ತೋರೊ', 'ಅಮ್ಮನಿಮ್ಮ', 'ಗುಮ್ಮನ ಕರೆಯದಿರೆ', 'ಪೋಗದಿರೆಲೊ ರಂಗ', 'ದೂರುಮಾಡುವರೇನ ರಂಗಯ್ಯನ' ಎಂಥ ಪುಣ್ಯವೆ ನಿನ್ನದೆಂಥ ಭಾಗ್ಯವೆ ಗೋಪಿ', 'ಜಗದುದ್ಧಾರನ ಆಡಿಸಿದಳು ಯಶೋದೆ', 'ಕೂಸಿನ ಕಂಡೀರಾ', 'ಕೃಷ್ಣ ನೀ ಬೇಗನೆ ಬಾರೊ', 'ತಾರಕ್ಕ ಬಿಂದಿಗೆ ನೀರಿಗೆ ಹೋಗುವ'—

ಹೀಗೆ ಆರಂಭವಾಗುವ ಪದಗಳು ಬಹು ಜನಪ್ರಿಯವಾಗಿವೆ. ನೃತ್ಯಕ್ಕೂ ಅಭಿನಯಕ್ಕೂ ಬಳಸಿಕೊಳ್ಳಲಾಗಿವೆ.

ಈ ಹಾಡುಗಳು ಬೃಂದಾವನವನ್ನೂ, ಮಧುರೆಯನ್ನೂ, ಯಮುನಾ ನದಿಯನ್ನೂ ನಮ್ಮ ಬಾಗಿಲುಗಳ ಬಳಿ ತಂದು ನಿಲ್ಲಿಸಿವೆ. ಯಶೋದೆ ಕನ್ನಡ ಮಹಿಳೆಯಂತೆ ಕನ್ನಡ ಕಂದನಾದ ಕೃಷ್ಣನನ್ನು ಕುರಿತು ಹಾಡಿದ್ದಾಳೆ. ಪುರಂದರದಾಸರು ತಮ್ಮ ದೇಶಭಕ್ತಿಯ ಭರದಲ್ಲಿ ತುಂಗಭದ್ರೆಯ ಮಹಿಮೆಯನ್ನು ಕುರಿತು 'ತುಂಗ ಮಂಗಳ ತರಂಗೆ' ಹಾಡಿದನ್ನು ಇಲ್ಲಿ ನೆನೆಯಬಹುದು.

ವೃಂದಾವನ, ಬದರಿಕಾಶ್ರಮ, ವಾರಣಾಸಿ ಮುಂತಾದ ಕ್ಷೇತ್ರಗಳ ಪಾವಿತ್ರ್ಯತೆಗೆ ತುಂಗಭದ್ರೆ ಏನೂ ಕಡಿಮೆಯಿಲ್ಲವೆಂದು ಸಾರಿದ್ದಾರೆ. ಭರತಖಂಡದಲ್ಲಿನ ಪುಣ್ಯಕ್ಷೇತ್ರಗಳೆಲ್ಲವೂ ನಮ್ಮವೇ— ಈ ಭಾವನೆ ಬೆಳೆಯುವಂತೆ ಈ ಹಾಡುಗಳು ಜನರ ಮನಸ್ಸನ್ನು ವಿಕಾಸಗೊಳಿಸಿವೆ.

ಈವರೆಗೂ ಪ್ರಸ್ತಾಪಿಸಿರುವ ಮತ್ತು ಉದಾಹರಿಸಿರುವ ಪದಗಳು ದಾಸರು ರಚಿಸಿದ ಬಿಡಿ ಹಾಡುಗಳಿಂದ ಆಯ್ದವು. ಇವೇ ಅಲ್ಲದೆ ಈ ದಾಸ ಶ್ರೇಷ್ಠರು ಗ್ರಂಥಗಳನ್ನೂ, ಖಂಡಕಾವ್ಯಗಳನ್ನೂ, ಸಂಸ್ಕೃತದಿಂದ ಕನ್ನಡ ಅನುವಾದಗಳನ್ನೂ ಮಾಡಿದ್ದಾರೆ. ಇವೂ ಕನ್ನಡ ಸಾಹಿತ್ಯಕ್ಕೆ ಅವರು ನೀಡಿದ ಉತ್ತಮ ಕಾಣಿಕೆಗಳೇ.

ಶ್ರೀಪಾದರಾಯರು ಭಾಗವತ ಪುರಾಣದಿಂದ ನರಸಿಂಹಾವತಾರದ ಪ್ರಕರಣವನ್ನೂ ಭ್ರಮರ ಗೀತೆಯನ್ನೂ ಹಾಡಲು ಯೋಗ್ಯವಾದ ಕನ್ನಡ ಪದ್ಯಗಳಲ್ಲಿ ಅನುವಾದಿಸಿದ್ದಾರೆ. ಇವು ಸ್ವತಂತ್ರ ಕಾವ್ಯಗಳಂತೆ ರಸವತ್ತಾಗಿವೆ.

ವ್ಯಾಸತೀರ್ಥರ ಕನ್ನಡ ಗ್ರಂಥಗಳು ಯಾವುದೂ ಉಪಲಬ್ಧವಿಲ್ಲ. ಆದರೆ ಅವರ ರಚಿಸಿದ್ದೆಂದು ಹೇಳಲಾದ ಭಗವದ್ಗೀತೆಯ ಪಾಠ ಸುಮಾರು 20 ಪದ್ಯಗಳಲ್ಲಿ ಪ್ರಚಲಿತವಾಗಿದೆ. ಇದು ನಮ್ಮ ಮಹಿಳೆಯರ ನಿತ್ಯ ಪಠಣಕ್ಕೆ ಅನುಕೂಲವಾಗಿದೆ.

ಪುರಂದರದಾಸರು ಯಕ್ಷಗಾನದ ರೀತಿಯಲ್ಲಿ 'ಅನಸೂಯಾಚರಿತ್ರೆ' ಮತ್ತು 'ಸುದಾಮ' ಚರಿತ್ರೆಗಳನ್ನು ರಚಿಸಿದರೆಂದು ಪ್ರತೀತಿ. ಅಲ್ಲಲ್ಲಿ ನಮ್ಮ ಹೆಣ್ಣುಮಕ್ಕಳು ಇದನ್ನು ಪಾಠಮಾಡಿದ್ದಾರಂತೆ. ಇವಿನ್ನೂ ಮುದ್ರಣಕ್ಕೆ ಬಂದಿಲ್ಲ.

ಕನಕದಾಸರು ನಮ್ಮ ದಾಸವರ್ಯರಲ್ಲಿ ಉತ್ತಮ ಕವಿಗಳೆಂದು ಪ್ರಸಿದ್ಧರಾಗಿದ್ದಾರೆ. ಇವರ 'ಮೋಹನ ತರಂಗಿಣಿ' ನಲವತ್ತೆರಡು ಸಂಧಿಗಳಲ್ಲಿ ರಚಿತವಾದ ಒಂದು ಸಾಂಗತ್ಯ. ಇದರ ಕಥೆ, ರುಕ್ಮಿಣಿ ಸ್ವಯಂವರ, ಕಾಮದಹನ, ಪದ್ಯುಮ್ನ, ಅನಿರುದ್ಧ ರಜನನ, ಶಂಬರಾಸುರ ಸಂಹಾರ ಉಷಾಪರಿಣಯ ಇವುಗಳನ್ನು ಜನರು ಆಡುವ ಮಾತುಗಳಲ್ಲಿ ಚಿತ್ರಿಸುತ್ತವೆ. ವರ್ಣನೆಗಳನ್ನು ವಾಸ್ತವಿಕವಾಗಿಯೂ ರಸಮಯವನ್ನಾಗಿಯೂ ಮಾಡಿದ್ದಾರೆ. ದ್ವಾರಕಾಪುರಿಯನ್ನು ವರ್ಣಿಸುವ ವ್ಯಾಜದಿಂದ

ಆಗಿನ ವಿಜಯನಗರದ ವೈಭವವನ್ನೇ ಕವಿ ವರ್ಣಿಸಿದ್ದಾರೆಂದು ಹೇಳಬಹುದು. ದ್ವಾರಕೆಯ ಶ್ರೀಕೃಷ್ಣನನ್ನು ವರ್ಣಿಸುವಾಗ ವಿಜಯನಗರದ ಸಾಮ್ರಾಟನಾದ ಶ್ರೀಕೃಷ್ಣ ದೇವರಾಯನನ್ನು ನೆನಪಿಗೆ ತರುತ್ತಾರೆ. ಅಂದಿನ ಜನಜೀವನದ ಅನೇಕ ಸ್ವಾರಸ್ಯವಾದ ವಿವರಗಳು ಇದರಲ್ಲಿ ದೊರೆಯುತ್ತವೆ. ಕನಕದಾಸರು ರಚಿಸಿದ 'ನಳಚರಿತ್ರೆ' ಬಹು ಜನಪ್ರಿಯವಾದದ್ದು. 481 ಭಾಮಿನಿಷಟ್ಪದಿ ಪದ್ಯಗಳನ್ನೊಳಗೊಂಡ ಈ ಕಥಾ ಕಾವ್ಯ ಸರಳವಾದ ನುಡಿಗಟ್ಟಿನಲ್ಲಿ ಕಥೆಯನ್ನು ರಸಭರಿತ ವರ್ಣನೆಗಳೊಂದಿಗೆ ಸಾಗಿಸುತ್ತದೆ. ರಾಗಿಯ ಪೌಷ್ಟಿಕ ಗುಣವನ್ನು ಅದು ತಿರಸ್ಕಾರಕ್ಕೆ ಯೋಗ್ಯವಲ್ಲವೆಂದೂ ಬೋಧಿಸಲು ಕನಕದಾಸರು 152 ಭಾಮಿನಿ ಷಟ್ಪದಿ ಪದ್ಯಗಳಲ್ಲಿ ಒಂದು ವಿಡಂಬನ ಖಂಡಕಾವ್ಯವೆಂದು ಹೇಳಬಹುದಾದ ಸ್ವಕಪೋಲಕಲ್ಪಿತವಾದ ಪ್ರಕರಣವನ್ನೇ ಹೆಣೆದರು. ರಾಮಾಯಣದ ಕಥೆಯೊಂದಿಗೆ ಇದನ್ನು ಜೋಡಿಸಿದರು. 'ರಾಘವ' ಎಂಬ ಪದದಿಂದ 'ರಾಗಿ' ಹುಟ್ಟಿದ್ದೆಂದು ಊಹಿಸಿಕೊಂಡು 'ರಾಮಧಾನ್ಯ ಚರಿತ್ರೆ' ಎಂದು ಇದಕ್ಕೆ ಹೆಸರಿಟ್ಟರು. ಇದರಲ್ಲಿನ ಚಮತ್ಕಾರ – ರಾಗಿ, ಅಕ್ಕಿಗಳ ಸಂವಾದ - ಇವೆಲ್ಲವೂ ದಾಸರ ಸಹಜ ಹಾಸ್ಯ ಪ್ರವೃತ್ತಿಗೂ ಕಲ್ಪನಾಶಕ್ತಿಗೂ ಉತ್ತಮ ನಿದರ್ಶನ. ದಾಸರು ರಚಿಸಿದ 'ಹರಿಭಕ್ತಿಸಾರ' – 111ಭಾಮಿನಿಷಟ್ಪದಿಗಳಲ್ಲಿ ಅವರು ಭಕ್ತಿಸಾಹಿತ್ಯಕ್ಕೆ ನೀಡಿದ ಉತ್ತಮ ಕೊಡುಗೆ.

ವಾದಿರಾಜರು ಉದ್ದಾಮ ಸಂಸ್ಕೃತ ಪಂಡಿತರು. ಸಂಸ್ಕೃತದಲ್ಲಿ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಆದರೆ ಅವರೂ ಕನ್ನಡದಲ್ಲಿ ದೇವರನಾಮಗಳೇ ಅಲ್ಲದೆ 'ಸ್ವಪ್ನ ಪದ', 'ಗುಂಡಕ್ರಿಯೆ', 'ವೈಕುಂಠ ವರ್ಣನೆ' ಮತ್ತು 'ಲಕ್ಷ್ಮೀ ಶೋಭನಪದ' ಎಂಬ ಭಕ್ತಿಭಾವದಿಂದ ಕೂಡಿದ ಕೃತಿಗಳನ್ನೂ ರಚಿಸಿದ್ದಾರೆ.

ಪ್ರಸನ್ನ ವೆಂಕಟದಾಸರು ಭಾಗವತಪುರಾಣವನ್ನು ಹಾಡುಗಳಲ್ಲಿಯೂ, ವೃತ್ತಗಳಲ್ಲಿಯೂ, ದ್ವಿಪದಿಗಳಲ್ಲಿಯೂ ಕನ್ನಡದಲ್ಲಿ ಅನುವಾದಿಸಿದ್ದಾರೆ.

ಜಗನ್ನಾಥದಾಸರು ರಚಿಸಿದ 'ಹರಿಕಥಾಮೃತಸಾರ' ಭಾಗವತ ಧರ್ಮದ ಕೈಪಿಡಿಯಾಗಿದೆ. ವಿಶೇಷವಾಗಿ ಮಾಧ್ವಮತದ ಅನುಯಾಯಿಗಳಿಗೆ ಆ ಮತದ ಸಿದ್ಧಾಂತಗಳನ್ನು ಸುಲಭ ಭಾಷೆಯಲ್ಲಿ ಬೋಧಿಸುವ ಆದರಣೀಯ ಗ್ರಂಥವಾಗಿದೆ.

ಮೇಲೆ ಹೇಳಿರುವ ಗ್ರಂಥಗಳೆಲ್ಲ ಈ ವರೆಗೆ ಬೆಳಕಿಗೆ ಬಂದು ಪ್ರಕಟವಾಗಿರುವ ಗ್ರಂಥಗಳು. ಇವೇ ಅಲ್ಲದೆ ದಾಸ ಕೂಟದವರು ರಚಿಸಿದ, ಆಯಾ ಮನೆತನಗಳಲ್ಲಿ, ಪ್ರದೇಶಗಳಲ್ಲಿ ಮಾತ್ರ ಉಳಿದಿರುವ, ಪ್ರಕಾಶಕ್ಕೆ ಬಾರದೆ ಇರುವ ಗ್ರಂಥಗಳೆಷ್ಟೊ ಇರಬಹುದು. ಈಚೆಗೆ ಪುರಂದರದಾಸರ ಮತ್ತು ಕನಕದಾಸರ ನಾಲ್ಕನೆಯ ಶತಮಾನೋತ್ಸವದಿಂದ ಉಂಟಾಗಿರುವ ಜಾಗೃತಿಯ ಫಲವಾಗಿ ದಾಸಸಾಹಿತ್ಯ ಪ್ರಕಾಶಕ್ಕೆ ಬರುವುದೆಂದು ಆಶಿಸಬಹುದಾಗಿದೆ.

## ಸಂಗೀತ ಸೇವೆ

ಹರಿದಾಸರು ಕರ್ನಾಟಕ ಸಂಗೀತದ ಅಭ್ಯುದಯಕ್ಕೆ ಮಾಡಿದ ಸೇವೆ ಮೌಲಿಕ ವಾದುದು, ವಿಶಿಷ್ಟವಾದುದು. ಪುರಂದರದಾಸರನ್ನು ದಕ್ಷಿಣ ದೇಶದಲ್ಲೆಲ್ಲ 'ಕರ್ಣಾಟಕ ಸಂಗೀತದ ಪಿತಾಮಹರೆಂದು ಗೌರವಿಸುತ್ತ ಬಂದಿದ್ದಾರೆ. ಇದು ಅಕ್ಷರಶಃ ನಿಜವಾದ ಪ್ರಶಂಸೆ.

ನಿರ್ದಿಷ್ಟ ಸ್ವರಗಳ ಸಂಚಾರದಿಂದ ಕೂಡಿದ ರಾಗಗಳ ಕಲ್ಪನೆ ಮತ್ತು ತಾಳ ಬದ್ಧತೆ ಭಾರತೀಯ ಸಂಗೀತದ ವೈಶಿಷ್ಟ್ಯವೆಂದು ಹೇಳಬಹುದು. 'ನಾಟ್ಯಶಾಸ್ತ್ರ'ದ ಕರ್ತೃವಾದ ಭರತ ಮುನಿಯ ಕಾಲದಿಂದ ಅಂದರೆ ವಿದ್ವಾಂಸರ ಅಭಿಪ್ರಾಯದಂತೆ ಸುಮಾರು ಕ್ರಿ. ಪೂ. ವಾ. ಕ್ರಿ. ಶ. ಮೊದಲನೆಯ ಶತಮಾನದಿಂದ ನಮ್ಮ ದೇಶದ ಸಂಗೀತ ಶಾಸ್ತ್ರ ಬೆಳೆದುಬಂದಿದೆ. ಈ ಶಾಸ್ತ್ರಗ್ರಂಥಗಳ ಪೈಕಿ 13ನೆಯ ಶತಮಾನದಲ್ಲಿ ದೇವಗಿರಿ ಯಾದವ ವಂಶದ ಅರಸರ ಆಸ್ಥಾನದಲ್ಲಿದ್ದ ಶಾರ್ಙ್ಗದೇವನು ರಚಿಸಿದ 'ಸಂಗೀತ ರತ್ನಾಕರ' ಒಂದು ಮುಖ್ಯವಾದ ಪ್ರಮಾಣಿಕ ಗ್ರಂಥ. ಈ ಗ್ರಂಥವನ್ನೇ ಔತ್ತರೇಯರೂ ದಾಕ್ಷಿಣಾತ್ಯರೂ ತಮ್ಮ ಸಂಗೀತ ಪದ್ಧತಿಗಳಿಗೆ ಆಧಾರವೆಂದು ಒಪ್ಪಿಕೊಂಡಿದ್ದಾರೆ. ಈ ಗ್ರಂಥದಲ್ಲಿ ಸುಮಾರು 260 ರಾಗಗಳನ್ನು ಪ್ರಸ್ತಾಪಿಸಲಾಗಿದೆ, ಆದರೆ ಅವುಗಳಲ್ಲಿ 52 ರಾಗಗಳನ್ನು ಮುಖ್ಯವೆಂದು ಆರಿಸಿ ಅವುಗಳ ವಿವರಣೆ ಕೊಡಲಾಗಿದೆ. ಅಂತೆಯೇ 108 ತಾಳಗಳನ್ನೂ ಪ್ರಸ್ತಾಪಿಸಲಾಗಿದೆ. ದೇವಗಿರಿ 14ನೆಯ ಶತಮಾನದಲ್ಲಿ ಮುಸಲ್ಮಾನರಿಗೆ ವಶವಾದ ಮೇಲೆ ಕರ್ಣಾಟಕ ದೇಶದವನಾದ ಗೋಪಾಲನಾಯಕನು ಈ ಆಸ್ಥಾನವನ್ನು ಸೇರಿ ಔತ್ತರೇಯ ಪದ್ಧತಿಗೆ ಬುನಾದಿಯನ್ನು ಹಾಕಿಕೊಟ್ಟನು. ದೆಹಲಿಯಲ್ಲಿದ್ದ ಅಮೀರ ಖುಸ್ರು ಪಾರಸೀದೇಶದ ಕೆಲವು ಸಂಗೀತ ಲಕ್ಷಣಗಳನ್ನು ಇದರೊಂದಿಗೆ ಬೆರೆಸಿ ಹಿಂದುಸ್ತಾನಿ ಸಂಗೀತದ ಶೈಲಿಯ ಬೆಳವಣಿಗೆಗೆ ಕಾರಣನಾದನು. ಆ ಸಂಗೀತ ಪದ್ಧತಿಯಲ್ಲಿ ಗಾಯಕನ ಮನೋಧರ್ಮಕ್ಕೂ ರಾಗದ ಸ್ವರಗಳ ಶ್ರುತಿಬದ್ಧ ವಿನ್ಯಾಸಕ್ಕೂ ಅನಿಬದ್ಧವಾದ ಆಲಾಪನೆ ಬಿರ್ಕಾಗಳಿಗೂ ಬಹಳ ಪ್ರಾಶಸ್ತ್ಯ ಕೊಡಲಾಯಿತು. ಇದರಿಂದ ಹಾಡಿನ ಸಾಹಿತ್ಯ ಗೌಣಸ್ಥಾನ ಪಡೆಯಿತು.

ಹಿಂದುಸ್ತಾನಿ ಮತ್ತು ಕರ್ಣಾಟಕ ಸಂಗಿತ ಪದ್ಧತಿಗಳು ರಾಗ, ಸ್ವರ ಸಮುಚ್ಚಯ, ಲಯ—ಈ ವಿಷಯಗಳಲ್ಲಿ ಒಂದೇ ಬುಡಕಟ್ಟಿಗೆ ಸೇರಿದ್ದರೂ 14–15ನೇ ಶತಮಾನದ ವೇಳೆಗೆ ಪ್ರತ್ಯೇಕ ರೀತಿಯಲ್ಲಿ ವಿಕಾಸಗೊಂಡವು. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಗಿ ಭದ್ರಗೊಂಡಮೇಲೆ ದಕ್ಷಿಣ ದೇಶದಲ್ಲಿ ಪುರಾತನ ಹಿಂದು ಸಂಸ್ಕೃತಿಯ ವಿಶೇಷಗಳನ್ನು ಪುನರುಜ್ಜೀವನಗೊಳಿಸುವ ಕಾರ್ಯಗಳು ನಡೆದುವು. ಹಿಂದಿನ ಕಾಲದ ಸಂಗೀತ ಮುಂತಾದ ಶಾಸ್ತ್ರಗಳಿಗೆ ವಿಶೇಷವಾದ ಪ್ರೋತ್ಸಾಹ

ದೊರೆಯಿತು, ನೃತ್ಯ ಮುಂತಾದ ಲಲಿತ ಕಲೆಗಳೂ ಹೊಸ ಹುರುಪಿನಿಂದ ಸಮೃದ್ಧ ವಾಗಿ ವಿಜಯನಗರ ಸಾಮ್ರಾಜ್ಯದಲ್ಲಿ ಬೆಳೆದುದಕ್ಕೆ ಸಾಕಷ್ಟು ದಾಖಲೆಗಳಿವೆ. 15 ನೆಯ ಶತಮಾನದ ಮಧ್ಯಭಾಗದಲ್ಲಿ ಚತುರಕಲ್ಲಿನಾಥನು ಸಂಗೀತರತ್ನಾಕರಕ್ಕೆ 'ಕಲಾ ನಿಧಿ' ಎಂಬ ಭಾಷ್ಯವನ್ನು ಬರೆದನು.

ಇದೇ ಕಾಲದಲ್ಲಿಯೇ ವೈಷ್ಣವರ ಭಕ್ತಿಪಂಥವೂ ಭಜನೆ ಕೀರ್ತನೆಗಳನ್ನು ಭಕ್ತಿಯ ಸಾಧನೆಗಾಗಿ ಬಳಸಿಕೊಳ್ಳಲು ಆರಂಭಿಸಿತು. ಜನಸಾಮಾನ್ಯರಿಗೆ ಶಾಸ್ತ್ರೀಯ ವಾದ ಶುದ್ಧ ಸಂಗೀತದ ಮೂಲಕ ಆಧ್ಯಾತ್ಮಿಕ ಮತ್ತು ನೈತಿಕ ಶಿಕ್ಷಣವನ್ನೊದಗಿ ಸಿದ್ದು ಹರಿದಾಸರ ಯಶಸ್ಸು. ಈ ಸಂಗೀತ ಜಾನಪದ ಸಂಗೀತದಂತೆ ಲಘು ಸಂಗೀತವಲ್ಲ. ಶಾಸ್ತ್ರೀಯವಾದ ರಾಗಲಯಬದ್ಧವಾದ ಸಂಗೀತ.

ಲೆಕ್ಕಕ್ಕೆ ಸಂಗೀತಶಾಸ್ತ್ರಕಾರರು ನೂರಾರು ರಾಗಗಳನ್ನು ಪ್ರಸ್ತಾಪಿಸಿದ್ದರೂ ಅವುಗಳಲ್ಲಿ ಕೆಲವೇ ಹೆಚ್ಚಿನ ಅಭ್ಯಾಸವಿಲ್ಲದೆ ಹಾಡಲು ಅನುಕೂಲವಾದುವು, ಜನ ರಂಜಕವಾದುವು, 'ಬತ್ತೀಸು' ರಾಗಗಳೆಂದು ಬಸವಣ್ಣನವರೂ, ಪುರಂದರದಾಸರೂ ಹೇಳಿದ್ದಾರೆ— ಸುಮಾರು ಮೂವತ್ತೆರಡು ರಾಗಗಳು. ಇಂತಹ ರಾಗಗಳಲ್ಲೇ ಶ್ರೀಪಾದರಾಯರೂ, ವ್ಯಾಸತೀರ್ಥರೂ. ಪುರಂದರದಾಸರೂ ತಮ್ಮ ಹಾಡುಗಳನ್ನು ರಚಿಸಿದ್ದಾರೆ. ಅಪೂರ್ವವೂ ಕ್ಲಿಷ್ಟವೂ ಆದ ರಾಗಗಳಲ್ಲಲ್ಲ. ತಾಳಗಳ ವಿಷಯ ದಲ್ಲಿಯೂ ದಾಸವರ್ಯರು ಗ್ರಂಥಗಳಲ್ಲಿ ಹೇಳಿರುವ ನೂರಾರು ತಾಳಗಳ ಬದಲಾಗಿ ಏಳೇ ತಾಳಗಳನ್ನು ಬಳಸಿದರು. ಜನಸಾಮಾನ್ಯರಲ್ಲಿ ಸಂಗೀತದ ಅಭಿರುಚಿ ಹುಟ್ಟಿ ಸಲು ಹೀಗೆ ಸಂಕ್ಷೇಪಗೊಳಿಸುವುದು ಅವಶ್ಯವಾಗಿತ್ತು. ನಮ್ಮ ಕರ್ಣಾಟಕ ಸಂಗೀತ ಪ್ರಚಾರಕ್ಕೆ ಅವರು ಅತ್ಯಮೂಲ್ಯವಾದ ಸೇವೆ ಸಲ್ಲಿಸಿದ್ದಾರೆ.

ಕರ್ಣಾಟಕ ಸಂಗೀತವನ್ನು ಕಲಿಯಲು ಹೊರಡುವ ವಿದ್ಯಾರ್ಥಿಗಳು ಪುರಂದರ ದಾಸರ ಪಿಳ್ಳಾರಿಗೀತೆ ಮತ್ತು ಅಲಂಕಾರಗಳೊಂದಗೆ ಆರಂಭಿಸುತ್ತಾರೆ. ದಕ್ಷಿಣ ದೇಶ ದಲ್ಲೆಲ್ಲ ಈ ಪದ್ಧತಿಯು ರೂಢಿಯಲ್ಲಿದೆ. ಅಂದರೆ 'ಶ್ರೀ ಗಣನಾಥ ಸಿಂಧುರವರ್ಣ' 'ಕುಂದಗೌರ ಗೌರೀವರ' 'ಕೆರೆಯನೀರನು ಕೆರೆಗೆ ಚೆಲ್ಲಿ' ಮತ್ತು 'ಪದುಮನಾಭ ಪರಮಪುರುಷ'— ಈ ನಾಲ್ಕನ್ನೂ ಅಭ್ಯಾಸ ಮಾಡುತ್ತಾರೆ. ಇದೇ ಅಲ್ಲದೆ ಇನ್ನೂ ಕೆಲವು ಲಕ್ಷಣ ಗೀತೆಗಳನ್ನೂ ಪುರಂದರದಾಸರು ರಚಿಸಿದರೆಂಬ ಪ್ರತೀತಿ ಇದೆ. ಈಗ ಉಪಲಬ್ಧವಾಗಿ ರೂಢಿಯಲ್ಲಿರುವವು ಈ ನಾಲ್ಕು ಮಾತ್ರವೇ.

ದಾಸರ ಕಾಲಕ್ಕೆ ಪೂರ್ವದಲ್ಲಿ 'ಖರಹರಪ್ರಿಯ' ರಾಗವನ್ನೇ ಆದಿ–ಅಥವಾ ಶುದ್ಧರಾಗವೆಂದು ಪರಿಗಣಿಸಲಾಗುತ್ತಿತ್ತು. ಆ ರಾಗದ ಅಭ್ಯಾಸದಿಂದ ಸಂಗೀತ ಶಿಕ್ಷಣ ಆರಂಭವಾಗುತ್ತಿತ್ತು. ಈ ರಾಗದಲ್ಲಿ ಬರುವ ಸ್ವರಗಳು ಸ, ರಿ, (ಚತುಶ್ಶ್ರುತಿ), ಗ, ಮ, ಪ, ಧ (ಚತುಶ್ಶ್ರುತಿ), ನಿ (ಕೈಶಿಕಿ). ಎಳೆಯ ಅಭ್ಯಾಸಿಗಳಿಗೆ ಈ

ಅಂತರಗಳುಳ್ಳ ಸ್ವರ ಸ್ಥಾನಗಳನ್ನು ನುಡಿಯುವುದು ಸುಲಭವಾಗಿರಲಿಲ್ಲ. ಪುರಂದರ ದಾಸರು ಈ ಸಂಪ್ರದಾಯವನ್ನು ಬದಲಾಯಿಸಿ ಮಾಯಾಮಾಳವ ಗೌಳವನ್ನೇ ಶುದ್ಧ ರಾಗವೆಂದು ನಿರ್ದೇಶಿಸಿ ಅದನ್ನು ರೂಢಿಗೆ ತಂದರು. ಇದರಲ್ಲಿರುವ ಸ್ವರಗಳು ಈ ರೀತಿ ಇವೆ ;

ಸ, ರಿ1, ಗ3, ಮ1, ಪ, ಧ1, ನಿ3 (ಕಾಕಲಿ)

ಇದೂ ಸಂಪೂರ್ಣರಾಗವೇ – ಅಂದರೆ ಸಪ್ತಸ್ವರಗಳನ್ನೂ ಉಳ್ಳದ್ದು. ಅಭ್ಯಾಸಿಗಳಿಗೆ ಇದರಿಂದ ಹುಟ್ಟಿದ ಮಲಹರಿರಾಗದಲ್ಲಿ ಮೇಲೆ ಹೇಳಿದ ಗೀತೆಗಳನ್ನೂ ರಚಿಸಿ ಕೊಟ್ಟರು. ಮಲಹರಿರಾಗ ಬೆಳಿಗ್ಗೆ ಹೇಳಲು ಯೋಗ್ಯರಾಗವೆಂಬುದೂ ಇದಕ್ಕೊಂದು ಕಾರಣ. ಮಲಹರಿರಾಗದ ಸ್ವರಗಳು ಹೀಗಿವೆ :

ಆರೋಹಣ ; ಸ, ರಿ, ಮ1, ಪ, ಧ1, ಸ

ಅವರೋಹಣ : ಸ, ಧ, ಪ, ಮ1, ಗ3, ರಿ1, ಸ

ತೊಡಕನ್ನುಂಟು ಮಾಡಬಹುದಾದ ಕಾಕಲಿನಿಷಾದವನ್ನೂ, ಆ ರೋ ಹ ಣ ದ ಲ್ಲಿ ಅಂತರ ಗಾಂಧಾರವನ್ನೂ ಇದರಲ್ಲಿ ವರ್ಜಿಸಲಾಗಿದೆ. ಈ ತಳಹದಿಯನ್ನು ಹಾಕಿ ಪುರಂದರದಾಸರು ಕರ್ಣಾಟಕ ಸಂಗೀತದ ಅಭ್ಯಾಸಕ್ಕೆ ದೊಡ್ಡ ಉಪಕಾರವನ್ನು ಮಾಡಿದರು. ಅವರನ್ನು 'ಪಿತಾಮಹ'ರೆಂದು ಕರೆಯಲು ಇದೊಂದು ಕಾರಣ.

ಆ ಕಾಲದಲ್ಲಿ ಶಾಸ್ತ್ರೀಯ ಸಂಗೀತ ಬಹು ಮಟ್ಟಿಗೆ ದೇವತಾಸ್ತೋತ್ರಕ್ಕೂ, ಆಧ್ಯಾತ್ಮಿಕ ವಿಚಾರಕ್ಕೂ ಮೀಸಲಾಗಿತ್ತು. ಈ ಕೃತಿಗಳಿಗೆ ಗೀತೆಗಳು, ಪ್ರಬಂಧಗಳು ಮುಂತಾದ ಹೆಸರುಗಳಿದ್ದವು. ಇದಕ್ಕೆ 'ಜಯದೇವನ ಗೀತ ಗೋವಿಂದ' ಪ್ರಸಿದ್ಧ ವಾದ ನಿದರ್ಶನ.

ಕರ್ಣಾಟಕದಲ್ಲಿ ಮೊಟ್ಟಮೊದಲು ಆಧ್ಯಾತ್ಮಿಕ ವಿಷಯಗಳನ್ನು ಜನರಿಗೆ ಬೋಧಿಸಲು ಕನ್ನಡದಲ್ಲೇ ಪದಗಳನ್ನು ರಚಿಸಿದ ಯಶಸ್ಸು ವೀರಶೈವ ಶರಣರದು. ಇವುಗಳನ್ನು ರಚಿಸಿದವರು ಜ್ಞಾನಿಗಳು, ಭಕ್ತರು, ಅನುಭಾವಿಗಳು. ಎಲ್ಲರೂ ಸಂಗೀತತಜ್ಞರಲ್ಲ, ಕೆಲವು ವೇಳೆ ಈ ವಚನಗಳನ್ನು ಹೇಳಲು ಸಂಗೀತವನ್ನು ಬಳಸಲಾಗಿದ್ದರೂ, ರಾಗ ಮತ್ತು ಲಯ ಲಘುಪ್ರಮಾಣದಲ್ಲಿತ್ತು. ಇವುಗಳಲ್ಲಿ ಸಾಹಿತ್ಯವೇ ಪ್ರಧಾನ, ಸಂಗೀತವೇ ಗೌಣ.*

ಆದರೆ ಹರಿದಾಸರು ತಂಬೂರಿ, ಗೆಜ್ಜೆ, ತಾಳಗಳಿಲ್ಲದೆ ಹೊರಬರುತ್ತಿರಲಿಲ್ಲ.

---

* ಅವರು ಹೇಗೆ ಅದನ್ನು ಹಾಡುತ್ತಿದ್ದರೆಂಬುದಕ್ಕೆ ಯಾವ ಆಧಾರವೂ ದೊರೆತಿಲ್ಲ. (ಸಂ)

ಸಾಹಿತ್ಯ ಎಷ್ಟು ಮುಖ್ಯವೊ ಅಷ್ಟೇ ರಾಗ ತಾಳಗಳೂ ಅವರಿಗೆ ಮುಖ್ಯವಾಗಿದ್ದವು. ಇವೆರಡಕ್ಕೂ ಸರಿಸಮನಾದ ಪ್ರಾಶಸ್ತ್ಯ ಕೊಟ್ಟು ಕನ್ನಡ ರಚನೆಗಳು ಕೇಳುವವರ ಬುದ್ಧಿ ಅಂತಃಕರಣ ಎರಡರ ಮೇಲೂ ಏಕಕಾಲದಲ್ಲಿ ಪ್ರಭಾವ ಬೀರಿ ಅವು ಜನಪ್ರಿಯವಾಗು ವಂತೆ ಮಾಡಿದ ಶ್ರೇಯಸ್ಸು ಹರಿದಾಸರದು. ಇವರಲ್ಲಿ ಆದ್ಯರಾದ ಶ್ರೀಪಾದ ರಾಯರೂ, ವ್ಯಾಸತೀರ್ಥರೂ, ಪುರಂದರದಾಸರೂ ಕರ್ಣಾಟಕ ಸಂಗೀತದ ಪ್ರಥಮ ವಾಗ್ಗೇಯಕಾರರೆಂದು ನಾವು ಕರೆಯಬಹುದು. ಇವರು ರಚಿಸಿದ ಅನೇಕ ಕೃತಿಗಳು ಆಯಾ ರಾಗಗಳಲ್ಲಿ ಲಕ್ಷಣಗೀತೆಗಳಂತಿವೆ. ಕನ್ನಡಭಾಷೆಯನ್ನು ಸಂಗೀತಕ್ಕೆ ಉತ್ತಮ ರೀತಿಯಲ್ಲಿ ಅಳವಡಿಸಿಕೊಂಡರು. ಸಾಧ್ಯವಾದ ಮಟ್ಟಿಗೂ ಸಂಯುಕ್ತಾಕ್ಷರಗಳನ್ನು ಕರ್ಕಶ ಅಕ್ಷರ ಸಮುಚ್ಚಯಗಳನ್ನೂ ವರ್ಜ್ಯ ಮಾಡಿದರು. ಸಂಸ್ಕೃತ ಶಬ್ದಗಳನ್ನು ಉಪಯೋಗಿಸುವಾಗಲೂ ಉಚ್ಚಾರಕ್ಕೆ ಸುಲಭವಾಗುವಂತೆ ಅವುಗಳ ತದ್ಭವಗಳನ್ನು ತೆಗೆದುಕೊಂಡರು. ಉದಾಹರಣೆಗೆ ಬೊಮ್ಮ, ಲಕುಮಿ, ಸರಸತಿ ಇತ್ಯಾದಿ ತಾಳ ಲಯಬದ್ಧವಾಗಿ ಹಾಡುವಾಗ ಸಾಹಿತ್ಯದ ಉಚ್ಚಾರಣೆಗೆ ಸುಲಭವಾಗುವಂತೆ ಲಯ ಬದ್ಧವಾಗುವಂತೆ ಅವರು ರಚಿಸಿದರು. ಸಾಹಿತ್ಯದ ಅರ್ಥ ಕೇಳುವವರಿಗೆ ಪೂರ್ತಿ ಯಾಗಿ ಸಿಗುವಂತೆ ಒಂದು ರಾಗದ ಆವರಣದಲ್ಲಿ ಪದಗಳನ್ನು ರಚಿಸಿದರು.

ದಾಸಸಾಹಿತ್ಯವೆಂದರೆ ಸಾಮಾನ್ಯವಾಗಿ ದೇವರನಾಮಗಳೇ ಬರುತ್ತವೆ. ಇವು ಗಳಲ್ಲಿ ಪಲ್ಲವಿ, ಅನುಪಲ್ಲವಿ, ಅನಂತರ ಕೆಲವು ಚರಣಗಳು, ಮೂರೊ, ಐದೊ, ಏಳೊ ಹೀಗೆ ವಿಷಮ ಸಂಖ್ಯೆಯಲ್ಲಿ ಕೊನೆಯಲ್ಲಿ ಅಂಕಿತನಾಮ, ಪಲ್ಲವಿ, ಅನುಪಲ್ಲವಿ ಗಳಲ್ಲಿ ಹಾಡಿನ ಮುಖ್ಯಭಾವ ಗರ್ಭಿತವಾಗಿರುತ್ತದೆ. ಚರಣಗಳು ಭಾವಗೀತೆಯಂತಿರ ಬಹುದು ಅಥವಾ ಪುರಾಣ ಪ್ರಕರಣಗಳನ್ನು ಪ್ರಸ್ತಾಪಿಸಬಹುದು ಅಥವಾ ಬೋಧನಾ ಪರವಾಗಿದ್ದು ಜ್ಞಾನ, ಭಕ್ತಿ. ವೈರಾಗ್ಯ ನೀತಿ ಮುಂತಾದುವನ್ನು ಉಪದೇಶಿಸ ಬಹುದು. ಪ್ರಾಸ, ಅನುಪ್ರಾಸಗಳನ್ನೊಳಗೊಂಡು ಇವು ಸರಳವಾದ ಭಾಷೆ ಯಲ್ಲಿರುತ್ತವೆ.

ಇವುಗಳನ್ನು ಹೇಗೆ ಹೇಳಬೇಕೆಂದು ಪುರಂದರದಾಸರೇ ತಿಳಿಸಿದ್ದಾರೆ :

ತಾಳ ಬೇಕು, ತಕ್ಕ ಮೇಳ ಬೇಕು
ಶಾಂತವೇಳೆ ಬೇಕು ಗಾನವನ್ನು ಕೇಳಬೇಕೆಂಬುವರಿಗೆ
ಯತಿಪ್ರಾಸವಿರಬೇಕು ಗತಿಗೆ ನಿಲ್ಲಿಸಬೇಕು
ರತಿಪತಿಪಿತನೊಳು ಅತಿಪ್ರೇಮವಿರಬೇಕು
ಗಳ ಶುದ್ಧವಿರಬೇಕು ತಿಳಿದು ಪೇಳಲು ಬೇಕು
ಕಳವಳಬಿಡಲುಬೇಕು ಕಳೆ ಮುಖವಿರಬೇಕು

ಅರಿತವರಿರಬೇಕು ಹರುಷ ಹೆಚ್ಚಲು ಬೇಕು
ಪುರಂದರವಿಠಲನ ಪರದೈವವೆನಬೇಕು

ಪಲ್ಲವಿ, ಅನುಪಲ್ಲವಿ, ಚರಣಗಳು ಇರುವ ಈ ಬಗೆಯ ರಚನೆಯ ಆದ್ಯಕರ್ತರು ಯಾರೊ ಹೇಳಲು ಬರುವಂತಿಲ್ಲ. ಹದಿಮೂರನೆಯ ಶತಮಾನದ ಉತ್ತರಾರ್ಧದಲ್ಲಿದ್ದ ನರಹರಿತೀರ್ಥರ ಈ ರೀತಿಯ ದೇವರನಾಮಗಳು ಎರಡೊ ಮೂರೋ ಇವೆ. ಆದರೆ ಇದನ್ನು ಜನಪ್ರಿಯವನ್ನಾಗಿ ಇಂತಹ ರಚನೆಗೆ ಮಾರ್ಗದರ್ಶಕರಾದವರು ಶ್ರೀಪಾದರಾಯರಾದಿ ಹರಿದಾಸರೆಂದು ಧಾರಾಳವಾಗಿ ಹೇಳಬಹುದು. ಶ್ರೀಪಾದರಾಯರು ಹಲವಾರು ಕೀರ್ತನೆಗಳನ್ನು ರಚಿಸಿದರು. ಆಂಧ್ರರಾದ ತಾಳ್ಳಪಾಕಂ ಅಣ್ಣಮಾಚಾರ್ಯರು ಆ ಕಾಲದಲ್ಲಿ ತಿರುಪತಿಯಲ್ಲಿದ್ದರು. ಅವರಿಗೆ ಶ್ರೀಪಾದರಾಯರಲ್ಲಿ ಅಪಾರ ಗೌರವವಿತ್ತಂತೆ. ಅದೇ ಕಾಲದಲ್ಲಿ—ಅಂದರೆ ಹದಿನೈದನೇ ಶತಮಾನದ ಅಂತಿಮ ವರ್ಷಗಳಲ್ಲಿ ವ್ಯಾಸತೀರ್ಥರು ಹನ್ನೆರಡು ವರ್ಷಗಳಕಾಲ ಶ್ರೀನಿವಾಸದೇವರ ಪೂಜೆಯನ್ನು ತಿರುಪತಿಯಲ್ಲಿ ಮಾಡುತ್ತಿದ್ದರೆಂದು ಹೇಳಲಾಗಿದೆ. ಅವರೂ ಶ್ರೀಪಾದರಾಯರಂತೆ ಹಲವಾರು ಕೀರ್ತನೆಗಳನ್ನು ರಚಿಸಿದರಲ್ಲವೇ. ಅಣ್ಣಮಾಚಾರ್ಯರು ಪ್ರಾಯಶಃ ಈ ರಚನೆಗಳಿಂದ ಸ್ಫೂರ್ತಿ ಪಡೆದು ತೆಲುಗಿನಲ್ಲಿ ಇದೇ ರೀತಿಯ ಕೀರ್ತನೆಗಳನ್ನು ರಚಿಸಲು ಉದ್ಯುಕ್ತರಾದರೆಂದು ಊಹಿಸಬಹುದಾಗಿದೆ. ನಿಜಗುಣಶಿವಯೋಗಿಗಳೂ ಹೀಗೆಯೇ ರಚಿಸಿದರು. ಅನಂತರ ಆಂಧ್ರದೇಶದ ಕ್ಷೇತ್ರಜ್ಞ, ಮತ್ತು ಭದ್ರಾಚಲದ ರಾಮದಾಸರು ಈ ಮಾದರಿಯ ಕೀರ್ತನೆಗಳನ್ನು ರಚಿಸಿದರು. 19 ನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ತ್ರಿಮೂರ್ತಿಗಳಾದ ತ್ಯಾಗರಾಜರು, ಮುತ್ತುಸ್ವಾಮಿದೀಕ್ಷಿತರು ಮತ್ತು ಶ್ಯಾಮಶಾಸ್ತ್ರಿಗಳು, ತಿರುವಾಂಕೂರಿನ ಸ್ವಾತಿ ತಿರುನಾಳ್ ಮಹಾರಾಜರೂ, ಅನಂತರ ಬಂದ ಅನೇಕ ವಾಗ್ಗೇಯಕಾರರು ಇವರ ಕೀರ್ತನೆಗಳಿಗೆಲ್ಲ ಈ ದೇವರನಾಮ ರೀತಿಯೇ ಮಾದರಿ* ಆಯಿತು. 16ನೆಯ ಶತಮಾನದಂತೆ 19ನೆಯ ಶತಮಾನ ಕರ್ಣಾಟಕ ಸಂಗೀತಕ್ಕೆ ಒಂದು ಸುವರ್ಣಯುಗವಾಯಿತು. ಆದರೆ ಸಂಗೀತದ ಭಾಷೆ ತೆಲುಗಾಯಿತು: ಸಾಹಿತ್ಯೋಪಾಸನೆಗಿಂತ ನಾದೋಪಾಸನೆಗೆ ಹೆಚ್ಚು ಪ್ರಾಶಸ್ತ್ಯ ಕೊಡಲಾಯಿತು.

ತ್ಯಾಗರಾಜರು ಪುರಂದರ ದಾಸರ ಪದಗಳಿಂದ ಪ್ರಭಾವಿತರಾಗಿದ್ದರು. ಅವರ ಕೃತಿಯಲ್ಲಿ ದಾಸರನ್ನು ಸ್ಮರಿಸಿಕೊಂಡಿದ್ದಾರೆ, ಅವರ ತಾಯಿ ದಾಸರ ಪದಗಳನ್ನು ಹಾಡುತ್ತಿದ್ದರೆಂದು ಪ್ರತೀತಿ ಇದೆ. ಅಲ್ಲದೆ ತಂಜಾವೂರು, ಮದುರೆ, ಶ್ರೀರಂಗ ಮುಂತಾದ ಪ್ರದೇಶಗಳಲ್ಲಿ ಅನೇಕ ಕನ್ನಡ ಮನೆತನಗಳಿದ್ದುವು. ಹರಿದಾಸರು ಇಲ್ಲೆಲ್ಲ

* ತಳಹದಿ (ಸಂ)

ದೇವರನಾಮಗಳನ್ನು ಹಾಡುತ್ತ ಮಧುಕರಿವೃತ್ತಿಯನ್ನು ಮಾಡುತ್ತಿದ್ದರೆಂದು ಹೇಳ ಬಹುದು. ಆ ಹೊರನಾಡುಗಳಲ್ಲಿ ನೆಲೆಸಿದ್ದ ಕನ್ನಡಿಗರಿಗೆ ಕನ್ನಡ ಭಾಷೆಯ ಸಂಪರ್ಕ ಈ ಮೂಲಕವಾಗುತ್ತಿತ್ತು. ಇತರರಿಗೆ ಕನ್ನಡ ಭಾಷೆಯ ಪ್ರಚಾರವೂ ತಕ್ಕ ಮಟ್ಟಿಗೆ ಆಗುತ್ತಿತ್ತು. ಯಾವ ಭಾಷಾವೈಷಮ್ಯವೂ ಇಲ್ಲದ ಕಾಲ ಅದು.

ಕನ್ನಡ ದೇವರನಾಮಗಳಿಗೂ, ಅನಂತರ ವಿಪುಲವಾಗಿ ಅದರ ಮಾದರಿಯಲ್ಲಿ ಬೆಳೆದ ತೆಲುಗು ಕೀರ್ತನೆಗಳಿಗೂ ಪ್ರಸ್ತುತ ಪಡಿಸುವ ರೀತಿಯಲ್ಲಿ ಬಹಳ ಅಂತರವಿದೆ. ಹಿಂದೆ ಹೇಳಿರುವಂತೆ ಹರಿದಾಸರು ಸಾಹಿತ್ಯಕ್ಕೂ ಸಂಗೀತಕ್ಕೂ ಅರ್ಥಕ್ಕೂ ನಾದಕ್ಕೂ ಸಮಾನವಾದ ಪ್ರಾಶಸ್ತ್ಯ ಕೊಟ್ಟರು ಕೆಲವೇ ರಕ್ತಿರಾಗಗಳನ್ನು ಬಳಸುತ್ತಿದ್ದರು. ಪುರಂದರದಾಸರು ದಕ್ಷಿಣ ದೇಶದಲ್ಲಿ ಹೆಚ್ಚು ಪ್ರಚಾರದಲ್ಲಿಲ್ಲದಿದ್ದ ತೋಡಿ, ಮತ್ತು ಕಲ್ಯಾಣಿಯನ್ನೂ ಜನಪ್ರಿಯವನ್ನಾಗಿ ಮಾಡಿದರೆಂದು ಕೆಲವು ವಿದ್ವಾಂಸರ ಅಭಿ ಪ್ರಾಯ. ಒಂದು ದೇವರನಾಮದಲ್ಲಿ ಪುರಂದರದಾಸರು ಕೆಲವು ರಾಗಗಳ ಪಟ್ಟಿ ಮಾಡಿದ್ದಾರೆ. ಈ ರಾಗಗಳನ್ನು ಶ್ರೀ ಕೃಷ್ಣನು ತನ್ನ ಕೊಳಲಿನಲ್ಲಿ ನುಡಿಸಿ ಗೋಕು ಲದ ಜನರು ಮೈಮರೆಯುವಂತೆ ಮಾಡುತ್ತಿದ್ದನಂತೆ: “ಮಾರವಿ, ದೇಶಿ, ಗುರ್ಜರಿ, ಭೈರವಿ ಗೌಳಿ, ನಾಟೀ, ಸಾವೇರಿ, ಆಹಿರಿ, ಪೂರ್ವಿ, ಕಾಂಬೋದಿ, ಪಾಡಿ, ದೇಶಾಕ್ಷಿ, ಶಂಕರಾಭರಣ, ಮಾಳವ, ವರಾಳಿ, ಕಲ್ಯಾಣಿ, ತೋಡಿ, ಮುಖಾರಿ, ಮರಳಿ(?) ವಸಂತ, ಬೌಳಿ, ಧನ್ಯಾಸಿ, ಸೌರಾಷ್ಟ್ರ, ಗುಂಡಕ್ರಿಯ, ರಾಮಕ್ರಿಯ, ಮೇಘ, ಕುರಂಜಿ,” ಈ ರಾಗಗಳಲ್ಲಿ ಅನೇಕ ಈಗಲೂ ಕರ್ನಾಟಕ ಸಂಗೀತದಲ್ಲಿ ಪ್ರಚಲಿತವಾಗಿವೆ. ಇಂತಹ ರಕ್ತಿರಾಗಗಳಲ್ಲಿ ದೇವರನಾಮಗಳನ್ನು ಪಾರಮಾಡಿ ದಾಸ ಪರಂಪರೆಗೆ ಸೇರಿದವರು ಹಾಡುತ್ತ—ಪದೇ ಪದೇ ಕೇಳುವುದರಿಂದ ಜನರ ಕಿವಿಗೆ ಸಂಗೀತದ ಸಂಸ್ಕಾರವನ್ನು ಒದಗಿಸುತ್ತಿದ್ದರು. ಹಾಡುವ ದಾಸರೂ ಸಂಗೀತ ಶಾಸ್ತ್ರದಲ್ಲಿ ಪ್ರವೀಣರಾಗಿರಬೇಕಾಗಿರಲಿಲ್ಲ. ಸ್ಥೂಲವಾಗಿ ಆ ರಾಗದ ಸಂಚಾರವನ್ನು ತಿಳಿದಿದ್ದರೆ ಸಾಕಾಗಿತ್ತು. ಕೇಳುವವರೂ ಆ ಧಾಟಿಯನ್ನು ಮೆಲುಕು ಹಾಕಿ ಕಲಿತು ಬಿಡುತ್ತಿದ್ದರು. ಈ ಬಗೆಯಲ್ಲಿ ನಮ್ಮ ಮಹಿಳೆಯರು, ಯಾವ ಕ್ರಮವಾದ ಸಂಗೀತ ಶಿಕ್ಷಣವನ್ನೂ ಪಡೆಯದೆಯೇ, ದಾಸರ ಪದಗಳನ್ನು ರಾಗ ತಾಳಗಳ ಶುದ್ಧಿಯಿಂದ ಹೇಳಬಲ್ಲವರಾಗಿದ್ದರು ಮತ್ತು ಇದ್ದಾರೆ. ಆ ಧಾಟಿಯಲ್ಲಿ ಮತ್ತೊಂದು ಹಾಡನ್ನು ಕೇಳಿದರೆ ಆ ರಾಗವನ್ನು ಗುರುತಿಸುತ್ತಿದ್ದರು. ಹೀಗೆ ಕರ್ಣಾಟಕ ಸಂಗೀತದ ಕೆಲವು ರಕ್ತಿರಾಗಗಳ ಧಾಟಿ ಸಾಮಾನ್ಯ ಜನರಿಗೂ ಅರಿವಾಗುತ್ತಿತ್ತು. ಸ್ವರಜ್ಞಾನವಿಲ್ಲ ದಿದ್ದರೂ ರಾಗದ ಸ್ವರೂಪವನ್ನು ಬಲ್ಲವರಾಗಿದ್ದರು.

ದೇವರ ನಾಮಗಳನ್ನು ಹಾಡುವಾಗ ದಾಸರು ಸಂಗೀತದ ಅಂಶಗಳನ್ನು ವಿಸ್ತ ರಿಸಿ, ಕಲ್ಪಿತ ಸ್ವರಗಳನ್ನಾಗಲಿ, ಬಾರಿ ಬಾರಿಗೆ ಉಚ್ಚರಿಸುವ 'ಸಂಗತಿ' ಗಳನ್ನಾಗಲಿ,

ಹಾಕುತ್ತಿರಲಿಲ್ಲ. ಮಾತಿನ ಅರ್ಥವನ್ನು ಗ್ರಹಿಸಲು ಯಾವ ಅಡ್ಡಿಯೂ ಬರದಂತೆ ಸಂಗೀತದ ಅಂಶವನ್ನು ಹಿತವಾಗಿಯೂ ಮಿತವಾಗಿಯೂ ಬೆರೆಸುತ್ತಿದ್ದರು. ಮೇಲೆ ಉದಾಹರಿಸಿರುವ ಪುರಂದರದಾಸರ ಪದ ಇದನ್ನೇ ಒತ್ತಿಹೇಳುತ್ತದೆ. ಸಂಗೀತದ ಆರ್ಭಟವನ್ನು ಮಾಡುವವರಿಗೆ ಮತ್ತೊಂದು ಹಾಡಿನಲ್ಲಿ ಅವರು ಎಚ್ಚರಿಕೆ ಕೊಟ್ಟಿದ್ದಾರೆ :

"ಕೇಳನೋ ಹರಿತಾಳನೋ
ತಾಳಮೇಳಗಳಿದ್ದು ಪ್ರೇಮವಿಲ್ಲದಗಾನ

ತಂಬೂರಿ ಮೊದಲಾದ ಅಖಿಲವಾದ್ಯಗಳಿದ್ದು
ಕಂಬುಕೊಳಲು ಧ್ವನಿ ಸ್ವರಗಳಿದ್ದು
ತುಂಬುರು ನಾರದರ ಗಾನ ಕೇಳುವ ಹರಿ
ನಂಬಲಾರ ಈ ಡಂಭಕರ ಕೂಗಾಟ

ನಾನಾಬಗೆಯ ರಾಗ ಭಾವ ತಿಳಿದು ಸ್ವರ
ಜ್ಞಾನ ಮನೋಧರ್ಮ ಜಾತಿಯಿದ್ದು
ದಾನವಾರಿಯ ದಿವ್ಯನಾಮ ರಹಿತವಾದ
ಹೀನ ಸಂಗೀತ ಸಾಹಿತ್ಯಕ್ಕೆ ಮನವಿತ್ತು

ಅಡಿಗಡಿಗಾನಂದ ಬಾಷ್ಪ ಪುಳಕದಿಂದ
ನುಡಿ ನುಡಿಗೆ ಶ್ರೀಹರಿಯೆನ್ನುತ
ದೃಢ ಭಕ್ತರನು ಕೂಡಿ ಹರಿಕೀರ್ತನೆ ಹಾಡಿ
ಕಡೆಗೆ ಪುರಂದರ ವಿಠಲನೆಂದರೆ ಕೇಳ್ವ

ಇಲ್ಲಿ ದಾಸರು ಕೀರ್ತನೆ ಹಾಡುವ ಮೂಲ ಉದ್ದೇಶವನ್ನೂ ಸಂಗೀತದ ಮಿತಿಯನ್ನೂ ಸ್ಪಷ್ಟಪಡಿಸಿದ್ದಾರೆ. ತ್ಯಾಗರಾಜರಂತಹಮಹಾನುಭಾವರಕೃತಿಗಳನ್ನು ಹಾಡುವ ವಿದ್ವಾಂಸರು 'ಹೀನ ಸಂಗೀತ ಸಾಹಿತ್ಯ'ಕ್ಕೆ ಮನಸೋತು, 'ಡಂಭಕರ ಕೂಗಾಟ' ವನ್ನು ಈಗಿನ ಕಾಲದಲ್ಲಿ ಕೇಳಿ ಅನೇಕ ವೇಳೆ ನಾವೂ ಬೇಸರ ಗೊಳ್ಳುತ್ತಿಲ್ಲವೆ?

## ಸುಳಾದಿಗಳು

ಕರ್ಣಾಟಕ ಸಂಗೀತದಲ್ಲಿ ತಾಳಲಯಗಳಿಗೆ ಮುಖ್ಯ ಸ್ಥಾನವಿದೆ. ಸಂಗೀತ ಕೃತಿ ರಚನೆಗಳಲ್ಲಿ ತಾಳನಿಬದ್ಧತೆ ಎದ್ದು ಕಾಣುತ್ತದೆ. ನೃತ್ಯಕ್ಕಂತೂ ತಾಳವೆ

ಜೀವಾಳ. ದಾಸರು ಹಾಡುವುದರ ಜೊತೆಗೆ ನೃತ್ಯವನ್ನೂ ಬೆರೆಸುತ್ತಿದ್ದರು. ಆದ್ದರಿಂದ ಅವರಿಗೆ ತಾಳಜ್ಞಾನ ಅಗತ್ಯವಾಗಿ ಬೇಕಾಯಿತು. ಪುರಂದರದಾಸರು ಆರಭಿ ರಾಗದಲ್ಲಿ ರಚಿಸಿರುವ "ಆಡಿದನೊ ರಂಗ ಅದ್ಭುತದಿಂದಲಿ ಕಾಳಿಂಗನ ಫಣೆಯಲಿ" ಅವರ ಲಯಃಜ್ಞಾನಕ್ಕೂ ಭರತನಾಟ್ಯದ ಪರಿಚಯಕ್ಕೂ ಉತ್ತಮ ನಿದರ್ಶನವಾಗಿದೆ.

ಹಿಂದಿನ ಕಾಲದ ಸಂಗೀತ ಶಾಸ್ತ್ರಗಳಲ್ಲಿ ನೂರಕ್ಕೂ ಹೆಚ್ಚಾದ ತಾಳಗಳನ್ನು ಹೇಳಲಾಗಿದ್ದಿತೆಂದು ತಿಳಿಸಿದೆ. ಇವು ಕೇವಲ ಸಿದ್ಧಾಂತದ ಲೆಕ್ಕಾಚಾರ. ಆದರೆ ಪುರಂದರದಾಸರೂ ಮತ್ತು ಅವರ ಗುರುಗಳೂ, ಇವನ್ನು ಏಳು ತಾಳಗಳಿಗೆ ಸೀಮಿತಗೊಳಿಸಿದರು: ಧ್ರುವ, ಮಠ್ಯ, ರೂಪಕ. ಝಂಪೆ, ತ್ರಿಪುಟ, ಅಟ್ಟ ಮತ್ತು ಏಕ. ಪ್ರತಿಯೊಂದಕ್ಕೂ ಐದು ಜಾತಿಗಳನ್ನು ನಿರ್ದೇಶಿಸಿದರು: ತ್ರ್ಯಶ್ರ, ಚತುರಶ್ರ, ಮಿಶ್ರ, ಖಂಡ ಮತ್ತು ಸಂಕೀರ್ಣ—ಒಟ್ಟಿನರ 35 ವಿಧಗಳು.

ಈ ಏಳು ತಾಳಗಳನ್ನೇ ಸಂಗೀತ ಶಾಸ್ತ್ರಜ್ಞರು ಸುಳಾದಿ ಸಪ್ತತಾಳಗಳೆಂದು ಕರೆದರು. ಸುಳ ಅಥವಾ ಸಡಾ ಎಂಬ ಪದದ ವ್ಯುತ್ಪತ್ತಿವಾದಗ್ರಸ್ತವಾಗಿದೆ. ಆದರೆ ಈ ಸುಳಾದಿ ಸಪ್ತತಾಳಗಳಲ್ಲಿ ಹರಿದಾಸರು ಮಾಡಿರುವ ರಚನೆಗಳು—ಶ್ರೀಪಾದರಾದಿಯಾಗಿ—ಕರ್ಣಾಟಕ ಸಂಗೀತಕ್ಕೆ ಅವರ ವಿಶಿಷ್ಟ ಕೊಡುಗೆಯಾಗಿದೆ. ಪುರಂದರದಾಸರು 64,000 ಸುಳಾದಿಗಳನ್ನು ತಮ್ಮ ಗುರುಗಳ ಅನುಗ್ರಹದಿಂದ ರಚಿಸಿರುವುದಾಗಿ ಹೇಳಿಕೊಂಡಿದ್ದಾರೆ. ಒಂದು ಸುಳಾದಿಯಲ್ಲಿರುವ ಬೇರೆ ಬೇರೆ ಚರಣಗಳನ್ನು, ಐದು ಅಥವಾ ಏಳು ತಾಳಗಳಲ್ಲಿ—ಆದರೆ ಒಂದೇ ರಾಗದಲ್ಲಿ ಹೇಳಬೇಕು. ರಾಗಮಾಲಿಕೆಯಿರುವಂತೆ ಇದು ತಾಳಮಾಲಿಕೆಯಾಗುವುದು. ಅಂತಿಮವಾಗಿ ಎರಡು ಸಾಲುಗಳು—ಇವಕ್ಕೆ ಜತೆಯೆಂದು ಹೆಸರು.—ಇಲ್ಲಿ ಸಾಧಾರಣವಾದ ದ್ವಿಪದಿಯನ್ನು ಹಿಂದೆ ಉಪಯೋಗಿಸಿದ ಎಲ್ಲ ತಾಳಗಳಲ್ಲಿ ಪ್ರಾಯಶಃ ಸಾಮೂಹಿಕವಾಗಿ ಹೇಳಬೇಕು. ಈ ಜತೆಯಲ್ಲಿ ಸುಳಾದಿಯ ಮುಖ್ಯಭಾವವೂ ಅಂಕಿತವೂ ಅಡಕವಾಗಿರುವುದು. ಇದರಲ್ಲಿ ರಾಗದ ವಿಸ್ತಾರವಿಲ್ಲ—ಕೇವಲ ತಾಳಬದ್ಧವಾದ ಭಜನೆಯ ರೀತಿಯಲ್ಲಿ ಹೇಳುತ್ತಿದ್ದಂತೆ ಕಾಣುತ್ತದೆ. ಕೆಲವು ವೇಳೆ ಬೇರೆ ಬೇರೆ ಚರಣಗಳಿಗೆ ಬೇರೆ ಬೇರೆ ರಾಗಗಳನ್ನು ಉಪಯೋಗಿಸುತ್ತಿದ್ದಂತೆ ಕಾಣುತ್ತದೆ. ನೃತ್ಯಕ್ಕೂ ಅಳವಡಿಸಿ ಕೊಂಡಂತೆ ಕಾಣುತ್ತದೆ. ಹದಿನೇಳನೆಯ ಶತಮಾನದಲ್ಲಿದ್ದ ವೆಂಕಟಮಖಿಯೂ 18ನೆಯ ಶತಮಾನದಲ್ಲಿದ್ದ ತುಲಜಾಜಿ ಮಹಾರಾಜರೂ, 19ನೆಯ ಶತಮಾನದಲ್ಲಿದ್ದ ಸುಬ್ಬರಾಮ ದೀಕ್ಷಿತರೂ ತಮ್ಮ ಗ್ರಂಥಗಳಲ್ಲಿ ಈ ಸುಳಾದಿಗಳನ್ನು ಪ್ರಸ್ತಾಪಿಸಿದ್ದಾರೆ. ಪುರಂದರದಾಸರ ಹೆಸರನ್ನು ಹೇಳಿ ಅವರ ಒಂದೆರಡು ಸುಳಾದಿಗಳ ಲಕ್ಷಣಗಳನ್ನು ವಿವರಿಸಿದ್ದಾರೆ. ಅಂದಿನವರಿಗೂ ಇವುಗಳನ್ನು ಹಾಡುವ ರೀತಿ ಸಂಗೀತಾಭ್ಯಾಸಿಗಳಿಗೆ ತಿಳಿದಿತ್ತೆಂದು ಕಾಣುತ್ತದೆ. ಆದರೆ ಈಗ ಆ ರೀತಿಯಲ್ಲಿ ಹಾಡುವವರೇ ವಿರಳ.

ಹರಿದಾಸರ ಮತ್ತೊಂದು ವಿಶಿಷ್ಟ ರಚನೆ ಅವರ ಉಗಾಭೋಗಗಳು. ಈ ಪದದ ವ್ಯುತ್ಪತ್ತಿಯ ವಿಚಾರದಲ್ಲಿಯೂ ವಾದವಿವಾದಗಳಿವೆ. ಸರಳ ರಗಳೆಯ ರೀತಿಯಲ್ಲಿ, ಕೇವಲ ಲಘುವಾದ ತಾಳ ಮಾತ್ರವಿದ್ದು ಕೆಲವೇ ಸಾಲುಗಳುಳ್ಳ ಕೃತಿ ಇದು. ಪಲ್ಲವಿ ಅನುಪಲ್ಲವಿಗಳಿಲ್ಲ. ರಾಗ ತಾಳಕ್ಕಿಂತಲೂ, ಇದರಲ್ಲಿನ ಸಾಹಿತ್ಯ—ಉಪದೇಶ, ಆದೇಶ. ವಿಚಾರ ಪ್ರಚೋದನೆ ಇದರ ಮುಖ್ಯ ಅಂಶ. ಈ ಪದ ಉದ್ಗ್ರಾಹ, ಅಂದರೆ ರಾಗಾರಂಭ, ಮೇಳಾಪಕ, ಅಂದರೆ ಆ ರಾಗವನ್ನು ಮೇಳದೊಂದಿಗೆ ಕೂಡಿಸುವುದು, ಧ್ರುವ ಅಂದರೆ ಸ್ಥಿರವಡಿಸುವುದು, ಆಭೋಗ, ಅಂದರೆ ರಾಗದ ಜೀವ ಸ್ವರ ಸಂಚಾರದಿಂದ ಸುಖ ಪಡುವುದು—ಹೀಗೆ ಉದ್ಗ್ರಾಹದಿಂದ ಆಭೋಗದವರಿಗೂ ರಾಗಲಾಪದ ರೀತಿ ಉದ್ಗ್ರಾಹಾಬೋಗ ಅಥವಾ ಉಗಾಭೋಗವಾಯಿತೆಂದು ಕೆಲವರ ವಾದ. ರಾಗಾಲಾಪನೆಯಲ್ಲಿ ಅರ್ಥವಿಲ್ಲದ ತ–ರ–ನ–ನ ಮುಂತಾದ ಅಕ್ಷರಗಳನ್ನೂ, 'ತಾನ'ದಲ್ಲಿ ತೊಂ, ನೊಂ—ಇತ್ಯಾದಿ ಅಕ್ಷರಗಳನ್ನೂ ಉಚ್ಚರಿಸುವುದಕ್ಕೆ ಬದಲಾಗಿ ಗಂಭೀರವಾದ ಅರ್ಥವನ್ನೊಳಗೊಂಡ ಒಂದು ಗದ್ಯವನ್ನು ರಾಗ ಪ್ರಸ್ತಾರದೊಂದಿಗೆ ಹಾಡುವುದು ಇದರ ಸ್ವರೂಪವೆಂದು ಕೆಲವು ವಿದ್ವಾಂಸರ ಅಭಿಪ್ರಾಯ. ಅಂದರೆ ಇದರಲ್ಲಿಯೂ ಸಂಗೀತಕ್ಕೆ ಪ್ರಾಶಸ್ತ್ಯ ಕೊಟ್ಟಂತಾಯಿತು. ಉಗಾಭೋಗಗಳನ್ನು ಸಾಂಪ್ರದಾಯಿಕವಾಗಿ ಹಾಡುವ ರೀತಿಯೂ ಈಗ ಲುಪ್ತವಾಗಿದೆ. ಇದನ್ನು ಹಿಂದೆ ಹೇಗೆ ಹೇಳುತ್ತಿದ್ದರೋ ಅದು ಅಸ್ಪಷ್ಟವಾಗಿ ಈಗ ನಮಗೆ ಗೊತ್ತಿಲ್ಲ. ಸಂಗೀತಜ್ಞರೂ, ಹರಿದಾಸ ಸಾಹಿತ್ಯಾಭಿಮಾನಿಗಳೂ ಸಂಶೋಧನೆ ನಡೆಸಲು ಇದೊಂದು ವಿಷಯ.

ಹರಿದಾಸರು ಕರ್ಣಾಟಕದಲ್ಲಿ ಈ ನಾಲ್ಕು ಶತಮಾನಗಳಾಗಿ—ಇತ್ತೀಚಿನವರೆಗೂ; ನಮ್ಮ ಜನರ ಜೀವನವನ್ನು ಉತ್ತಮಗೊಳಿಸಲು, ಮಹತ್ವಪೂರ್ಣವಾದ ಸೇವೆಯನ್ನು ಸಲ್ಲಿಸಿ ಕೃತಕೃತ್ಯರಾಗಿದ್ದಾರೆ. ಜನಾರ್ದನನ ಸೇವೆಯನ್ನು ಜನತೆಯ ಸೇವೆಯ ಮೂಲಕ ಸಲ್ಲಿಸಿದ್ದಾರೆ. ಧರ್ಮಜಾಗೃತಿಯನ್ನುಂಟು ಮಾಡಿದ್ದಾರೆ. ಜನರಲ್ಲಿ ಭಗವದ್ಭಕ್ತಿ ಮೂಡುವಂತೆ ಪ್ರಯತ್ನಿಸಿದ್ದಾರೆ. ಕನ್ನಡ ಸಾಹಿತ್ಯಕ್ಕೆ ಅಮೂಲ್ಯವಾದ ಕಾಣಿಕೆಯನ್ನು ಒಪ್ಪಿಸಿದ್ದಾರೆ. ಪಾಮರರಲ್ಲಿ ಸಾಹಿತ್ಯಾಭಿರುಚಿಯನ್ನು ಬೆಳಸಿದ್ದಾರೆ. ಉತ್ತಮ ಸಂಗೀತದಲ್ಲಿ ಅವರಿಗೆ ಪರಿಚಯವಿರುವಂತೆ ಮಾಡಿದ್ದಾರೆ. ಯಾವ ಭೇದ ಭಾವವೂ ಇಲ್ಲದೆ ಜನರ ಮಧ್ಯೆ ಓಡಾಡಿ—ಎಲ್ಲರನ್ನೂ, ವಿಶೇಷವಾಗಿ ನಮ್ಮ ಮಹಿಳೆಯರನ್ನು—ಸುಸಂಸ್ಕೃತರನ್ನಾಗಿ ಮಾಡುವ ಉದಾತ್ತ ಪ್ರಯತ್ನವನ್ನೂ ನಿಸ್ವಾರ್ಥತೆಯಿಂದ ಮಾಡಿದ್ದಾರೆ. ಭಾರತೀಯ ಸಂಸ್ಕೃತಿಯ ರಕ್ಷಣೆ ಪೋಷಣೆಗಳಿಗೆ ಹರಿದಾಸರ ಸೇವೆ ಚಿರಸ್ಮರಣೀಯವಾಗಿದೆ.

# ಸಮೀಕ್ಷೆ

ಒಬ್ಬಿಬ್ಬರು ಶಾಸನ ಕವಿಗಳೂ, ದುರ್ಗಸಿಂಹ, ರುದ್ರಭಟ್ಟ ಇವರನ್ನು ಬಿಟ್ಟರೆ ದಾಸರ ಕಾಲಕ್ಕೆ ಮುಂಚೆ, ಬ್ರಾಹ್ಮಣ ಕವಿಗಳು, ಹೆಚ್ಚಾಗಿ ಕನ್ನಡದಲ್ಲಿ ಗ್ರಂಥಗಳನ್ನು ಬರೆಯಲಿಲ್ಲ. ದಾಸರನ್ನು ಹಿಂದೆ ಗ್ರಂಥಕಾರರೆಂದು ಕರೆಯಲಿಲ್ಲ. ಆದರೆ ಅವರ ಕೊಡುಗೆ ಕನ್ನಡ ನಾಡಿನಲ್ಲಿ ಅತಿಶಯವಾದ ಜನಪ್ರಿಯತೆಯನ್ನು ಪಡೆದಿದೆ. ಇಲ್ಲಿನ ಮೂರೂ ಪ್ರಬಂಧಗಳಲ್ಲಿ ದಾಸಸಾಹಿತ್ಯ ಹೇಗೆ ಹುಟ್ಟಿತು, ಯಾವ ಸ್ವರೂಪವನ್ನು ತಾಳಿತು, ಪ್ರಕಾರಗಳೇನು, ಆ ಸಂಪ್ರದಾಯ ಈಗಲೂ ಜೀವಂತವಾಗಿ ಹೇಗೆ ನಡೆದು ಕೊಂಡು ಬಂದಿದೆ ಎಂಬುದನ್ನು ಕಾಣಬಹುದು.

ಹನ್ನೆರಡನೆಯ ಶತಮಾನ ಎರಡು ಬಗೆಯ ಭಕ್ತಿ ಪಂಥಗಳಿಗೆ ನೆಲಸಾಯಿತು. ಶತಮಾನ ಕಾಲ ಏನು ಮಾಡೀತು? ಜನಜೀವನದಲ್ಲಿ ಜೈನ ಬೌದ್ಧ ಪ್ರಭಾವಗಳು ಪ್ರಾಧಾನ್ಯವನ್ನು ಪಡೆದಿದ್ದು ಸ್ವಲ್ಪಮಟ್ಟಿಗೆ ಸರಸತೆಯನ್ನೂ ವಿಲಾಸವನ್ನೂ ಆವ ರೆಗೂ ವಹಿಸಿದಂತೆ ಕಾಣುತ್ತದೆ. ವೈದಿಕ ಸಂಪ್ರದಾಯದಲ್ಲಿ ಶಂಕರಾಚಾರ್ಯರು ಪ್ರಚಾರ ಮಾಡಿದ ಅದ್ವೈತವಾದ ಕೂಡ ಸಂಸಾರ ಜೀವನದ ಯಾವ ಸುಖ–ಸಂತೋಷಗಳಿಗೂ ವಿಶ್ವಾಸ ತೋರದಂತೆ ಕೇವಲ ಆಧ್ಯಾತ್ಮಿಕ ಕಲ್ಪನೆಯಲ್ಲಿ ರುಚಿ ಹರಿಸಿತ್ತು. ಅಲ್ಲಿಯೂ ಒಂದು ಬಗೆಯ ಸಂನ್ಯಾಸಮಾನ್ಯವಾದ ಒಂದು ರೀತಿಯಾಗಿ ಜೀವದಲ್ಲಿ ನಿರಾಸಕ್ತಿ ತರುವ ಪಂಥವೇ ಇತ್ತು. ಧರ್ಮ, ಮತ, ಎಂದಾಗ ಶಂಕ ರರು ಮಾಯಾವಾದ, ನಿರ್ಗುಣಬ್ರಹ್ಮ ಸಾಧನೆ, ದಿನಚರಿ ಜೀವನದ ನಿರಸನ, ಆಸ್ತಿಕ ವೆನ್ನುತ್ತಿದ್ದ ಧರ್ಮಕ್ಕೆ ಲಕ್ಷಣದಂತೆ ಕಂಡಿತು.* ಬೌದ್ಧರ ಪ್ರಭಾವ ಸ್ವಲ್ಪ ಹೆಚ್ಚು-ಕಡಮೆ ಪೂರ್ತಿಯಾಗಿ ಕಾಣದಾಗಿ ಜೈನರ ಪ್ರಾಶಸ್ತ್ಯ ಕೆಲವು ಶತಮಾನಗಳ ಕಾಲ ಇಲ್ಲಿ ಪ್ರಭಾವಗೊಂಡಿತು. ಇಲ್ಲಿಯೂ ಲೋಕ ಜೀವನಕ್ಕೆ ಹೆಚ್ಚು ಪುರಸ್ಕಾರವಿರಲಿಲ್ಲ. ಕವಿತೆ, ಶಿಲ್ಪ ಮುಂತಾದ ಸುಂದರ ಕೃತಿಗಳು ನಿರ್ಮಾಣವಾಗಿ ಜನಗಳಲ್ಲಿ ಅಧ್ಯಾತ್ಮ ಸಾಧನೆಯಲ್ಲಿ ಆಸಕ್ತಿ ಉಳಿಸಿದ್ದರೂ ಕರ್ಮರೂಢವಾದ ಸಂಸಾರವನ್ನು ಸರ್ವಥಾ ತ್ಯಾಗ ಮಾಡತಕ್ಕುದ್ದು, ಇದರಲ್ಲಿ ಹುರುಳಿಲ್ಲ, ಇಲ್ಲಿನ ಸುಖ ಸಂತೋಷ ಸರ್ವಥಾ

---

* ಯಾವುದನ್ನೂ ಪೂರ್ತಿ ತತ್ತ್ವದರ್ಶನವೆನ್ನುತ್ತೇವೊ ಅಲ್ಲಿ ಇದು ತಥ್ಯವಾದೀತು. ಆದರೆ ಹೊರ ಜಗತ್ತು ವಾಸ್ತವವಾಗಿ ಇರುವವರೆಗೂ ಅದನ್ನು ಮಿಥ್ಯಾ, ಮಾಯೆ ಎನ್ನುವುದು ಕಷ್ಟವಾಗುತ್ತದೆ.

ಸಾರವಿಲ್ಲದ್ದು, ಲೋಕ ಜೀವನದ ತ್ಯಾಗ ಪ್ರಥಮ ಕರ್ತವ್ಯ ಎಂಬಂತಹ ಭಾವನೆ ಬೆಳೆದು, ಉಪ್ಪು ಹುಳಿ ಕಾರ ತಿನ್ನುವ ಜನತೆಗೆ, ಬದುಕಿನಲ್ಲಿ ಯಾವ ಸಂತೋಷವನ್ನೂ ಬಯಸತಕ್ಕುದಲ್ಲವೆಂಬ ಭಾವ ತಂದಿತು. ಶಿಲ್ಪ ಚಿತ್ರಗಳು ಕೂಡ ನಿರಾಭರಣ ಸೌಂದರ್ಯದ ತಪಸ್ಸಿಗೆ–ಕನ್ನಡ ದೇಶದಲ್ಲಿ, ದಿಗಂಬರ ಸಂಪ್ರದಾಯಕ್ಕೆ–ಎಡೆ ಕೊಟ್ಟಿತ್ತು. ಜೈನ ರಾಜಮಹಾರಾಜರೂ ವರ್ಣಾಶ್ರಮ ಧರ್ಮಗಳೂ ಪೂಜೆ ಪುರಸ್ಕಾರಗಳೂ ಹಬ್ಬ ನೋಂಪಿಗಳೂ ಬಳಕೆಯಲ್ಲಿದ್ದರೂ ಮೂಲಭೂತವಾದ ತತ್ವ ಪ್ರವೃತ್ತಿ ಇವನ್ನು ನಿರಾಕರಿಸಿತು. ವೈದಿಕ ಸಂಪ್ರದಾಯಕ್ಕೆ ಸೇರಿದ ಚಾಲುಕ್ಯರು ಶೈವ, ವೈಷ್ಣವ ಎರಡೂ ಪಂಥಗಳನ್ನು ಒಪ್ಪಿಕೊಂಡವರಾದ್ದರಿಂದ, ಚಿತ್ರ ಶಿಲ್ಪ ಸಂಗೀತ–ವಾಸ್ತುನಿರ್ಮಾಣಗಳ ಬೇರೆ ಮುಖವನ್ನು ಕಾಣಿಸಿದರು. ಅವತಾರದ ಕತೆಗಳು ಜನರಲ್ಲಿ ಪ್ರಚಾರವಾದವು. ಸ್ವರ್ಗ ಸುಖಾದಿಗಳ ಕಲ್ಪನೆ, ಗಂಧರ್ವ ಅಪ್ಸರೆಯರ ಚಿತ್ರಣ, ಶಿಲ್ಪ, ಬಾದಾಮಿಯಂತಹ ಗುಹಾಲಯಗಳಲ್ಲಿ–ಭೂಮಿಯನ್ನು ಸೀಳಿಕೊಂಡು—ಆ ಮಾತು ಒಪ್ಪದಿದ್ದರೆ ಭೇದಿಸಿಕೊಂಡು ಸಸ್ಯವರ್ಗ ಹುಟ್ಟುವಂತೆ—ಕಂಡವರಿಗೆ ಹೇಗೆ ಗಂಡು ಹೆಣ್ಣು ಮನುಷ್ಯರ, ದೇವ, ದೇವತೆಗಳ, ಜೊತೆಕತೆಗಳು ಜನಕ್ಕೆ ಪ್ರಿಯವಾದ ಹಾಗೆ ಕಾಣುತ್ತದೆ*. ಬಾದಾಮಿಯ ಎದುರು ಬದುರು ಸಾಲಲ್ಲಿದ್ದ ಮೂರ್ತಿಶಿಲ್ಪಗಳ—ಈಗ ಎಲ್ಲ ಇಲ್ಲವಾದರೂ—ಈ ಜೊತೆ ಚಿತ್ರಗಳನ್ನು ಕಾಣಿಸಿದ್ದನ್ನು ಕಾಣಬಹುದಾಗಿತ್ತು. ಅವುಗಳಲ್ಲಿ ಅಬ್ಬರ ಕೂಗಿಲ್ಲ.

ಈ ನಾಡಿನಲ್ಲಿ ಎಂದಿಗೇ ಆಗಲಿ, ಐಹಿಕ ಸುಖಭೋಗಕ್ಕೇ ಪ್ರಾಧಾನ್ಯ ಕೊಡಲಿಲ್ಲವೆಂಬುದು ನಿಜ. ನಾಲ್ಕು ಪುರುಷಾರ್ಥಗಳಿಗೆ, ಅದರಲ್ಲಿ ಮೊದಲ ತ್ರಿವರ್ಗಕ್ಕೆ ಬೆಲೆ ಇದ್ದೇ ಇತ್ತು. ಕಾಮ ಅರ್ಥಗಳ ಸಾಧನ ತಪ್ಪಲ್ಲ.

"ಧರ್ಮಾವಿರುದ್ಧೋ ಭೂತೇಷು ಕಾಮೋಸ್ಮಿ"– ಕಾಮದಲ್ಲಿ ನಾನಿದ್ದೇನೆ ಎಂಬ ಗೀತಾವಾಕ್ಯವೇ ಧರ್ಮಾಯಾತ್ತವಾಗಿ ಲೋಕವನ್ನು, ಸುಖಭೋಗಗಳನ್ನು ಬಯಸಬಹುದು. ಸಾಧಿಸಬಹುದೆಂಬ ವಿಶ್ವಾಸ ಪುನಃ ಹುಟ್ಟಿದ ಹಾಗೆ ಕಾಣುತ್ತದೆ. ಎಷ್ಟು ಯಮ, ನಿಯಮ, ಸಂಯಮ ಶಿಷ್ಟ—ಸಾಮಾನ್ಯರಿಗೆ ? ನಗೆಸಂತೋಷಗಳ ಅಗತ್ಯ ಎಷ್ಟು ಲೋಕದಲ್ಲಿ? ಮನುಷ್ಯನ ದಿನಜೀವನದಲ್ಲಿ ನಂಬಿಕೆ, ಇವು ಒದಗಿಸುವ ಹರ್ಷ ಉತ್ಸಾಹಗಳ ನಂಬಿಕೆ, ಸಾಧನೆ, ಬೆಲೆಯಿಲ್ಲದವುಗಳಾದರೆ ಬದುಕು ಬಡವಾಗುತ್ತಿತ್ತು. ಅದುದರಿಂದ ಬಹುಶಃ ವಿಷ್ಣು, ಶಿವ ಎಂಬ ಕಲ್ಪನೆಗಳು ಪುನಃ ಮೇಲೆದ್ದು ನಿಂತು ವೈದಿಕ ಸಂಪ್ರದಾಯದ ಪರವಾಗಿ ಇವು ಒಣಕಲು ದೇವತೆಗಳಲ್ಲ—ಈ ಎರಡು ಮಹಾ ದೇವತೆಗಳಿಗೂ ಹೆಂಡತಿ ಮಕ್ಕಳು, ಕೈಲಾಸ ವೈಕುಂಠಗಳು, ಕೃಪಾವಿಲಾಸ,

* **My Kingdom is of the Heaven** ಎಂದು ಯೇಸೂ ಒತ್ತಿ ಹೇಳಿದ್ದೂ ಅದೇಯ.

ಕಾರುಣ್ಯ ಇವೆ. ಎಲ್ಲಕ್ಕೂ ಹಿನ್ನೆಲೆಯಾಗಿ ಅಂತರ್ಯಾಮಿಯಾಗಿ ಮೇಲ್ಪಟ್ಟು, ಆರಂಭ ದಲ್ಲಿ ಕೊನೆಯಲ್ಲಿ ಈ ದೇವತೆಗಳು—ಇವರದೋ ಅವರದೋ ಮಾತ್ರ, ಮತಗಳಲ್ಲಿ ಪ್ರಾಧಾನ್ಯ—ಲೋಕದ ಬದುಕನ್ನು ಗತಿಯನ್ನು ಕಾಯುತ್ತಾರೆ. ನಿಯಮಿಸುತ್ತಾರೆ. ಪ್ರತಿಯೊಂದು ಜೀವವೂ ಆ ಕೃಪೆಗೆ ಯೋಗ್ಯ. ತನ್ನನ್ನು ತಾನು ಆ ಕೃಪೆಗೆ ಅರ್ಹ ವಾಗಿ ಮಾಡಿಕೊಳ್ಳುವ ಅವಕಾಶ, ದಾರಿ, ಉಂಟು. ಶ್ರದ್ಧೆ ಭಕ್ತಿ ನಿಷ್ಠೆ ಮಾತ್ರ ಬೇಕು, ಅವು ನಿಚ್ಚಳವಾಗಿರಬೇಕು ಎಂಬ ಭಾವನೆ ಕಾಣುತ್ತದೆ. ಶಿವ, ರುದ್ರ ಎರಡೂ ವೇದಕಾಲದಿಂದಲೂ ಹೆಸರಾದ ದೇವತೆಗಳು. ವಿಷ್ಣು ಸೂರ್ಯದೇವತೆಯ ಒಂದು ಪ್ರಕಾರವಾಗಿ ಹರಿ, ವಿಷ್ಣು, ಸವಿತೃ, ಮಿತ್ರ, ವರುಣ, ನಾರಾಯಣ ಮುಂತಾದ- ಎಲ್ಲ ದೇವತೆಗಳ ಲಕ್ಷಣಗಳನ್ನೂ ಶಕ್ತಿಗಳನ್ನೂ ತುಂಬಿಕೊಂಡು ಅನೇಕ ಪುರಾಣಗ ಳನ್ನು ಸೃಷ್ಟಿಸಿ ಆಶ್ರಯಕೊಟ್ಟಿದೆ. ಮಹಾಭಾರತ ಭಾಗವತಗಳ ಕಾಲದಿಂದ, ವಿಶೇಷ ವಾಗಿ, ಕೃಷ್ಣಪ್ರಾಮುಖ್ಯತೆಯೊಂದು ಜೊತೆಗೆ ಬೆಳೆಯುತ್ತದೆ. ಹಿಂದಿನ ಯಾವು ದನ್ನೂ ಬಿಟ್ಟುಕೊಡದ ಕೆಲವು ಜನ ಇಂದ್ರಪೂಜೆ ವಿಷ್ಣುಪೂಜೆ ಎರಡನ್ನೂ ಸಮ ರಸವಾಗಿ ಹೊಂದಿಸುವಂತೆ ಇಂದ್ರಉಪೇಂದ್ರರೆಂಬಂತೆ ಇವರನ್ನೂ ಕಲ್ಪಿಸಿಕೊಂಡಿತು. ದೇವತೆ, ರಾಕ್ಷಸ ಅಥವಾ ಅಸುರ* ಕಲ್ಪನೆ ಮೊದಲಿನಿಂದಲೂ ಇದ್ದುದರಿಂದ ರಾಕ್ಷಸರ ದಮನ ಇವುಗಳ ಕಾರ್ಯವಾಯಿತು. ಈ ಕಾರ್ಯಕ್ಕಾಗಿ ಅನೇಕ ಅವತಾರಗಳನ್ನು ಎತ್ತಿ ವಿಷ್ಣು ಬೇರೆ ಬೇರೆ ರೂಪಗಳಲ್ಲಿ ಸ್ವರ್ಗದಿಂದಿಳಿದು ಬಂದು ಧರ್ಮವನ್ನು ಪ್ರತಿಷ್ಠಾಪನೆ ಮಾಡಿದ ಎಂಬ, ವಿಷ್ಣು ಸಾಹಸದ ಕಥೆ ಬೆಳೆದು, ಈ ಅವ ತಾರಗಳ ಸಂಖ್ಯೆ ಮೊದಲು ಎಷ್ಟೆಷ್ಟೋ ಇದ್ದು, ಕಡೆಗೆ ಹತ್ತು ಆಗಿ ಗ್ರಾಹ್ಯವಾಯಿತು. ಶಿವನೂ ಭಕ್ತರ ಸಜ್ಜನರ ಉದ್ಧಾರಕ್ಕಾಗಿ ದುಷ್ಟನಾಶಕ್ಕಾಗಿ ಭಕ್ತೋದ್ಧಾರಕ್ಕಾಗಿ, ಲೋಕದಲ್ಲಿ ಅವತರಿಸಬೇಕಾದ ಅಗತ್ಯ ಹುಟ್ಟಿ ಅವನ ಇಪ್ಪತ್ತೈದು (ಪಂಚವಿಂಶತಿ) ಲೀಲೆಗಳೆಂಬಂತಹ ಕ್ರಿಯಾಕಲಾಪದಲ್ಲಿ ತೊಡಗಿತು. ನಿರ್ಗುಣ ಬ್ರಹ್ಮದ ಸಕಲ ಕರ್ಮಾತೀತ, ಸಮಸ್ತ ಗುಣಾತೀತವಾದ ಪಂಚಮಗತಿಯನ್ನೂ ಸೇರಿ ತೀರ್ಥಂಕ ರತ್ವವನ್ನು ಸಾಮಾನ್ಯ ಜನ ಮುಟ್ಟುವುದು ಕಷ್ಟವಾಗಿತ್ತು. ಸೃಷ್ಟಿ ಸಂಬಂಧದಲ್ಲಿ

---

* ಪಾರಸೀಕರ ಪ್ರಥಮ ದೇವತೆ ಅಹುರಮಸ್ದ. ಅಹುರ – ಆ ದೇವತೆಗೆ ಸಂಬಂಧಿಸಿದಂತೆ ನಮ್ಮಲ್ಲಿ ಬೆರೆಯಲ್ಲಾಬಂದಾಗ ಅಸುರ ಆಯಿತು. ಇವರು ಮಾಡಿಕೊಂಡುದು ಸ್ವರ ವರ್ಗ. ಕೆಲವು ಕಾಲ ವರುಣ ದೇವತೆ ಅಧಿಕವಾಗಿಯೇ ಉಳಿದಿತ್ತು. ಅಹ್ರಿಮಾನ್ ಎಂಬ ಅಹುರಮಸ್ದನ ಪ್ರತಿ ಯೋಧಿ ಆರ್ಯಮಾನ್ ಎಂಬುದಾಗಿ ಇಲ್ಲಿ ಪರಿಣಾಮಗೊಂಡಿತೇನೋ, ಅದನ್ನು ಪರಿಶೀಲಿಸಬೇಕು. ಆಹುರಮಸ್ದ ಎಹಾರ್‌ಮಸ್ಕ್‌ಜೀಯಲ್ಲಿರುವಂತೆ ಇಂದಿಗೂ ಪಾರ್ಸಿಗಳಲ್ಲಿದೆ. ಅವರ ಪ್ರತಿ ಯಾದ ಅಹ್ರಿಮನ್ ಆಗಲಿ, ಉತ್ತರ ಕಾಲದಲ್ಲಿ ಆದೇಶಗಳಲ್ಲಿ ಬೆಳೆದ ಸೇತನ್ (ಸೈತಾನ್) ಶಕ್ತಿ ಗಳೇ ಆಗಲಿ ಸಮನಾದ ಶಕ್ತಿಯ ಪ್ರಯೋಗ ನಮ್ಮಲ್ಲಿ ಬೆಳೆಯಲಿಲ್ಲ.

ಈ ಮೂರು ದೇವರ ಮೂರು ಕ್ರಿಯಾವ್ಯಾಪಾರಗಳು(Functions) ಎಂದಾಕೊಂಡು ತ್ರೈಮೂರ್ತ್ಯಾತ್ಮಕವಾದ ಬ್ರಹ್ಮ ವಿಷ್ಣು ಮಹೇಶ್ವರರ ಕಲ್ಪನೆಯನ್ನು ಪ್ರತಿಷ್ಠಾಪಿಸ ಲಾಗಿತ್ತು. ಈ ದೇವಲೋಕ ಮತ್ತು ಅದರ ಸಾಧನೆ ಎಲ್ಲರ ಆಸೆಗೂ ಒದಗಬಲ್ಲ ದೆಂಬ ಆಲೋಚನೆ ಬಂದಾಗ ಆ ಸಂಬಂಧದಲ್ಲಿ ಪೂಜೆ, ಆರಾಧನೆ—ಆ ಬಗೆಯ ಆಗಮ ನಿವೇದನೆ ನಿರ್ದಿಷ್ಟವಾಗಿ ಗೊತ್ತಾದಾಗ—ಅದು ಪೂಜ್ಯ,ವ್ಯಕ್ತಿಗಳು ಪ್ರತಿಯೊಬ್ಬರೂ ಪೂಜೆ ಸಲ್ಲಿಸುವವರು, ಒಂದೊಂದೂ ಒಂದೊಂದು ಜೀವ,ಜೀವವೇನು ಒಂದು ಆತ್ಮ, ಎಂಬಂತೆ ಭಾವ ಬೆಳೆದಾಗ—ಕಲ್ಪನೆಗೆ ಎರಡು ಮೆಟ್ಟು ಬಂದ ಹಾಗಾಯಿತು. ಪೂಜಾರಿಯ ಜೀವ ಕೃಷ್ಣನೋ ಶಿವನೋ? ಅವನ ಅನುಗ್ರಹ ಪ್ರಸಾದ ಪಡೆಯು ವುದೋ, ಸಾಯುಜ್ಯವನ್ನೋ ಸಾಮೀಪ್ಯವನ್ನೋ ಸಾಲೋಕ್ಯವನ್ನೋ ಬಯಸು ವುದೊ? ದಿನಜೀವನದ ಸಫಲತೆಗೆ ಇದು ಅವಶ್ಯ ಎಂಬ ಅವಕಾಶ ಉಂಟುಮಾಡಿ ಕೊಟ್ಟಿತು. ಪರಮದೇವತೆಗಳಾಗಿ ವಿಷ್ಣು ಶಿವ ರೂಪಿತರಾದಾಗ ಅವರ ಪೂಜೆ ಆರಾಧನೆ, ವ್ಯಕ್ತಿಗಳ ಭಕ್ತಿಗೆ ಸಂಬಂಧಿಸಿದಂತೆ. ಜಿನನ ವಿಷಯದಲ್ಲಿ ಈ ಭಕ್ತಿಯಂಥ ಆಪ್ತಬಾಂಧವ್ಯ ದೂರೂಹ್ಯವೇ ಅಶಕ್ಯವೇ!

ಮೆಚ್ಚೆ ಗಡ, ಮುಳಿಯೆ ಗಡ, ಬಗೆ
ಬೆಚ್ಚರೆ ಬೇಱಾಗೆ, ನಿನ್ನ ಪದದೊಳ್ ಮನುಜಂ
ಗುಚ್ಚಗತಿ ನೀಚಗತಿ ವಡೆ
ವಚ್ಚರಿ ಕಣ್ದೆಱೆವ ತೆಱನನಱಿಪೆನಗರ್ಹಾ

ಎಂಬ ಪ್ರಾರ್ಥನೆ ಸಲ್ಲುವಾಗ ಭಕ್ತಿಯ ಕೇವಲ ಪ್ರೇಮಲಭಾವ ಅಶಕ್ಯ. ಎಲ್ಲ ದೇವರ ಪದವಿಗಿಂತ ಮೇಲಾದ್ದು ಜಿನನ ಪದವಿ. ನೀವೇನೇ ಮಾಡಿಕೊಳ್ಳಿ, ನಿಮ್ಮ ಸಂತೋಷ. ಜಿನನಿಗೆ ಇದಾವುದೂ ಬೇಕಿಲ್ಲ, ಪಂಚಮ ಗತಿಗೆ ಸಂದಿರುವ ಅವನು ಲೋಕದ ನಿಂದೆಪೂಜೆಗಳಿಗೆ ಮೇಲ್ಪಟ್ಟವನು. ಶಿವ ವಿಷ್ಣುಗಳೂ ಒಂದು ಮಟ್ಟ ದಲ್ಲಿ ಪರಮರೇ. ಇವರನ್ನು ಸಮೀಪಿಸಬಹುದು, ಒಲಿಸಬಹುದು, ಇವರ ಪ್ರಸಾದ ಪಡೆಯಬಹುದು. ಕೃಪೆ ಇವರ ಒಂದು ಗುಣ. ಹೀಗೆ ನಡೆದುಕೊಂಡರೆ ಈ ಒಲುಮೆ ದೊರೆಯುತ್ತದೆ ಎಂದು ವೈಷ್ಣವರಲ್ಲಿ ನವವಿಧ(ಕೆಲವಲ್ಲಿ 11 ವಿಧ) ಹೇಳಿದೆ. ಶಿವಕರುಣೆಯ ಸಾಧನೆಯಲ್ಲಿಯೂ ಆಗಮಗಳಂತೆ ಒಂದು ಪದ್ಧತಿ, ಕ್ರಮ ಏರ್ಪಟ್ಟಿ ದ್ದರೂ ಷಟ್ಸ್ಥಲಸಿದ್ಧಾಂತವೆಂಬ ಆರು ಮೆಟ್ಟಿಲುಗಳು ಸಾಧನೆಸಿದ್ಧಿಗಳ ಮೂಲಕ ಶಿವೈಕ್ಯವಾಗಬಲ್ಲ ಸಿದ್ಧಾಂಥವನ್ನು ವೀರಶೈವ ಸ್ಥಾಪಿಸಿದೆ. ಈ ಸ್ಥಲಗಳಲ್ಲೆಲ್ಲ ಶಿವ ನಿಗೆ ಭಕ್ತಿ ಸ್ಥಾನವಾಗಿ ಶಕ್ತಿಯ ನೆಲಸು ತಪ್ಪದು. ಶಕ್ತಿ ಹೆಣ್ಣು ; ಶಿವ ಗಂಡು. ವಿಷ್ಣು ಗಂಡು. ಭಕ್ತ ಒಂದು ಪ್ರಕಾರದಲ್ಲಿಯಾದರೂ ಹೆಣ್ಣಿನಂತೆಯೇ. ಎರಡರ

ರಲ್ಲಿಯ ಶರಣಾಗತಿ,ಪ್ರೀತಿಯಿಂದ ದೇವರಿಗೆ ಒಪ್ಪಿಸಿಕೊಳ್ಳುವುದು, ತನ್ನನ್ನೂ ತನ್ನೆಲ್ಲವನ್ನೂ ಎಂಬ ಭಾವನೆ ಬೆಳೆಯಿತು. ಕೃಷ್ಣ ಭಕ್ತಿಯ ಒಂದು ಪ್ರಕಾರದಲ್ಲಿಯಂತೂ ಹಾಗೇ- ಬೃಂದಾವನದಲ್ಲಿ ಕೃಷ್ಣನೊಬ್ಬನೇ ಗಂಡು, ಉಳಿದ ಜೀವಗಳೆಲ್ಲ ಹೆಣ್ಣು ಎಂಬ ಭಾವನೆ ಇದೆ.

ಪ್ರಾಚೀನ ಕಾಲದಿಂದ ಬಂದ ಶಿವ ಭಕ್ತಿ ಸುದಾರಿತವಾಗಿ ಎಲ್ಲ ಜನ ವರ್ಗಕ್ಕೂ ತೆರೆದು ಗಂಡು, ಹೆಣ್ಣು, ವೃತ್ತಿ, ಕಾಯಕ, ಹುಟ್ಟು ಕುಲ, ವ್ಯತ್ಯಾಸವೆಲ್ಲದೆ ಶಿವ ಪ್ರಸಾದಕ್ಕೆ ಯೋಗ್ಯರೇ, ಸಲ್ಲುವರು, ಎಂಬಂತೆ ಬೆಳೆಯಿತು. ವಿಷ್ಣು ಪಂಥಗಳಲ್ಲಿ ಎರಡು ಸಂಪ್ರದಾಯಗಳು ಹುಟ್ಟಿಕೊಂಡವು, ರಾಮಾನುಜ ಪಂಥ, ಮಾಧ್ವ ಪಂಥ, ಎರಡೂ ತಮ್ಮ ವೇದಾಂತ, ಆಚಾರ, ಪರಿಭಾಷೆ, ಭಕ್ತಿಮಾರ್ಗಗಳನ್ನು ಪ್ರಚಾರ ಮಾಡಿ ವೈಷ್ಣವ ಸಂಪ್ರದಾಯ ವೇದಕಾಲದ ಸಗುಣಬ್ರಹ್ಮೋಪಾಸನೆ ಕೃಪೆ, ಇವುಗಳಿಗೆ ಪ್ರಾಧಾನ್ಯ ಕೊಟ್ಟು, ಲಕ್ಷ್ಮೀಸಹಿತನಾದ ವಿಷ್ಣುವಿಗೆ ವಿಶಿಷ್ಟಾದ್ವೈತ ಪ್ರಪತ್ತಿ ಕಾಣಿಸಿದರಾಯಿತು. ಉಳಿದುದೆಲ್ಲ ಅವನ ಅರುಳಿಂದ ಸಾಧ್ಯ ಎಂದಿತು. ವೀರಶೈವದಲ್ಲಿ ಹೇಗೆ ವರ್ಣಾಶ್ರಮಧರ್ಮಗಳ ವಿವೇಚನೆ ಬರಲಿಲ್ಲವೊ, ವಿಶಿಷ್ಟಾದ್ವೈತಪಂಥದಲ್ಲಿಯೂ ಸ್ಥೂಲವಾಗಿ ಹಾಗೆಯೇ ಆಯಿತು. ಅವರಿಗೆ ಒಂದು ಕಡೆ ಉಪನಿಷತ್ತು, ಗೀತೆ ಆಧಾರಗ್ರಂಥಗಳಾದರೆ, ದಕ್ಷಿಣದಲ್ಲಿ ಬೆಳೆದ ಆಳ್ವಾರರ ಸಂಪ್ರದಾಯ ತಮಿಳಲ್ಲಿ ರೂಪಗೊಂಡು ನೆರವು ಕೊಟ್ಟಿತು. ಶೈವಕ್ಕೆ ವೇದ, ಶಿವಾಗಮ ಪಂಚಾಚಾರ್ಯರ ಶ್ರುತಿನಿಷ್ಠೆ ಬೆಲೆಯುಳ್ಳದಾಗಿದ್ದರೂ ದಕ್ಷಿಣದ ನಾಯನ್ಮಾರ್ ಪಂಥದ ತಮಿಳು ಭಕ್ತ ವರ್ಗ ದೊಡ್ಡ ಸ್ಫೂರ್ತಿಸ್ಥಾನವಾಯಿತು. ಮಧ್ವಾಚಾರ್ಯರು ವರ್ಣಾಶ್ರಮ ಧರ್ಮವನ್ನೂ ಉಳಿಸಿಕೊಂಡರು. ಶ್ರುತಿಸ್ಮೃತಿಗಳ ಪ್ರಾಮಾಣ್ಯಗಳನ್ನು ಅಂಗೀಕರಿಸಿದರು, ಷಡ್ದರ್ಶನಗಳಿಗೂ ಬೆಲೆ ಕೊಟ್ಟರು. ಹರಿಪಾರಮ್ಯವನ್ನು ಅಂಗೀಕರಿಸಿ, ಲೋಕ ನಿಜ, ಪ್ರಪಂಚ ನಿಜ, ಜೀವಾತ್ಮ—ಪರಮಾತ್ಮ ಬೇರೆ ಬೇರೆ, ಎಲ್ಲ ಅದಕ್ಕೆ ಅಧೀನ ಅನುಚರವರ್ಗ—ನೀಚ ಉಚ್ಚ ಎಣಿಕೆ ಉಂಟು—ಎಂಬ ತತ್ವವನ್ನು ಪ್ರತಿಪಾದಿಸುವ

ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ವತೋ
ಭೇದೋ ಜೀವಗಣಾ ಹರೇರನುಚರಾ ನೀಚೋಚ್ಚ ಭಾವಂ ಗತಾಃ
ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿತ್ರಿತಯಪ್ರಮಾಣಮಖಿಲಾಮ್ನಾಯೈಕ ವೇದ್ಯೋ ಹರಿಃ

ಎಂಬುದನ್ನು ಒಪ್ಪಿಕೊಂಡು ಭಕ್ತಿಜ್ಞಾನವೈರಾಗ್ಯಗಳನ್ನು ಅನುಸರಿಸಿ ವಿಷ್ಣುಕೃಪೆಯನ್ನು ಸಾಧಿಸಬೇಕು ಎಂಬ ಭಾವ ಬೆಳೆಯಿತು. ಇವರು ಮಡಿ, ಆಚಾರ ಇಟ್ಟುಕೊಂಡರು. ತರ್ಕ, ನ್ಯಾಯ, ವ್ಯಾಕರಣಗಳ ಸಾಧನೆಗೆ ಗಮನ ಕೊಟ್ಟರು.

ದಾಸಪಂಥ ಕೇವಲ ಮಾಧ್ವ ಪಂಥ. ಇದು ಹುಟ್ಟಿದ್ದು ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿ ಕ್ಷೇತ್ರದಲ್ಲಿ. ಮಧ್ವಾಚಾರ್ಯರ ವೇದಾಂತ ದೃಷ್ಟಿಯಲ್ಲಿ ಬೆಳೆಯಿತು. ಈ ಭಕ್ತಿಯು ಪ್ರಪಂಚ ಪೂರ್ತಿ ವೈದಿಕಸಂಪ್ರದಾಯಕ್ಕೆ ಸೇರಿದ್ದು. ಲಕ್ಷ್ಮೀ, ಹನುಮಾನ್ ಇವರಿಗೆ ಸಂಬಂಧಿಸಿದ ದೇವ ವರ್ಗ ಕಟ್ಟಿ ನಿಂತಿತು. ಅವತಾರದ ಕತೆಗಳಿಗೆ ಸಂಬಂಧಿಸಿದಂತೆ ತ್ರೇತಾಯುಗದಲ್ಲಿ ರಾಮಭಕ್ತನಾಗಿ ಹನುಮಂತ ಪರಮ ಮಾನ್ಯನಾದ, ದ್ವಾಪರ ಯುಗದಲ್ಲಿ ಪಾಂಡವರ ಭೀಮಸೇನ ಹನುಮಂತನ ಅವತಾರವಾದರೆ, ಕಲಿಯಲ್ಲಿ ಮಧ್ವಾಚಾರ್ಯರು ಆ ಸ್ಥಾನವನ್ನು ಪಡೆದರು. ಶೈವವೈಷ್ಣವ ಸಮಸ್ತಕ್ಕೂ ನಾರದರ ಸುಳಿವು ಬಂತು. ಅವತಾರದ ಕತೆಗಳಿಗೆ ಸಂಬಂಧಿಸಿದ ಕರಿ, ಧ್ರುವ, ಪಾಂಚಾಲಿ, ಪ್ರಹ್ಲಾದ, ಬಲ, ಅಂಬರೀಷ, ಭೀಷ್ಮ, ನಾರದ ಮುಂತಾದವರ ಕತೆಗಳೂ ಗುಣವಿಶೇಷಗಳೂ ನಾನಾ ರೀತಿಯಲ್ಲಿ ಇಲ್ಲಿನ ಜೀವನರೀತಿಗೆ ಸೇರಿಕೊಂಡವು. ಹರಿದಾಸಸಾಹಿತ್ಯದಲ್ಲಿ ಇದರ ಪೂರ್ಣ ಪ್ರಕಾಶವನ್ನೂ ಪ್ರಚಾರ, ಪ್ರಭಾವವನ್ನೂ ಕಾಣಬಹುದು.

ಯಾರ ಕಾಲದಿಂದ ಈ ಸಾಹಿತ್ಯ ಆರಂಭವಾಯಿತು ಎಂಬ ವಿಷಯದಲ್ಲಿ ವಿಚಾರ ನಡೆದಿದೆ. ಇಲ್ಲಿನ ಬರಹವೆಲ್ಲ ಹಾಡುಗಳ ರೂಪದಲ್ಲಿ ಇರುವುದು, ಭಜನೆಗೆ– ಒಬ್ಬರೋ, ಗುಂಪಿನಲ್ಲಿಯೋ ಹೇಳಿಕೊಳ್ಳಲಾಗುವಂತೆ. ಬಹುಶಃ ನರಹರಿ ತೀರ್ಥರೆಂಬವರದು ಕೆಲವು ಕೃತಿಗಳು, ಅವರ ಕಾಲದಿಂದ ಒಂದೆರಡು ಶತಮಾನಗಳ ಈಚೆಗೆ ಬಂದ ಶ್ರೀಪಾದರಾಯರ ಕೃತಿಗಳು ಈ ವರ್ಗದವರಿಗೆ ಮೂಲಸ್ಥಾನವಾಗಿರುವಂತೆ ಮೊದಲಿಂದಲೂ ಹೆಸರಿದೆ. ಅವರ ಸ್ಮರಣೆಯಿಂದಲೇ ಸ್ತೋತ್ರಪಾಠ ತೊಡಗುವುದು. ಶ್ರೀಪಾದರಾಯರು ಇಂದಿನ ಚಿತ್ತೂರಿಗೂ ತಿರುಪತಿಗೂ ನಡುವೆ ಚಂದ್ರಗಿರಿಯಲ್ಲಿ ರಾಜಾಸ್ಥಾನದಲ್ಲಿ ಗುರುಪದವಿ ಪಡೆದಿದ್ದು ಆಮೇಲೆ ಹಂಪೆಗೆ ಹೋದವರು. ಅವರದು ಸಂಸ್ಥಾನ. ಸಿಂಹಾಸನದಂಥ ಪೀಠದ ಮೇಲೆ ಕುಳಿತವರು. ಕಿರೀಟಧಾರಣ ಮಾಡಿಕೊಳ್ಳುತ್ತಿದ್ದರಂತೆ. ಆದ್ದರಿಂದ ಅವರನ್ನು ದಾಸರೆನ್ನಲಾಗುವುದಿಲ್ಲ. ಅವರ ಶಿಷ್ಯರಾದ ವ್ಯಾಸರಾಯರದೂ ಸಂಸ್ಥಾನವೇ. ಅವರ ಪದವಿ ಗುರುಪಟ್ಟಕ್ಕೆ ಹೆಸರಾದದ್ದು. ಅವರ ಹೆಸರಲ್ಲಿ ಬೆಳೆದಿರುವ ಒಂದು ಕತೆಯಂತೆ ವಿಜಯನಗರದ ಹೆಸರಿಗೆ ಕುಹೂಯೋಗ ಕೇಡು ತರುವಂತಿದ್ದಾಗ ಆ ಅಸಮಯ ಮುಗಿವವರೆಗೂ ರಾಜ ಪಟ್ಟವನ್ನು ತಾವು ವಹಿಸಿ ಆ ಬಳಿಕ ರಾಜನಿಗೇ ಅದನ್ನು ಹಿಂದಕ್ಕೆ ಒಪ್ಪಿಸಿಕೊಟ್ಟರೆಂದಿದೆ. ಅವರ ಪ್ರಭಾವ ಆ ಕಾಲದಲ್ಲಿ ದೊಡ್ಡದು. ಸಂಸ್ಕೃತ ವ್ಯಾಸಂಗ, ವೇದವಿದ್ಯೆ ತರ್ಕ ಮೀಮಾಂಸಗಳ ವಿಚಾರಗಳಲ್ಲಿ ನಾಡಿನ ಬೇರೆ ಬೇರೆ ಕಡೆಗಳಲ್ಲಿ ಪರವಾದಿಗಳನ್ನು ಗೆದ್ದು ಚೈತ್ರಯಾತ್ರೆ ಮಾಡಿಕೊಂಡು ಬಂದಿದ್ದವರು. ರಾಜಗುರುಗಳಾಗಿದ್ದ ಅವರ ಪೋಷಣೆ ಅಂಕೆಗಳಲ್ಲಿ ಬಹುದೊಡ್ಡ ವಿದ್ವದ್ವರ್ಗ ಇತ್ತೆನ್ನುತ್ತಾರೆ. ಶ್ರೀಪಾದರಾಜರ

ಹೆಸರಲ್ಲಿರುವ ಹಾಡುಗಳ ಮಾದರಿಯವೇ ಇವರು ಮಾಡಿದವು ಕೂಡ. ರಚನೆಯ ಚೌಕಟ್ಟಿನಲ್ಲಿ ಹೆಚ್ಚು ವ್ಯತ್ಯಾಸವಿಲ್ಲ. ಪಲ್ಲವಿ,ಅನುಪಲ್ಲವಿ, ಚರಣ ಸಾಮಾನ್ಯವಾಗಿ ಇವು ಗಳ ರಚನಾಂಗಗಳು; ಲಕ್ಷಣ. ಆರಾಧನೆಯ ಸಮಯಗಳಲ್ಲಿ ಜನಸಮುದಾಯ ಅಧಿಕ ವಾಗಿ ಸೇರಿದ ಸಂದರ್ಭಗಳಲ್ಲಿ ಕನ್ನಡದ ಈ ಹಾಡುಗಳನ್ನು ಶ್ರೀಪಾದರಾಯರಂತೆಯೇ ಬಳಸುತ್ತಿದ್ದುದರಿಂದ ಕನ್ನಡ ಮೈಲಿಗೆ ಭಾಷೆ, ಪ್ರಾಕೃತ ಎಂಬ ಅಲ್ಲಿಗಳೆಯುವಿಕೆ ಬೆಳಸಿ ಕೊಂಡಿದ್ದ ಶಿಷ್ಯ ವರ್ಗದಲ್ಲಿ ಅನೇಕರಿಗೆ ಗುರುಗಳ ಈ ವ್ಯವಹಾರ ಅಷ್ಟೇನೂ ಪ್ರೀತಿ ತಂದಿರಲಿಲ್ಲ. ಆದರೆ ಅವರಿಗೆ ಪ್ರತಿ ಹೇಳುವವರಾರು ? ಹೀಗಾಗಿ ಮಲೆನಾಡಿನ ಘಟ್ಟ ಪ್ರದೇಶದಲ್ಲಿಂದಲೋ ಪಂಢರಪುರದಿಂದಲೋ ದೈವದ ಆದೇಶದಂತೆ ಅವರಲ್ಲಿಗೆ ಬಂದು ಶಿಷ್ಯತ್ವವನ್ನು ಬೇಡಿ ಪ್ರಖ್ಯಾತರಾಗಿದ್ದ ರತ್ನಪಡಿ ವ್ಯಾಪಾರದ ಶ್ರೀಮಂತ ಸೀನಪ್ಪನಾಯಕ (ತನ್ನ ಐಹಿಕ ಸಂಪತ್ತನ್ನೆಲ್ಲ ಬಿಟ್ಟುಕೊಟ್ಟು) ಇವರಲ್ಲಿ ದೀಕ್ಷೆಯನ್ನು ಸೇವೆಯನ್ನು ಸ್ವೀಕರಿಸಿದಾಗ ಗುರುಗಳ ಪ್ರಭಾವದಿಂದ ಆತನಿಗೆ ದೀಕ್ಷೆಯ ಜೊತೆಗೆ ಪುರಂದರದಾಸರೆಂಬ ಹೊಸ ಹೆಸರು ಬಂದಿತು. ಈತನ ಭಕ್ತಿ ಆವೇಶಗಳು ಸಕಲ ಜನಪ್ರಿಯವಾಗಿ ಭಕ್ತಿ ಜ್ಞಾನ ವೈರಾಗ್ಯಗಳ ಸಂದೇಶವನ್ನು ಕೊಟ್ಟಿದ್ದರಿಂದ ಈತನ ಪ್ರಭಾವ ಬೆಳೆಯತೊಡಗಿತು. ಶಾಸ್ತ್ರದ ಮತ್ತು ಸಂಸ್ಕೃತದ ವಿದ್ವಾಂಸರು ಸ್ವಲ್ಪಕಾಲ ಅಸಡ್ಡೆ ಮಾಡಿದ್ದರೂ ಪ್ರತಿಭಟನೆ ನಡೆಯದೆ ಸಂಸ್ಕೃತದಲ್ಲಿನ್ನೇನು ಎಂದು ಇನ್ನೊಬ್ಬ ಕವಿ ಬೇರೆ ಹೇಳಿದಂತೆ, ವೇದ ಪುರಾಣ ಆಗಮ ಗೀತೆಗಳಲ್ಲಿ ಪ್ರಕಟವಾದ ಭಾವಗಳೂ ಉಪದೇಶವೂ ತಿಳಿಯಾದ ಸುಲಭವಾದ, ನೇರ ಹೃದಯದಿಂದ ಹುಟ್ಟಿ ಹೃದಯವನ್ನು ಮುಟ್ಟಬಲ್ಲ, ಕನ್ನಡ ನುಡಿಯಲ್ಲಿ ಬಂದದ್ದರಿಂದ ಬಹುಬೇಗ ಜನ ಪ್ರಿಯವಾದವು. ಇವರ ಕಾಲದಿಂದ ವ್ಯಾಸಕೂಟ ಮಾತ್ರ ಇರುತ್ತಿದ್ದ ವಿಜಯನಗರದ ವಿದ್ಯಾಮಂಡಳದಲ್ಲಿ ದಾಸಕೂಟವೊಂದು ತಲೆಯೆತ್ತಿ ಪ್ರಬಲಿಸಿತು. ನವಕೋಟಿ ನಾರಾಯಣನೆಂದು ಆ ಕಾಲಕ್ಕೆಲ್ಲ ಪ್ರಸಿದ್ಧನಾಗಿದ್ದ ನಾಯಕ ಎಲ್ಲವನ್ನೂ ಬಿಟ್ಟು ಹೆಂಡತಿ ಮಕ್ಕಳೊಡನೆ ಭಗವತ್‌ಕೈಂಕರ್ಯವನ್ನು ಕೈಕೊಂಡನು. ವಿಜಯನಗರದ ಬೀದಿಯಲ್ಲಿ ಕಾಲಿಗೆ ಗೆಜ್ಜೆ ಕಟ್ಟಿ ಕೈಯಲ್ಲಿ ಚಿಟಕಿ ಹಿಡಿದು ತಂಬೂರಿ ಮೀಟುತ್ತ ತನ್ನ ಭಕ್ತಿಗೀತೆಗಳನ್ನು ದಿನಾ ಹೇಳುತ್ತ ಹೋಗಿ ನಗೆಮೊಗದಿಂದ ಮಾತಾಡುತ್ತ ದಾರಿಯಲ್ಲಿ ಯಾರು ಏನ ದಾನವಾಗಿ ಕೊಟ್ಟರೆ ಅದನ್ನು ಸ್ವೀಕರಿಸಿ ತಾನಿದ್ದ ಸ್ಥಳಕ್ಕೆ ಹಿಂತಿರುಗಿದ ಮೇಲೆ ಆ ದಿನದ ಊಟಉಪಚಾರ ನಡೆಯುತ್ತಿದ್ದವು. ಎರಡನೆ ದಿನಕ್ಕೆ ಏನೂ ಉಳಿಯದಂತೆ, ಸಮಯಕ್ಕೆ ತಾವಿದ್ದ ಕಡೆ ಯಾರು ಬಂದರೆ ಅವರಿಗೆ ಅನ್ನಾಹಾರಗಳನ್ನು ಕೊಡುತ್ತಿದ್ದುದು ಆ ಕಾಲದ ಮಹದಾಶ್ಚರ್ಯವಾಗಿತ್ತು. ತನ್ನದನ್ನೆಲ್ಲ ಬಿಟ್ಟಿದ್ದರೂ ದಿನದಊಟ ಉಪಚಾರಕ್ಕೆ, ಬೇಡಿಬಂದ ಈ ಸಾಮಗ್ರಿ ಮಾರ್ಗವಾಗಿರುವಾಗ ಕೆಲವು

ಕಾಲ ಕಷ್ಟವಾಗಿ ಕಂಡಿರಬಹುದು. ಹಿಂದೆ ಈತನನ್ನು ಕಂಡಿದ್ದವರಿಗೆ ವಿಚಿತ್ರ ಎನಿಸಿದರೂ ಬಹುಬೇಗ ಮನಸ್ಸು ಈ ಜೀವನಕ್ಕೆ ನೇರ್ಪಟ್ಟು ಭಕ್ತಿಗೆ ಕುದುರಿತು. ಸಾಮಾನ್ಯವಾದ ಒಂದು ಜೀವ ತಿಳಿವಳಿಕೆಯಿಂದ ಹಣ್ಣಾಗಿ, ಗುರುಕೃಪೆಯಿಂದ ಜ್ಞಾನಬೋಧೆ ಪಡೆಯಿತು. ಆ ನಿತ್ಯ ಕರ್ಮಗಳಲ್ಲಿ ನಡೆನುಡಿಗಳಲ್ಲಿ ಶುಚಿಯಾಗಿ, ನಿರ್ವಂಚನೆಯಿಂದ ನಡೆದುಕೊಳ್ಳುತ್ತ ಕಾಲಕ್ರಮದಲ್ಲಿ ಒಂದು ಸಂಸ್ಥೆಯಂತೆ ನಡೆದುಕೊಳ್ಳುತ್ತ ಭಕ್ತಿಸಂಪ್ರದಾಯಕ್ಕೆ ನೆಲೆಮನೆಯಂತಿದ್ದ ಒಂದು ಪದ್ಧತಿಬೆಳೆಯಿತು. ವೈದಿಕಪಂಥದ ಪ್ರಕಾರ ವಿಷ್ಣುಪಾರಮ್ಯವನ್ನು ಬೋಧಿಸುತ್ತ ಈ ಸಾಹಿತ್ಯಸಂಪತ್ತು ಹುಟ್ಟಿಕೊಂಡಿತು. ಇದನ್ನು ಯಾರು ಬರೆದು ಕೊಳ್ಳುತ್ತಿದ್ದರೊ ಮೊದಲ ಪಾಠ ಎಂಥದೋ ಹಾಡುವ ಮಾರ್ಗ ಸ್ಪಷ್ಟವಾಗಿ ಹೇಗೊ, ನಮಗೆ ತಿಳಿಯದು.

ಆ ಹೊತ್ತಿಗೆ ಕರ್ನಾಟಕ ಸಂಗೀತವೊಂದು ಗೊತ್ತಿಗೆ ಬಂದಿತ್ತು. ಪಂಪನಲ್ಲಿ, ಯಶೋಧರ ಚರಿತೆಯಲ್ಲಿ ರಾಗಗಳ ಹೆಸರಿದ್ದಿತು. ಬತ್ತೀಸರಾಗಗಳೆಂಬುವು ಬಸವ ಹರಿಹರಾದಿಗಳ ಕಾಲಕ್ಕೆ ಪ್ರಖ್ಯಾತವಾಗಿದ್ದರೂ ಇವರ ಹಾಡುಗಾರಿಕೆಯ ರೀತಿಯಲ್ಲಿ ಇವರು ಇಷ್ಟು ರಾಗಗಳನ್ನು ಕೊಟ್ಟಿದ್ದರಾದರೂ ಅವನ್ನು ಆ ಕಾಲದಲ್ಲಿ ಹೇಗೆ ಹಾಡುತ್ತಿದ್ದರೆಂಬುದಕ್ಕೆ ಆಧಾರಗಳಿಲ್ಲ. ದಾಸರ ಪದಗಳೆಂಬ ಧಾಟಿಯ ಹಾಡುಗಳೇನೊ ಬಂದಿವೆ. 400 ವರ್ಷಗಳ ಅವುಗಳ ಚರಿತ್ರೆಯಲ್ಲಿ ಎಷ್ಟೋ ಜನರ ಕೈವಾಡ ಬಳಕೆಯಾಗಿ ಹಾಡುಗಳ ಪಾಠಗಳಲ್ಲಿ,ರಾಗನಿರ್ದೇಶನದಲ್ಲಿ, ಧಾಟಿಗಳಲ್ಲಿ ಮಾರ್ಪಟ್ಟಿರುವಂತೆ ಕಾಣುತ್ತದೆ. ಆದರೂ ಇವರ ಕಾಲಕ್ಕೆ ಹಿಂದೆ ತಿರುಪತಿಯಲ್ಲಿ ಪ್ರಖ್ಯಾತರಾಗಿದ್ದ ಅಣ್ಣಮಾಚಾರ್ಯರ ಸಾವಿರಾರು ತೆಲುಗು ಕೃತಿಗಳ ರಚನೆಯ ಮತ್ತು ಹಾಡುಗಾರಿಕೆಯ ಸಂಪ್ರದಾಯವಿತ್ತೆಂಬುದು ತಿಳಿದು ಬಂದಿದೆ. ಇವರೂ ಅವರೂ ಒಬ್ಬರನ್ನೊಬ್ಬರು ಕಂಡಿದ್ದರೋ ಇಲ್ಲವೊ ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಅಣ್ಣಮಾಚಾರ್ಯರು ಗೀತೆಗಳನ್ನು ಹೇಗೆ ಹೇಳುತ್ತಿದ್ದರು ಎಂಬುದಕ್ಕೆ ಪ್ರಮಾಣವಿಲ್ಲವಾಗಿ ಒಂದರಿಂದ ಒಂದನ್ನು ಸಾಧಿಸುವುದು, ಸ್ಥಾಪಿಸುವುದು ಸಾಹಸವಾಗುತ್ತದೆ. ಅದಕ್ಕಾಗಿ ಮದ್ರಾಸಿನ ಮ್ಯೂಸಿಕ್ ಅಕಾಡೆಮಿಯಂತಹ ಕರ್ನಾಟಕಸಂಗೀತವಿದ್ಯಾಸಂಸ್ಥೆ ಸಂಗೀತ ವಿದ್ವಾಂಸರನ್ನೂ ದಾಸರ ಕೃತಿಗಳನ್ನು ಸಂಗ್ರಹಿಸಿ ಅದರ ನುಡಿತದ ವಿಧಾನವನ್ನೂ ಬಲ್ಲ ಶಿಷ್ಯ ಸಂಪ್ರದಾಯದವರನ್ನು ಸೇರಿಸಿ, ಒಂದು ಗೊತ್ತಿಗೆ ಬಂದರೆ ಮೇಲಾಗುತ್ತದೆ. ಸ್ವಂತವಾಗಿ ಸೀನಪ್ಪನಾಯಕರು ಸಂಗೀತಜ್ಞರಾಗಿದ್ದಿರಬೇಕು. ಮನೆಯವರ ಕಡೆಯಿಂದಲೂ ಹೆಂಡತಿಯ ಕಡೆಯಿಂದಲೂ ಭಕ್ತರೂ ಸಂಗೀತ ಬಲ್ಲವರೂ ಆಗಿದ್ದಂತೆ ಕಾಣುತ್ತದೆ. ಗಂಡ ಹೆಂಡತಿ ಮಕ್ಕಳು ಶಿಷ್ಯವರ್ಗದವರು ಉಂಛವೃತ್ತಿಯಲ್ಲಿ ತೊಡಗಿರುವಾಗ ಮನೆಯಲ್ಲಿ ಆರತಿ ಭಜನೆ ಮಾಡುತ್ತಿರುವಾಗ, ದಾಸರೇ ಊರಿಂದೂರಿಗೆ ತಿರುಗುತ್ತಿರುವಾಗ, ತೀರ್ಥಕ್ಷೇತ್ರ

ದರ್ಶನ ಮಾಡಿದಾಗ ಕೀರ್ತನೆಗಳ ರಚನೆ ಮಾಡಿ ಅವುಗಳ ನಡೆ, ರಾಗ, ತಾಳ ಒಂದು ಕಡೆಯ ರೂಪವನ್ನು, ಎರಕ ಹೊಯ್ದು ಅಚ್ಚಾಗುವಂತೆ, ಪಡೆದುಕೊಂಡಿದ್ದಿರಬೇಕು. ಅವರ ಕಾಲದಲ್ಲಿ ಎಷ್ಟೋ ತಾಳಗಳು ಜಟಿಲವಾಗಿ ಅನಿಶ್ಚಿತವಾಗಿದ್ದುದರಿಂದ ಸ್ವಲ್ಪ ಕಡಮೆ ಸೂಳಾದಿತಾಳಗಳೆಂಬ ಸಪ್ತತಾಳಗಳು ಒಂದು ನಿಟ್ಟಿಗೆ ನಿಂತವು. ನರಹರಿ ತೀರ್ಥರು, ವ್ಯಾಸರಾಯರು, ತೆಲುಗಿನ ಅಣ್ಣಮಾಚಾರ್ಯರು ನಿರ್ಮಾಣಮಾಡಿದ ಕವಿತೆಗಳ ರಚನೆ ಹಾಡಿನ ಮಾದರಿ ಒನಪು, ಗುಣ ಒಂದು ಅಚ್ಚಿಗೆಂಬಂತೆ ಬಂದ ಹಾಗೆ ಕಾಣುತ್ತದೆ. ಅಲ್ಲಿ ಇಲ್ಲಿ ಮಾತುಗಳ ಜೋಡಣೆಯಲ್ಲಿ ಸ್ವರಗಳ ಏಳುಬೀಳುಗಳ ಮತ್ತು ನಡೆಯ ಧಾರಾಳಗಳಲ್ಲಿ ಸಂಪನ್ನತೆಗಳಲ್ಲಿ ಹೊಸಹೊಸ ಬಗೆಯ ಸಾಹಿತ್ಯಸಿದ್ಧಿ ರಾಗತಾಳಸಿದ್ಧಿ ಪಡೆದಿರುವಂತೆ ಇದೆ.* ಸಂಪ್ರದಾಯವಾಗಿ ಬಂದ ರಾಗಗಳ ಜೀವ ಸ್ವರ ನುಡಿವಾಗ ಖಚಿತವಾಗಿ ದಾಸರ ರಚನೆ ಪ್ರಮಾಣವಾಗುತ್ತದೆ ಎಂಬ ಮಾತನ್ನು ಕಂಡು ಈಗಿನ ಕಾಲದ ಸಂಗೀತ ವಿದ್ವಾಂಸರು ಇದಕ್ಕೆ ಸ್ವರಪ್ರಸ್ತಾರ ಹಾಕಿ ತಾಳ ಕಟ್ಟುಗಳನ್ನು ರಚಿಸಿಕೊಟ್ಟಿದ್ದಾರೆ.

ಈ ಪದಗಳು ಅಥವಾ ಕೀರ್ತನೆಗಳು ಎಂಬ ಹೆಸರಿನ ಕೃತಿಗಳು ನುಡಿದು ಬಂದವು. ಹಾಡಾಗಿ ತಾಳದ ಒಂದು ಚೌಕಟ್ಟಿನಲ್ಲಿ ಬಂದವು ಎಂದದ್ದರಿಂದ ಕೇಳಿದವರ ಕಿವಿಗಳಿಗೆ ನೇರವಾಗಿ ಹೋಗಿ ಅವರ ಮನಸ್ಸಿನ ಮೇಲೆ ಪ್ರಭಾವ ಬೀರುತ್ತವೆ. ಕೃತಿ ನಿರ್ಮಾಣಕಾರರ ಸನ್ನಿವೇಶ ಇವುಗಳ ಹಿಂದೆ ಇದ್ದ ಕಾವ್ಯಗಾನಗಳ ರಮ್ಯತೆ, ಇವುಗಳ ಜೊತೆಗೆ, ಸ್ವಚ್ಛವಾದ ನಿರಾಳವಾದ ದಾಸರ ಬದುಕಿತ್ತು. ಆದುದರಿಂದ ಅವಕ್ಕೆ ಮನಸ್ಸನ್ನು ಒಲಿಸುವ ಶಕ್ತಿ ಸಹಜವಾಗಿತ್ತು. ಪ್ರಯತ್ನಪಟ್ಟು ನುಡಿಯುತ್ತಾರೆ, ಏನೋ ಚಮತ್ಕಾರ, ಪಾಂಡಿತ್ಯ ಎಂಬ ಆಲೋಚನೆ ಬರುತ್ತಿರಲಿಲ್ಲ. ಬೀದಿಯಲ್ಲಿ ಹೋಗುತ್ತಿರುವಾಗ ಯಾವ ಜನ ಸಿಕ್ಕಿದರೆ ಅವರಿಗೆ ಅವರ ಕಷ್ಟ ಸುಖ ವಿಚಾರಿಸಿ ತಮ್ಮ ಕಾಲದಲ್ಲಿ ಬದುಕು ಯಾವ ಸತ್ಯ, ಕಪಟ ಉಳ್ಳವಾಗಿತ್ತೊ, ಮಾತಿನಲ್ಲಿಯೊ ನಡತೆಯಲ್ಲಿಯೊ ಆಲೋಚನೆಯಲ್ಲಿಯೊ ಯಾವ ಸರಿತಪ್ಪು ಅಪ್ರಾಣಿಕತೆಗಳಿದ್ದುವೋ ಇವನ್ನೆಲ್ಲ ಸಂಕೋಚ ಪಡದೆ ದಾಸರು ಧಾರಾಳವಾಗಿ ಕುರಿತು ಹೇಳುತ್ತಿದ್ದರು. ಕೇವಲ ಆಕ್ಷೇಪಣೆ ಮಾಡಬೇಕೆಂದಲ್ಲ. ದಿನಜೀವನ ಚೊಕ್ಕವಾಗಬೇಕು, ವ್ಯಕ್ತಿಗಳ ಬದುಕು ಶುಚಿಯಾಗಬೇಕು, ಸಾತ್ವಿಕವಾಗಬೇಕು, ಒಳಗೊಂದು ಹೊರಗೊಂದು ಏನು ಪ್ರಯೋಜನ, ಎಂಬಂತೆ ಮಾನವ ಕಾರುಣ್ಯದಿಂದ ನುಡಿಯುತ್ತಿದ್ದುದರಿಂದಲೂ

---

* ಇಷ್ಟು ಹೊತ್ತಿಗೆ ಪುಂಡರೀಕವಿಠಲರೆಂಬವರು ಉತ್ತರ ದಿಕ್ಕಿನಲ್ಲಿ, ಅಲ್ಲಿನ ರಾಜ, ಶ್ರೀಮಂತ, ಸಂಗೀತ ವಿದ್ಯಾಮಂಡಲಗಳಲ್ಲಿ ಈ ಕೃಷ್ಣಪಂಥದ ಸಂಪ್ರದಾಯವನ್ನು ಪರಿಚಯ ಗೊಳಿಸಿದ್ದರು.

ಪುರಂದರದಾಸರಂಥವರ ನುಡಿತ್ರದಲ್ಲಿ ಒಂದು ನಗೆ, ಬಗೆ, ಹಾರ್ದತೆ, ಮಾನವತೆ ಇದ್ದುದರಿಂದ ಅವನ್ನು ಸ್ವೀಕರಿಸುವುದು ಸುಲಭವಾಯಿತು. ಭಾವ ಯಾವುದೂ ಭಾರತಕ್ಕೆ ಹೊಸದಲ್ಲ. ಮೊದಲಿಂದ ವೇದಶಾಸ್ತ್ರಪುರಾಣ ಇತಿಹಾಸಗಳಲ್ಲಿ, ಕಾವ್ಯದಲ್ಲಿ, ವಚನಗಳಲ್ಲಿ, ಸಂತರು ನೋಡಿದುದೇ ಲೊಕವಿವೇಕ, ಅನುಭವ ತುಂಬಿರುತ್ತವೆ. ಎಷ್ಟು ಸಲ ಹೇಳಿದರೂ ಹಳಸದ ಮಾಸದ ಧಾತುವುಳ್ಳದ್ದೇ ಆಗಿರುವಾಗ ಗಾದೆ ಲೊಕೋಕ್ತಿ ಎಲ್ಲರ ಬದುಕಿಗೂ ಪರಿಚಿತವಾದುದು.* ವಾಡಿಕೆಯುಳ್ಳದ್ದು ಆಗಿರುತ್ತಿದ್ದುದರಿಂದ ಇವರ ಉಕ್ತಿಗೆ ಹೆಚ್ಚು ಬೆಲೆ ವ್ಯಾಪಕತೆ ಬಂತು. ಹೀಗೆ ಸಂಗೀತ, ಸಾಹಿತ್ಯ, ಜೀವನ ಸುಧಾರಣೆ, ಮೂಲಭೂತ ಸತ್ಯ ಸೇರಿಕೊಂಡದ್ದರಿಂದ ಅವಕ್ಕೆ ಸ್ವಾಗತ ನೇರವಾಯಿತು. ತಮ್ಮನ್ನೂ ತಮ್ಮ ಲೋಪದೋಷಗಳನ್ನೂ ಕುರಿತೇ ದಾಸರು ನುಡಿಯುತ್ತಿದ್ದಾರೆ— ಎಂದರಿತಾಗಲೂ ಒಳ್ಳೆಯ ದೃಷ್ಟಿತಂದು ಕೊಟ್ಟು ದೈವಭಕ್ತಿಯ ಕಡೆಗೆ ಉದಾರ ಜೀವನದ ಕಡೆಗೆ ಮನಸ್ಸು ತಿರುಗುವಂತೆ ಮಾಡುತ್ತಿದ್ದುದರಿಂದ ದಾಸರಿಗೆ ಎಲ್ಲೆಲ್ಲಿಯೂ ಪುರಸ್ಕಾರ ದೊರೆಯಿತು. ಭಗವದ್‌ಗೀತೆಯೂ ವಚನಗಳೂ ಹಿಂದೆ ಯಾವ ಕೆಲಸವನ್ನು ಮಾಡಿದ್ದವೋ ಅದೇ ಕೆಲಸ. ಹರಿನಾಮ ಸಂಕೀರ್ತನೆ ಅದಕ್ಕೆ ಬೆನ್ನೆಲುಬಾಗಿ ನಿಂತುಕೊಂಡಿತು. ರಾಜರ ಆಸ್ಥಾನದಲ್ಲಿ, ವ್ಯಾಸರಾಯರ ಸಮ್ಮುಖದಲ್ಲಿ, ಆರಾಧನೆ ಭಜನೆಗಳು, ಬೀದಿಬೀದಿಯಲ್ಲಿ ಹೋದಹೋದಲ್ಲಿ ಇವು ಕೇಳುತ್ತಿದ್ದರಿಂದ ಕೇಳಿದ ಕಿವಿಗಳು ಆಕೃಷ್ಟವಾಗಿ ಒಲಿದು ನಿಂತವು. ಈ ಹಾಡುಗಳ ಅಚ್ಚು ತಮ್ಮದೇ ಆದ ಒಂದು ಕಟ್ಟನ್ನೂ ಗತಿಯನ್ನೂ ಅಚ್ಚೊತ್ತಿದಂತೆ ನಿಲ್ಲಿಸಿದವಾಗಿ ನೂರಾರು ಹಾಡುಗಳು ನೆನಪಲ್ಲಿ ಉಳಿಯುವಂತೆ, ಹೊಳಲು ಕೊಡುವಂತೆ, ಮರೆಯಲಾಗದಂತೆ ಸ್ಥಾನ ಪಡೆದವು. ಬರೆದಿಟ್ಟರೇನು, ಇಲ್ಲದಿದ್ದರೇನು ಇವು ಸುಲಭವಾದ್ದರಿಂದ ಒಂದೆರಡು ಸಲ ಕಿವಿಯ ಮೇಲೆ ಬಿದ್ದರೆ ಆಯಿತು, ಕೇಳಿದವರಿಗೆ ಬರೆದಿಟ್ಟುದಕ್ಕಿಂದ ಹೆಚ್ಚು ಪ್ರಭಾವವುಳ್ಳವಾಗಿದ್ದವು. ದಾಸರ ಹಾಡುಗಳಿಗೆ ಹೆಚ್ಚಾಗಿ ತರ್ಕ ವೇದಾಂತಾದಿಗಳ ಅಥವಾ ವಾದ ವಿವಾದಗಳ ಸಾಧನೆ, ಗ್ರಹಣ ಅಗತ್ಯವಾಗಿರಲಿಲ್ಲ. ಅದು ಸಿದ್ಧಾನ್ನ. ಸಂಗೀತದ ಚೌಕಟ್ಟು ಅದನ್ನು ಒಂದು ಇತಿಯಲ್ಲಿ ರಂಜಕವಾಗಿ ಸವಿಯಾಗಿ ಉಳಿಸಿಕೊಡುವ ಸಾಧನವಾಯಿತು. ಸಂಗೀತವೇ ದಾಸರ ಉದ್ದೇಶವಲ್ಲ. ಈ ಬಗೆಯ ಲೋಕೋಪಕಾರ, ಜನಕ್ಕೆ ಅನ್ನ ಬಟ್ಟೆಗಳನ್ನು ಒದಗಿಸಿಕೊಡುವ ಮಾರ್ಗಕ್ಕಿಂತಲೂ, ಹಿರಿದಾದುದು. ನಿತ್ಯ ಜೀವನವನ್ನು ಉತ್ತಮಗೊಳಿಸುವ ಸಾಧನವಾಗಿ ಮನಸ್ಸಿಗೆ ತೃಪ್ತಿ ಶಾಂತಿಗಳನ್ನು ಸಂತೋಷವನ್ನು ಉನ್ನತ ಭಾವನೆಗಳನ್ನು ಕೊಟ್ಟು, ಅವರಲ್ಲಿ ನೀತಿಯ ಕಡೆಗೆ ದೇವರ ಕಡೆಗೆ ಮನಸ್ಸನ್ನು

* ಆದ್ಯ, ಆರಾಧ್ಯ ಎಂಬ ಉಕ್ತಿಗಳ ವ್ಯಾಪ್ತಿಯನ್ನು ಕುರಿತು ವ್ಯಾಸಂಗ ನಡೆದರೆ ಈ ಸಂಬಂಧದಲ್ಲಿ ಉಪಕಾರವಾದೀತು.

ತಿರುಗಿಸಿತು. ವೇದಾಂತದ ಮಾಧ್ವ ಸಂಪ್ರದಾಯ, ವಿಷ್ಣುಭಕ್ತಿ, ಭಕ್ತ ವರ್ಗದ ಕಥೆಗಳು, ಅವತಾರದ ಕಥೆಗಳು. ಎಲ್ಲ ಸೇರಿಕೊಂಡದ್ದರಿಂದ ಯಾವುದನ್ನೂ ಹೊಸದಾಗಿ ವಿವರಿಸಬೇಕಾಗಿರಲಿಲ್ಲ. ಶಿವನ ಕತೆಗಳು ವಚನಕಾರರಲ್ಲಿ ಅಥವಾ ಶೈವಪುರಾಣಗಳಲ್ಲಿ ಹೇಗಿರುತ್ತಿದ್ದವೊ, ಹಾಗೆ ವಿಷ್ಣು ಕತೆಗಳು ಇಲ್ಲಿ ಈ ಕಾರ್ಯಕ್ಕೆ ದುಡಿದವು. ಪುರಂದರದಾಸರಂಥ ಮಹಾತ್ಮರು, ತಮ್ಮ ಉತ್ಥಾನತೆಗಾಗಿಯೆ ಇದನ್ನೆಲ್ಲ ನುಡಿಯುತ್ತಿದ್ದಾರೆಂಬ ನಂಬಿಕೆ ಇದಕ್ಕೆ ಜನರನ್ನು ಬಲಿಸಿತು.

ವಿಷ್ಣು ಭಕ್ತಿ ಎಂದೆ. ಇಷ್ಟು ಹೊತ್ತಿಗೆ ವಿಷ್ಣುವಿನ ಹತ್ತು ಅವತಾರಗಳಲ್ಲಿ ರಾಮಕೃಷ್ಣರ ಅವತಾರಕ್ಕೂ ಬಂದಿದ್ದ ಜನಪ್ರೀತಿ ಬೇರೆ ಅವತಾರಗಳಿಗೆ ದೊರೆತಿರಲಿಲ್ಲ. ರಾಮಾವತಾರಕ್ಕಿಂತಲೂ ಕೃಷ್ಣಾವತಾರದ ಕಥೆಗಳು ಹೆಚ್ಚು ಮೋಹಕವಾಗಿ ಹೆಂಗಸರನ್ನೂ ಗಂಡಸರನ್ನೂ ಮಕ್ಕಳನ್ನೂ ಒಲಿಸಿದವು. ಈ ಕೃಷ್ಣಕತೆಗಳಲ್ಲಿಯೂ ಪಾಂಡವರ ಜೊತೆ ಕೃಷ್ಣನು ಮಹಾಭಾರತ ಯುದ್ಧಾದಿ ಪ್ರಸಂಗಗಳಲ್ಲಿ ಕೊಟ್ಟ ನೆರವು, ಮಾಡಿದ ಉಪದೇಶಗಳು ಹಾಗಿರಲಿ —ಕೃಷ್ಣ ಹುಟ್ಟಿದ ಸಂದರ್ಭ. ಬೆಳದದ್ದು; ಕಷ್ಟ ಕಾರ್ಪಣ್ಯಗಳಿಗೆ ಈಡಾದದ್ದು, ಕಂಸ ಜರಾಸಂಧಾದಿಗಳ ಉಪಟಳ, ಅವರನ್ನು ತೀರಿಸಿದ ರೀತಿ–ಇವಕ್ಕೆ ಹೆಚ್ಚು ಗಮನ ಹೋಯಿತು. ಅದಕ್ಕೂ ಹೆಚ್ಚಾಗಿ ಕೃಷ್ಣನ ಬಾಲಲೀಲೆಗಳ ಪ್ರಪಂಚ ಹೆಂಗಸರು ಮಕ್ಕಳೆಲ್ಲರ ಹೃದಯಗಳನ್ನೂ ರಮಿಸಿತು. ಇಲ್ಲಿ ಒಂದು ಕಡೆ ಗೋಪೀವಿಲಾಸವಾದರೆ ಇನ್ನೊಂದು ಕಡೆ ಯಶೋದೆಯ ವಾತ್ಸಲ್ಯ—ಒಂದು ಮೃದು ಅಥವಾ ಶೃಂಗಾರ ಭಾವ, ಇನ್ನೊಂದು ವಾತ್ಸಲ್ಯಭಾವ–ಇದಕ್ಕೆ ಅತಿಶಯ ಪ್ರಾಮುಖ್ಯತೆ ದೊರೆಯಿತು. ಸಣ್ಣ ವಯಸ್ಸಿನ ಕೃಷ್ಣ ಅವನ ಮುದ್ದು ಆಟ, ಕುಣಿತ ಕೆಲೆತ. ಸಾಹಸ, ದೈವಲೀಲೆಯ ಪ್ರಕಾರದಂತಿದ್ದ ಪವಾಡಗಳು ಸೇರಿಕೊಂಡವು. ಇವನ್ನು ಕುರಿತು ಹಾಡುವ ದಾಸರೂ ತಾಯಿ ಯಶೋದೆಯ ಹಾಗೆ, ಜೊತೆಯ ಆಟದ ಹುಡುಗನ ಹಾಗೆ ಬಣ್ಣಕಟ್ಟಿದರು, ಕಟ್ಟಿದರೇನು ? ಆ ಭಾವದಲ್ಲಿಯೇ ನುಡಿದರು. ಮಹಾಭಾರತದಲ್ಲಾಗಲಿ ಭಾಗವತದಲ್ಲಾಗಲಿ ರಾಧಾ ಸಂಬಂಧಿಸಿದ ಪ್ರೇಮ ಬಂಧನ ಕಾಣುವುದಿಲ್ಲವಾಗಿ ಪ್ರೌಢಮಟ್ಟದ ಶೃಂಗಾರವಿಲಾಸ ರತಿಸಂಪ್ರಯೋಗ ಆ ಪ್ರಪಂಚಕ್ಕೆ ಸಂಬಧಿಸಿದ ಮಾತುಕತೆಗಳಿಗೆ ಹೆಚ್ಚು ಗಮನ ಹೋಗಲಿಲ್ಲ. ಆದರೆ ಈ ದಾಸರಕಾಲ ಮಹಾಭಾರತ ಭಾಗವತಗಳ ಕಾಲಕ್ಕಿಂತ ಸಾವಿರಾರು ವರ್ಷಗಳ ಈಚಿನದು. ಆ ಕಾಲದ ಕತೆಗಳು ವಿಶದಗೊಂಡು ಜನದ ನಂಬಿಕೆಗಳಿಗಾಗಿ ನಿಂತಿದ್ದುವು. ಕೃಷ್ಣನು ಮಗುವಾಗಿದ್ದಾಗಿನ ಕತೆಗಳು ಆ ಅವತಾರಕಾಲದ ಹಿಂದಿನ, ಅದರ ತರವಾಯ ಇನ್ನೂ ಬರಬೇಕಾಗಿದ್ದ ಬೌದ್ಧ ಕಲ್ಕಿ ಇವರ ಪ್ರಸಂಗಗಳು, ಕಾಲದ ಸಾಂಗತ್ಯವನ್ನೂ ಲಕ್ಷಿಸದೆ ವರ್ಣನೆಗಳಲ್ಲಿ ಸ್ತೋತ್ರಗಳಲ್ಲಿ ಸೇರಿಕೊಂಡವು, ಇವನ್ನೆಲ್ಲ ನಾವು ಒಟ್ಟಿಗೆ ನುಂಗಬೇಕಾಗುತ್ತದೆ. ಅದು ಇಲ್ಲಿ ಸಂಪ್ರದಾಯ.

ಎರಡು ಸಂಗತಿಗಳನ್ನು ಕುರಿತು ಒಂದು ಮಾತು ಹೇಳಬಹುದು. ಗುರುವಿನ ಅನುಗ್ರಹವಿಲ್ಲದೆ ಯಾವ ತಿಳವಳಿಕೆಯೂ ಬಾರದು, ಮುಕ್ತಿ ಸಿದ್ಧಿಸುವುದಿಲ್ಲ. ಗುರು ನುಡಿದುದು ತತ್ತ್ವ,ಹೇಳಿದುದು ಆದೇಶ, ಆ ಗುರುವಿನ ಗುಲಾಮನಾಗಬೇಕು ಎಂಬಂತಹ ಭಾವ ಇಲ್ಲಿ ಹೆಚ್ಚಾಗಿ ಕಾಣುತ್ತದೆ. ಗುರುವಿಗೆ ನಮ್ಮ ದೇಶದಲ್ಲಿ ದೊರೆತ ಪ್ರಾಧಾನ್ಯ ಸ್ವತಂತ್ರ ಆಲೋಚನೆಗೆ ಆತಂಕವಾಗಿ ನಿಲ್ಲುವ ಸಂದರ್ಭವಾಗುತ್ತದೆ. ಆದರೆ ಪ್ರತಿಯೊಬ್ಬ ಭಕ್ತನೂ ಶಿಷ್ಯನೂ ಸ್ವತಂತ್ರವಾಗಿ ಬಂದು, ಅವನು ಆ ದಾರಿಯಲ್ಲಿ ಹೋಗಲು ಸ್ವತಂತ್ರನಾಗಬೇಕೆಂಬ ಒಂದು ಬುದ್ಧಿ ಬೆಳೆಯಲು ಅವಕಾಶವಾಗಬೇಕು.* ಇನ್ನೊಂದು ಸಂಗತಿ: ಇದು ಮತದ ಪ್ರಪಂಚವಾದ್ದರಿಂದ ಜೀವನದ ಸಮಸ್ತ ವ್ಯಾಪಾರಕ್ಕೂ ಅದರ ಪ್ರಕಾರವಾದ ಭಕ್ತಿಗೂ ನಡೆದರೆಯೆ ಮುಕ್ತಿ ಎಂಬ ಭಾವ ಪ್ರಬಲಿಸಿದುದರಿಂದ, ವ್ಯಕ್ತಿ ತನ್ನದಾಗಿ ಏನನ್ನೂ ಉಳಿಸಿಕೊಳ್ಳದೆ ತನ್ನನ್ನೂ ತನ್ನ ಸಮಸ್ತವನ್ನೂ ಆರಾಧ್ಯ ದೇವತೆಗೆ (ಗುರುವಿನ ಮೂಲಕವೊ, ಸ್ವತಂತ್ರವಾಗಿಯೋ!) ಅರ್ಪಿಸಿಬಿಡಬೇಕಾಗಿತ್ತಾದ್ದರಿಂದ ಯಾವ ಸ್ವಾತಂತ್ರ್ಯವೂ ವ್ಯಕ್ತಿಗಿರಲಿಲ್ಲ. ನಂಬಿಕೆ, ನೆಚ್ಚು ಪರವಾಗತ್ಯ. ವಚನಕಾರರೂ ಇದನ್ನೇ ಹೇಳಿದ್ದರು. ಹರಿದಾಸರೂ ಅದನ್ನೇ ಹೇಳಿದರು, ಶೈವದಲ್ಲಿ ಶಿವ; ಇಲ್ಲಿ ಹರಿ. ಅದರ ಭಕ್ತರಿಗೆ ಅಲ್ಲಿ; ಇದರ ಭಕ್ತರಿಗೆ ಇಲ್ಲಿ ಮುಕ್ತದ್ವಾರ; ಮಾರ್ಗ ಇದು. ಸರ್ವಾರ್ಪಣ ಬುದ್ಧಿ ಇಲ್ಲಿ ವ್ಯಕ್ತಿಯನ್ನು ಪೂರ್ತಿಯಾಗಿ ಹರಿಯ ಪರವಶ ಮಾಡುತ್ತದೆ. ಅಲ್ಲಿ ಶರಣಭಾವ, ಇಲ್ಲಿ ಈ ಭಕ್ತಿಭಾವ. (ವಿಶಿಷ್ಟಾದ್ವೈತದಲ್ಲಿ ಪ್ರಪತ್ತಿಭಾವ) ಹೆಚ್ಚು ಜನಕ್ಕೆ ಖಚಿತವಾಗಿ ನಂಬಿಕೆ, ಶ್ರದ್ಧೆ, ಒಲವು ಬರುವಂತಾಗಿ ಅವರ ಬದುಕು ಈ ಲೋಕದ್ದಲ್ಲ, ಪಾರಲೌಕಿಕವಾದ್ದು. ಆಧ್ಯಾತ್ಮ ಸಾಧನೆಯಂತಿದ್ದ ಒಂದರ ಕಡೆಗೆ ತಿರುಗಿದುದರಿಂದ ಇದು ಲೌಕಿಕದ ಎಲ್ಲ ವ್ಯಾಪಾರಗಳಿಗಿಂತಲೂ ಹೆಚ್ಚು ಮುಖ್ಯವಾದುದು ಎಂಬ ಭಾವನೆ ಜನಕ್ಕೆ ಬಂದು ಕೇಳಿದವರ ಮತ್ತು ಒಲಿದವರ ಮನಸ್ಸನ್ನು ನೇರ್ಪಡಿಸಿತು.

ಇನ್ನೊಂದು ಆಡುಮಾತನ್ನಾಡಿದರೆ ಓದುಗರು ಕ್ಷಮಿಸಬೇಕು. ಒಂದು ಕಡೆ ಇದು ಶಕ್ತಿಯಾದರೆ, ಲೌಕಿಕವಾಗಿ ಅಷ್ಟೇ ಶಕ್ತಿಯನ್ನು ಉಳಿಸಿಕೊಟ್ಟೀತೆ, ಅದು ಲೌಕಿಕ ಆರ್ಥಿಕ, ರಾಜಕೀಯ, ಸಾಮಾಜಿಕ ಜೀವನಗಳಲ್ಲಿ ರಕ್ತಿ ಸಮಸ್ತಗಳನ್ನು ಕಾಪಾಡಿಕೊಳ್ಳುವ ವಿಷಯದಲ್ಲಿ ನೆರವಾಯಿತೆ ಎಂಬ ಪ್ರಶ್ನೆಯನ್ನು ನಾವು ಇಂಥಲ್ಲಿ ಕೇಳುವುದಿಲ್ಲ. "ಮಾನವ ಜನ್ಮ ದೊಡ್ಡದು. ಇದ ಹಾನಿ ಮಾಡಲುಬೇಡಿ ಹುಚ್ಚಪ್ಪ

---

* ಸ್ವತಂತ್ರ ಆಲೋಚನಾ ಶಕ್ತಿಯಿಲ್ಲದ ಬಹುಜನಕ್ಕೆ ಈ ವಿಧಾನ ಮಿತಿ ಆಗಿತ್ತಾದರೂ ಇಂಥವರಿಗೆ ಇದು ಅಡ್ಡಿಯಾಯಿತು. ವ್ರಾತ್ಯ, ನಾಸ್ತಿಕ, ಪಾಷಂಡಿ, ಮಾತುಗಳ ಬಳಕೆ ಅಂಥವರಿಗೆ ಹಿಂಸೆಯಾಯಿತೇನೊ.

ಗಳಿರಾ" ಎಂದೂ, "ಈಸಬೇಕು, ಇದ್ದು ಜೈಸಬೇಕು" ಎಂದೂ ಲೋ ಕ ಜೀವನದಲ್ಲಿ ವಿರಕ್ತಿ ಸಾಧಿಸಬೇಕೆಂದು ವ್ಯಕ್ತಿಗಳಿಗೆ ಜೀವನದ ಸಾಫಲ್ಯವನ್ನೂ ಬೋಧಿಸಿದರು. ಮತತತ್ತ್ವಗಳಲ್ಲಿ ಹೇಸಿಕೆಯುಂಟುಮಾಡಲಿಲ್ಲವಾದರೂ ಪರದೇಶದ ದಾಳಿಕಾರರು ಬಂದು ಈ ನಾಡನ್ನು ಆಕ್ರಮಿಸಿಕೊಂಡು ಜನವರ್ಗವನ್ನು ಶೋಷಿಸುತ್ತಾ ಹಿಂಸಿಸುತ್ತಾ ಗುಲಾಮಗಿರಿಗೆ ತಳ್ಳುತ್ತಿದ್ದ ಕಾಲದಲ್ಲಿ ಅವರನ್ನು ಎದುರಿಸಲು ತಕ್ಕ ವೀರ್ಯವನ್ನು ಕ್ಷಾತ್ರವನ್ನು ಇವರಿಂದ ಕಸಿದುಕೊಂಡು ಬಿಟ್ಟಿತೇನೊ ಎನಿಸುತ್ತದೆ. "ಅಲ್ಲಿದೆ ನಮ್ಮ ಮನೆ ಬಂದೆ ಇಲ್ಲಿ ಸುಮ್ಮನೆ" ಎಂಬ ಮಾತು ಮೋಹಗೊಳಿಸಬಲ್ಲದು. ಲೋಕದ ಸಮಾಸ ಕರ್ತವ್ಯಗಳಿಂದಲು ತಪ್ಪಿಸಿಕೊಳ್ಳುವ ನಿರ್ವೀರ್ಯರಾಗುವ ಅವಕಾಶವಾಯಿತು. ಜೊತೆಗೆ ನಮ್ಮ ದೇಶದಲ್ಲಿ ಮೊದಲಿಂದಲೂ ಪ್ರಬಲವಾಗಿ ಬೆಳೆದ ಕರ್ಮಫಲ, ಕರ್ಮಫಲದ ಭೋಗದ ಅನಿವಾರ್ಯತೆ,ಪುನರ್ಜನ್ಮವಾದ ಒಂದು ಜನ್ಮದಲ್ಲಿ ಅಲ್ಲದಿದ್ದರೂ ಇನ್ನೊಂದು ಜನ್ಮದಲ್ಲಿ ತೀರಿಸಬೇಕು ಎಂಬ ಭಾವ, ಇಲ್ಲಿ ಈಗಿನ ವ್ಯಕ್ತಿಶಕ್ತಿಯನ್ನು ಕುಂಠಿತಮಾಡಿತೇನೊ. ಯಾವುದಕ್ಕೂ ನನಗೆ ಸ್ವತಂತ್ರವಿಲ್ಲ. ಎಲ್ಲ ಅವನ ಇಚ್ಛೆ ಎಂಬುದು ಅಫೀಮಸಂತಾಯಿತು. ಹಿಂದಿನದನ್ನು ಅನುಭವಿಸುತ್ತಿದ್ದೇವೆ. ಮುಂದೆ ತೀರಿಸಬೇಕಾದೀತು. ಇಂದಿನದು ಕರ್ಮಫಲ. ಅವನ ಇಚ್ಛೆ ಎಂಬ ಮಾತು ಲೌಕಿಕ ಜೀವನಕ್ಕೆ ನಿಷ್ಕ್ರಿಯತೆ ತಂದಿತು. 'ರಾಮ' ಎಂಬ ಒಂದು ಹೆಸರೊ ಶಿವ ಎಂಬುದೊ ಹರಿ ಎಂಬುದೋ ಮನಸ್ಸಿಗೆ ಬಂದರಾಯಿತು.* ಅದನ್ನು ನುಡಿದುಕೊಂಡರಾಯಿತು. ಸಮಸ್ತವೂ ಸಾಧಿತವಾಗುತ್ತದೆ ಎಂದು ಅಗ್ಗದ ಮತ್ತು ಸುಲಭವಾದ ಮಾತು ಪ್ರಕಾರವಾಗಿ ಪ್ರತಿಯೊಬ್ಬರೂ ತಾವು ಅಷ್ಟು ಮಾಡಿಕೊಂಡರೆ ಸಾಕು ಎಂಬ ಭಾವ ಬೆಳೆದಾಗ, ಲೌಕಿಕಶಕ್ತಿಗೆ ಬೆಲೆಯಿಲ್ಲದಾಗುತ್ತದೆ. ದಂಡು ಬಂದರೇನು, ದಾಳಿ ಬಂದರೇನು, ಯಾರು ಆಳಿದರೇನು, ಯಾರು ದುಡಿದರೇನು, 'ಹರಿಯ ಭಜಿಸು ಮನವೆ' ಎಂಬುದು ಜಡ, ಮಾದಕ ಆಗಬಲ್ಲದು. ಇಂಥ ಮಾತುಗಳನ್ನು ಹೇಳಲು ಸಂಕೋಚವಾಗುತ್ತದೆ, ಆದರೂ ಒಂದು ಕಾಲವನ್ನು ಶುಚಿಗೊಳಿಸಿ ಸುಧಾರಿಸಿ ಜೀವನಕ್ಕೆ ತೃಪ್ತಿಯನ್ನು ಸಂತೋಷವನ್ನು ಶಾಂತಿಯನ್ನು ತಂದುಕೊಟ್ಟು, ಮನಸ್ಸಿಗೊಂದು ಶಿಕ್ಷಣವನ್ನು ಹದವನ್ನು ತಂದುಕೊಟ್ಟು, ಈ ಭಕ್ತಿಮಾರ್ಗ ಒಂದು ಜನತೆಯಾಗಿ ನಮಗೆ ಎಷ್ಟು ಉಪಕಾರ ಮಾಡಿತು, ಸಾಕಲ್ಯದಿಂದ ಅಷ್ಟೇ ಮಾಡಿತೆ?

---

* ನಾರಾಯಣ ಎಂಬ ಒಂದು ಹೆಸರನ್ನು ಸಾಯುವಾಗ ನುಡಿದು ಮುಕ್ತಿ ಪಡೆದ ಅಜಾಮಿಳನನ್ನು ಉದಾಹರಿಸಬಹುದು. ಯಾವಾಗ ನುಡಿದರೂ ಎಲ್ಲಿಯೂ ಭಕ್ತಿ ಹೃನ್ಮೂಲವಾಗಿಲ್ಲದಿದ್ದರೆ ಅದಕ್ಕಾಗಿ ಯಾವ ಯತ್ನವನ್ನೂ ಮಾಡದೆಹೋದರೆ ಅಷ್ಟು ಅಲ್ಪದಲ್ಲಿ ಸುಲಭವಾಗಿ ಸಿದ್ಧಿ ದೊರಕುತ್ತದೆಂದು ಹೇಳುವುದು ತಪ್ಪಾದೀತು. ಎಲ್ಲವನ್ನೂ ಅತಿಗೆ ತೆಗೆದುಕೊಂಡು ಹೋಗಿ ತೋರಿಸುವ ಇದು ನಮ್ಮ ನಾಡಿನ ಕಥೆಗಳಲ್ಲಿನ ಪ್ರಾರಬ್ಧ.

ಎಂದು ಪ್ರಶ್ನೆ—ಕೇಳುವವರುಂಟು. ಇದು ಈ ಕಾಲದ ಕೆಲವರ ಮಾತು. This is my prayer to Him, give me the store never to bend my knees before insolent might ಎಂಬ ಉತ್ತರನಾಗುವಂಥದು.

ದಾಸರು ಅನೇಕ ಹಾಡಿನ ಪ್ರಕಾರಗಳನ್ನು ರಚಿಸಿದರು. ಕೀರ್ತನೆ ಅಥವಾ ಪದ ಎಂಬ ಹಾಗೆ ಸುಳಾದಿ, ಉಗಾಭೋಗ ಎಂಬ ಇನ್ನೆರಡು ಮುಖ್ಯ ಬಗೆಗಳುಂಟು. ಈ ಶಬ್ದಗಳ ನಿಷ್ಪತ್ತಿ ಖಚಿತವಾಗಿ ಇದೇ ಸರಿ ಎಂದು ತೀರ್ಮಾನವಾಗಿಲ್ಲವಾದರೂ 'ಸೂಡ' ಒಂದು ತಾಳಕ್ರಮ ಬಹುಶಃ ಸೂಡಾದಿ>ಸುಳಾದಿ ಎಂಬುದು ವಿದ್ವಾಂಸರು ಬಲಿದುದು. ಸುಳದ ಹಾದಿ, ಸುಲಭದ ಹಾದಿ, ಇತ್ಯಾದಿಗಳು ಸುಲಭೀಕರಣ ಮತ್ತು ವಿಷಯವನ್ನು ರಮ್ಯವಾಗಿಯೊ ಚಾಣವಾಗಿಯೊ ವಿವರಿಸುವ ವಿಧಾನಗಳು. ಸಾಮಾನ್ಯ ವಾಗಿ ಪದ ಅಥವಾ ಕೀರ್ತನೆಗಳಲ್ಲಿ ಒಂದು ಪಲ್ಲವಿ ಒಂದು ಅನುಪಲ್ಲವಿ, ಮೂರು ನಾಲ್ಕಾದರೂ ಚರಣಗಳ ರಚನೆಯ ವಿಸ್ತರಣವಿರುತ್ತದೇ ಎಂದೇಅನುಪಲ್ಲವಿ ಅಪರೂಪ ವಾಗಿ ಇಲ್ಲದಿರುವುದುಂಟು. ಯಾವ ಮುಖ್ಯ ತತ್ತ್ವವನ್ನೊ ವಿಷಯವನ್ನೊ ಭಾವ ವನ್ನೊ ಮನಸ್ಸು ಹೋಗುವಂತೆ ಪಲ್ಲವಿ ನೇರವಾದ ಮಾತುಗಳಲ್ಲಿ ಅಡಕದಲ್ಲಿ ಹೇಳು ತ್ತದೆ. ಅದಕ್ಕೆ ಏನಾದರೂ ವಿಶೇಷಣವಿದ್ದರೆ ಅರ್ಥದಲ್ಲಿಯೊ ವಿಷಯದಲ್ಲಿಯೊ ಅದು ಅನುಪಲ್ಲವಿಯಲ್ಲಿರುತ್ತದೆ. ಚರಣಗಳು ಕೇವಲ ವಿವರಗಳು ಅಥವಾ ಉದಾಹರಣೆ. ನಿದರ್ಶನಗಳಿದ್ದಂತೆ ಮಾತ್ರ; ಅವು ಮೂಲಾರ್ಥವನ್ನು ವಾಸ್ತವವಾಗಿ ಮುಂದುವರಿದು ಬೆಳಸುವುದಿಲ್ಲ. ಒಂದು ರಾಗ ಒಂದು ತಾಳದಲ್ಲಿ ಹಾಡಿರುವುದರಿಂದ ಪಲ್ಲವಿಯದು ತಾಳದ ಒಂದು ಅಂಗ. ಅನುಪಲ್ಲವಿಗೂ ಚರಣಕ್ಕೂ ತಾಳಾಂಗದಲ್ಲಿ ಸಂವಾದವಿರು ತ್ತದೆ. ಅವುಗಳ ಪ್ರಮಾಣ ಗೊತ್ತಾಗಿ ನಿಲ್ಲುತ್ತದೆಯಾಗಿ ಸಹಜವಾಗಿ ರಾಗ ತಾಳ ಬದ್ಧವಾಗಿ ಇವನ್ನು ಹಾಡಬಹುದು, ಗುರುತಿಸಬಹುದು. ಸುಳಾದಿಯಲ್ಲಿ ಸಾಮಾನ್ಯ ವಾಗಿ ಆ ಕಾಲಕ್ಕೆ ಗೊತ್ತಾಗಿ ರೂಪಗೊಂಡಿದ್ದ ಏಳು ತಾಳಗಳಲ್ಲಿ ನಡೆ ಇರುತ್ತಿತ್ತು. ಅದು ಒಂದು ತಾಳಮಾಲಿಕೆಯೇ. ಆ ತಾಳಗಳನ್ನು ಬಳಸುವುದಕ್ಕೆ ಸಾಮಾನ್ಯವಾಗಿ ಒಂದು ಕ್ರಮವನ್ನು ಅನುಸರಿಸುತ್ತಿದ್ದರು. ಏಳಕ್ಕಿಂತ ಕಡಮೆಯ ತಾಳ ಚರಣವುಳ್ಳ ಸುಳಾದಿಗಳು ಸಂಖ್ಯೆಯವು. 9–11 ಚರಣಗಳ ಸುಳಾದಿಗಳುಂಟು—ಕೆಲವು ತಾಳಗಳು ಪುನರುಕ್ತವಾಗುತ್ತವೆ. ಅವಕ್ಕೆ ತಕ್ಕ ಹಾಗೆ ಚರಣಗಳ ಉದ್ದ ಮಾತುಗಳ ಪ್ರಮಾಣ ಹೆಚ್ಚು ಕಡಮೆ ಆಗುವುದುಂಟು. ಪ್ರತಿಚರಣದ ಕೊನೆಯಲ್ಲಿಯೂ ಯಾವ ದಾಸರ ಸುಳಾದಿಯೊ ಅದು ಅವರ ಅಂಕಿತದಲ್ಲಿ ಕಾಣುತ್ತದೆ. ದಾಸರೆಲ್ಲ ಸುಮಾರು ವಿಠಲ ಭಕ್ತಿ ಉಳ್ಳವರಾದ್ದರಿಂದ-ಇಂಥ ವಿಠಲ ಎಂಬ ಅಂಕಿತವಿರುತ್ತದೆ. ಹಿಂದೆ ವಚನಕಾರ ರಲ್ಲಿಯೂ ಅಂಕಿತವಿರುತ್ತಿತ್ತು. ದಾಸರಲ್ಲೂ ಹಾಗೆಯೇ. ಮುಂದಿನ ಕಾಲಕ್ಕೆ ಶ್ಯಾಮಾ ಶಾಸ್ತ್ರಿಗಳಲ್ಲಿ, ತ್ಯಾಗರಾಜರಲ್ಲಿ, ದೀಕ್ಷಿತರಲ್ಲಿ ಇದು ಬೆಳೆಯಿತು. ಮೊದಲಲ್ಲಿಯೇ ಪಲ್ಲವಿ

ಬರುವುದಕ್ಕೆ ಬದಲಾಗಿ ಸುಳಾದಿಯ ಕೊನೆಯಲ್ಲಿ ಪಲ್ಲವಿ ಅಥವಾ ಪಲ್ಲವ ಎಂಬ ಮಾತುಇರುತ್ತದೆ. ಅಥವಾ ಜೊತೆ ಎಂಬ ನಿರ್ದೇಶನವನ್ನು ಕಾಣಬಹುದು. ಹಲವರು ಸೇರಿ ಇದನ್ನು ಹಾಡುತ್ತಿದ್ದರೊ ಅಥವಾ ಪ್ರತಿಚರಣದ ಜೊತೆಗೆ ಇದನ್ನು ಸೇರಿಸಿ ಹೇಳುತ್ತಿದ್ದರೊ ಗೊತ್ತಾಗದು. ಇವೊತ್ತು ಸುಳಾದಿಗಳನ್ನು ಮೂಲ ಸಂಪ್ರದಾಯದಂತೆ ಹಾಡಬಲ್ಲವರ ಸಂಖ್ಯೆ ಹೆಚ್ಚು ಕಾಣುತ್ತಿಲ್ಲ. ಸರ್ವಪ್ರಯತ್ನ ಮಾಡಿ ಮೂಲ ವಿಧಾನವನ್ನು ಧ್ವನಿ ಮುದ್ರಿಸಿಕೊಳ್ಳುವ ಪ್ರಯತ್ನ ಮಾಡಿದರಾದೀತು. ಉಗಾಭೋಗದ ಹಾಡುಗಾರಿಕೆಯೂ ಅನಿಶ್ಚಿತವೇ. ಪದ್ಯಗಂಧಿಯಂತಿರುವ ಗದ್ಯದಂತೆ ಅದರ ನಡೆ. ಅದರ ತಾಳದಲ್ಲಿ ಯಾವ ನಿಯತಿ ಸಾಧಿಸುತ್ತಾರೆಯೋ ಅದೂ ಒಂದೇ ರೀತಿ ಆಗಿಲ್ಲ. ಹಿಂದಿನ ಕಾಲದಲ್ಲಿ ದಂಡಕವೆಂಬ ಪ್ರಕಾರ ಒಂದು ಛಂದೋನಿಯಮವನ್ನು ಅನುಸರಿಸಿ ಮಾತ್ರ ಬಳಕೆಯಲ್ಲಿತ್ತು. ಮಾತ್ರಾಗಣದ ಪ್ರಾಧಾನ್ಯ ಒಂದು ಮಾತ್ರ ಅಲ್ಲಿ ಕಾಣುತ್ತಿತ್ತು. ಅರ್ಥವನ್ನೊ ಭಾವವನ್ನೊ ಖಂಡಖಂಡವಾಗಿ ವಿಂಗಡಿಸಿಕೊಂಡೋ ಸೇರಿಸಿಯೊ ದಂಡಕವನ್ನು ರಾಗಗಳನ್ನು ವ್ಯತ್ಯಾಸಮಾಡಿಯೋ ಒಂದರ ವಿಸ್ತರಣದಲ್ಲಿಯೋ ನುಡಿಯುವ ರೀತಿ ಕೇಳಲು ಚೆನ್ನಾಗಿರುತ್ತಿತ್ತು. ಆದರೆ ಛಂದೋರಚನೆಯಲ್ಲಿ ಗೊತ್ತಾದ ನಿಯಮವೇನೂ ಇರುತ್ತಿರಲಿಲ್ಲ. ಪ್ರಕಟವಾಗಿ 'ಗದ್ಯ'ವನ್ನು ಓದುತ್ತಿದ್ದ ರೀತಿ ಒಂದಿತ್ತು. ಛಂದೋಗಣದ ಯಾವ ಪ್ರಭಾವವೂ ಇಲ್ಲದೆ ಒಂದು ರಾಗದಲ್ಲಿ ಗದ್ಯವನ್ನು ಓದುತ್ತಿದ್ದ ರೀತಿ ಅರ್ಥದ ಅಗತ್ಯವನ್ನು, ಕಥನವನ್ನು ವರ್ಣನಾದಿಗಳನ್ನು ಸಾಧಿಸಿದರಾಯಿತು. ಬಾಣನ ಕಾದಂಬರೀಗದ್ಯವನ್ನು ಹಾಗೆ ಓದುತ್ತಿದ್ದುದನ್ನು ನಾನು ಕೇಳಿದ್ದೇನೆ. ವಿಷ್ವದ್ರಸಿಕರಾದವರು ಆ ಕಾರ್ಯವನ್ನು ಮಾಡಿದರೆ ಒಂದು ಬಗೆಯ ಗಮಕವನ್ನು ಸಾಧಿಸಿದಂತಾಗುತ್ತಿತ್ತು. ಉಗಾಭೋಗದಲ್ಲಿ ಈ ಗದ್ಯಗಮಕ ಹಾಗೆ ಕೆಲವು ವೇಳೆ ಕಾಣುತ್ತದೆ. ಇದು ನನ್ನ ಊಹೆ ಮಾತ್ರ. ಇದರ ಮಾರ್ಗವನ್ನೂ ಧ್ವನಿಮುದ್ರಿಸಿಕೊಳ್ಳಬೇಕು. ಆ ಆ ಪ್ರದೇಶದ ಆಕಾಶವಾಣಿ ಕೇಂದ್ರದವರೂ ಕನ್ನಡ ಸಾಹಿತ್ಯ ಪರಿಷತ್ತಿನವರೂ ಇದಕ್ಕೆ ಮನಸ್ಸು ಕೊಟ್ಟರೆ ಸುಲಭವಾಗಿ ಇದು ಲಭ್ಯವಾಗುತ್ತದೆ. ಬಹುವಾಗಿ ಧರ್ಮತತ್ತ್ವ, ನೀತಿ, ಲೋಕಜೀವನದ ವಿಮರ್ಶೆ ಇವುಗಳನ್ನು ಜನರಲ್ಲಿ ಪ್ರಚಾರ ಮಾಡಿ ಅವರಿಗೆ ಭಕ್ತಿಯನ್ನೂ ವೈರಾಗ್ಯವನ್ನೂ ಜೀವದ ಸ್ವರೂಪವನ್ನೂ ಆಗುಹೋಗುಗಳನ್ನೂ ತಿಳಿಸುವುದು ದಾಸಪಂಥದ ಉದ್ದೇಶವಾಗಿತ್ತು. ಅದಕ್ಕೆ ಸಂಗೀತ ನೆರವು ಕೊಟ್ಟಿತು. ಆ ಕಾಲದಲ್ಲಿ ಬಳಕೆಯಲ್ಲಿದ್ದ ಎಲ್ಲ ರಾಗಗಳನ್ನೂ ದುಡಿಸಿಕೊಂಡು ಮನಸ್ಸಿಗೆ ರಂಜನೆಯಾಗುವಂತೆ ಗೊತ್ತಾಗಿ ಹೇಳುತ್ತಿದ್ದುದರಿಂದ ಕೇಳುವವರ ಮನಸ್ಸಿನಲ್ಲಿ ನೇರ ಹೋಗಿ ಅದರ ಅಚ್ಚೊತ್ತುತ್ತಿದ್ದಿತು. ವಚನಕಾರರಲ್ಲಿ ಬೀದಿಗೆ ಹೋಗಿ ಜನರ ನಡುವೆ ನಿಂತು ಪ್ರಕಟವಾಗಿ ಈ ಬೋಧನೆ ಉಪದೇಶ ಮಾಡಬೇಕು ಎಂಬ ಗುರಿ ಇದ್ದ ಹಾಗೆ ಕಾಣುವುದಿಲ್ಲ.

ಅದು ಆತ್ಮನಿವೇದನ ಮಾತ್ರ—ಪ್ರಧಾನವಾಗಿ. ಅದು ಪ್ರಚಾರವಾಗಬೇಕಾದರೆ ಅದರ ಶಕ್ತಿಯಿಂದ ಅದನ್ನು ಇನ್ನೊಬ್ಬರ ಬೋಧೆಗೆ ಬಳಸುವ ಸಂದರ್ಭದಲ್ಲಿ ಆಗು ವಂತೆಯೇ ಹೊರತು ವಚನ ಹುಟ್ಟುತ್ತಿದ್ದುದು ಅಂಥಕಾರ್ಯಕ್ಕಾಗಿ ಸನ್ನಿವೇಶದಲ್ಲಿ ಎನ್ನುವ ಹಾಗಿಲ್ಲ.

ಪುರಂದರದಾಸರ ಕೆಲವು ಕೀರ್ತನೆಗಳೂ ಹಾಗೆ ಆತ್ಮನಿವೇದನೆಯವು ಸಿಕ್ಕಿವೆ. ಪುರಂದರದಾಸರ ಕಾಲಕ್ಕೆ ವಿಜಯನಗರದಲ್ಲಿ ಮತ್ತು ಸುತ್ತಮುತ್ತ ಮುಸಲ್ಮಾನ್ ಜನ ವರ್ಗವೂ ಸಂಗೀತ ಪ್ರಕಾರಗಳೂ ಇದ್ದುದರಿಂದ ಕರ್ನಾಟಕ ಹಿಂದೂಸ್ತಾನಿ ಎರಡೂ ಬಗೆಯ ರಾಗಗಳು ಬಳಕೆಗೆ ಬಂದವು. ಆದರೂ ಯಾವುದನ್ನು ನಾವು ದಕ್ಷಿಣಾದಿ ಅಥವಾ ಕರ್ನಾಟಕ ಎನ್ನುತ್ತೇವೊ ಅದರದೇ ಜಾಡು ಅಚ್ಚು ಪ್ರಧಾನವಾಗಿ ಕಾಣುತ್ತದೆ. ವಚನ ವನ್ನು ಅಚ್ಚಕನ್ನಡ ಜನ ಹೇಗೆ ನಿರ್ಮಿಸಿದರೆನ್ನುತ್ತೇವೆಯೊ ಹಾಗೆಯೇ ದಾಸರ ಪದ ಗಳನ್ನು ನಿರ್ಮಾಣ ಮಾಡಿದವರೂ ಬಹುಮಟ್ಟಿಗೆ ಕನ್ನಡದವರೇ. ಮಾಧ್ವಪಂಥದ ಮೂಲ ನಿರ್ಮಾಪಕರು ತುಳು ನಾಡಿನವರಾದರೂ ಲೌಕಿಕವಾಗಿ ಅವರು ಬಳಸುತ್ತಿ ದ್ದುದೂ ಸುತ್ತುಮುತ್ತಿನ ಕನ್ನಡವೇ ಆಗಿ ಕನ್ನಡದ ಸಾಹಿತ್ಯ ಸಂಪತ್ತಿಗೆ ಇದೊಂದು ಭಾಗ್ಯದೊರೆವಂತಾಯಿತು. ಪಶ್ಚಿಮದಲ್ಲಿ ಉಡುಪಿ, ಉತ್ತರದಲ್ಲಿ ಪಂಢರಪುರ ಹಂಪೆ ಈ ಪ್ರದೇಶಗಳಲ್ಲಿ ಈ ಸಾಹಿತ್ಯಕ್ಕೆ ಪ್ರತಿಷ್ಠೆ ದೊರೆತು ದಾಸ ಸಂಪ್ರದಾಯದವರು ಅನೇಕ ಮಂದಿ ಪುರಂದರದಾಸರ ಕಾಲದಲ್ಲಿಯೂ ಅಲ್ಲಿಂದೀಚೆಗೂ ಇದನ್ನು ಬೆಳಸಿದರು. ಕನಕದಾಸರು ಮೊದಲು ಶ್ರೀವೈಷ್ಣವದ ಪ್ರಭಾವಕ್ಕೆ ಒಲಿದಿದ್ದರೂ ವ್ಯಾಸರಾಯರ ಪ್ರಭಾವ ಅವರ ಮೇಲೆಯೂ ಬಿದ್ದಿತೆನ್ನುವ ಹಾಗೆ, ಅವರಿಗೂ ಪುರಂದರದಾಸರಿಗೂ ಸ್ನೇಹವಿಶ್ವಾಸ ನೆಲಸಿದ್ದಂತೆ ಕೆಲವು ಕೃತಿಗಳಿವೆ. ಪುರಂದರ ದಾಸರದು ನೇರವಾಗಿ ದಿನದಿನದ ಲೋಕ ಜೀವನಕ್ಕೆ ಕಾಣುವ ಉಕ್ತಿಗಳು ನೋಟಗಳು. ಕನಕದಾಸರಲ್ಲಿ ವೇದಾಂತ ಅಥವಾ ಅಧ್ಯಾತ್ಮ ಭಾಗದ ಅನುಭಾವದ ಓಲು ಹೆಚ್ಚು. ಆತನು ಬ್ರಾಹ್ಮಣನಾಗಿಲ್ಲದಿದ್ದುದು ಕೆಲವು ಮಡಿವಂತರಿಗೆ ಅಸಮಾಧಾನವನ್ನು ತಂದಿ ದ್ದರೂ ಮನಸ್ಸು, ರೀತಿ, ಭಕ್ತಿಗಳಲ್ಲಿ ಜ್ಞಾನ ಸಂಸ್ಕಾರಗಳಲ್ಲಿ ಯಾರಿಗೂ ಕಡಮೆಯ ವನಲ್ಲವಾದ್ದರಿಂದ ಆತನಿಗೆ ಗುರು ವ್ಯಾಸರಾಯರಲ್ಲಿಯೂ ಕೆಳೆಯ ಪುರಂದರದಾಸ ರಲ್ಲಿಯೂ ದೊಡ್ಡ ಪ್ರೀತಿಯ ಸ್ಥಾನ ದೊರಕಿತ್ತು. ಅದೇ ಕಾಲದ ವಾದಿರಾಜರೂ, ಆತನ ಕಾಲದಿಂದ ಈಚೆಗೆ ವಿಜಯದಾಸರು, ಜಗನ್ನಾಥದಾಸರು, ಮುಂತಾಗಿ ಈ ಪರಂಪರೆ ಕಾಲಕ್ರಮದಲ್ಲಿ ಬೆಳೆದು ಬಂದಿತು. ಇದರ ಪರಿಚಯವನ್ನು ಈ ಪುಸ್ತಕ ದಲ್ಲಿ ಈಗಾಗಲೆ ಮಾಡಿಕೊಟ್ಟಿದೆ. ಆದರೆ ಯಾವ ಹೊಸತನ, ಹುರುಪು, ನಗೆ ಬಗೆ, ಜೀವನ್ವಿಲಾಸ, ನೆತ್ತರ ಕಾವು ಎನ್ನಬಹುದಾದ್ದು ಪುರಂದರದಾಸರಲ್ಲಿ ಕಾಣಬಹುದಾ ಗಿತ್ತೊ, ಅದು ಈಚಿನ ಕಾಲಗಳಲ್ಲಿ ಕಾಣಿಸುವುದಿಲ್ಲ. ಬಾಲಲೀಲೆಗಳನ್ನು ವರ್ಣನೆ

ಮಾಡುವಾಗ ಕೂಡ ಹೆಚ್ಚು ಪ್ರೌಢವಾದ ಶೃಂಗಾರಾಂಶಗಳನ್ನು, ಚಾಪಲ್ಯಗಳನ್ನು ಕೂಡ ಕೆಲವರಲ್ಲಿ ಕಾಣಬಹುದು. ಜಗನ್ನಾಥದಾಸರ ಹರಿಭಕ್ತಿ ಸುಧೆ ಹರಿದಾಸ ಸಾಹಿತ್ಯದ ಒಂದು ಮಹಾಗ್ರಂಥವಾಗಿ ಎಣಿಸಬಹುದಾದರೂ ಅದು ಹೆಚ್ಚಾಗಿ ಕಾವ್ಯ. ಮೊನ್ನೆಮೊನ್ನೆವರೆಗೂ ಕನ್ನಡ ಸಾಹಿತ್ಯವೆನ್ನುವಾಗ ಹರಿದಾಸರ ಕೊಡುಗೆಯನ್ನು ಯಕ್ಷಗಾನ ಜನಪದಗೀತೆಗಳ ಕೊಡುಗೆಯನ್ನು ಸಾಹಿತ್ಯ ಪ್ರಕಾರಗಳೂ ಸೇರಿಸುತ್ತಿರ ಲಿಲ್ಲ, ಸಮಗ್ರವಾದ ಜನಜೀವನದ ಅಂಶವಾಗಿ ಅದಕ್ಕೆ ಒಂದು ಪ್ರಾಶಸ್ತ್ಯ ಬಂದುದು ಈಚೆಗೆ. ಪುರಂದರ–ಕನಕದಾಸರನ್ನು ಕುರಿತು ಬೇರೆ ಬೇರೆ ಪುಸ್ತಕಗಳು ಈ ಮಾಲೆಯಲ್ಲಿ ಪ್ರಕಟವಾಗುತ್ತವೆ. ಇಲ್ಲಿ ಒಟ್ಟು ಒಂದು ದೃಷ್ಟಿಯನ್ನು ಕೊಡಲು ಮಾತ್ರ ಯತ್ನ ಮಾಡಿದೆ. ಈ ಪ್ರಕಾರಗಳ ಕೆಲವು ಉದಾಹರಣೆಗಳನ್ನು ಕವಿವಾಣಿಯಲ್ಲಿ ಕೊಡ ಲಾಗಿದೆ.

ವಿ. ಸೀತಾರಾಮಯ್ಯ

# ಕವಿವಾಣಿ

## ನರಹರಿತೀರ್ಥ

### 1

ಎಂತು ಮರುಳಾದೆ ನಾನೆಂತು ಮರುಳಾದೆ ಪಲ್ಲವಿ
ಎಂತು ಮರುಳಾದೆ ಭವದೊಳು ಬಳಲಿದೆ ಸಂತತ ಪೊರೆ ರಘುಕುಲ
ತಿಲಕ ಅನುಪಲ್ಲವಿ

ಮಾತಿನಲ್ಲಿ ಹರಿದಾಸತನ ನೀತಿಯಲ್ಲಿ ಪ್ರಭುದಾಸತನ
ಪ್ರೀತಿ ಧನಾದಿವಿಷಯದಲ್ಲಿ ನಿರ್ಭೀತಿ ದೈವಗುರುದ್ರೋಹದಲಿ 1

ಏಕಾಂತದಲ್ಲಿ ಧನದಗೋಷ್ಠಿ ಲೋಕಾಂತದಿ ವೈರಾಗ್ಯದ ಗೋಷ್ಠಿ
ಶ್ರೀಕಾಂತನ ಸೇವೆಗೆ ಅನುಮಾನ ಭೂಕಾಂತನ ಸೇವೆಗೆ ಸುಮ್ಮಾನ 2

ಧರ್ಮಕ್ಕೆ ಒಂದುಕಾಸು ಸಾವಿರಹೊನ್ನು ಅಧರ್ಮಕ್ಕೆ ಕೋಟಿ ಹೊನ್ನು
ಒಂದೇ ಕಾಸು
ಧರ್ಮಮಾಡಲು ಬೇಸರಿಕೆ ಅಧರ್ಮಮಾಡಲು ಎಚ್ಚರಿಕೆ 3

ಡೊಂಬನಂತೆ ಬಯಲಿಗೆ ಹರಹಿ ಡಂಭತನಕೆ ಕರ್ಮವ ಮಾಡಿ
ಅಂಬುಜನಾಭಗೆ ದೂರಾಗಿ ಕುಂಭೀಪಾಕಕೆ ಗುರಿಯಾದೆ 4

ಸತಿಯರ ಬೈದರೆ ನಾ ಬೈಯ್ವೆ ಶ್ರೀಪತಿಯ ಬೈದರೆ ಕೇಳುತ ನಗುವೆ
ಮತಿಗೆಟ್ಟು ವಿಷಯ ಲಂಪಟನಾಗಿ........ 5

ಯಾರಿಗಾಗಿ ಧಾವತಿ ಪಡುವೆ ಇನ್ನಾರಿಗೆ ಒಡವೆಯ ಬಚ್ಚಿಡುವೆ
ನಾರೀಪುತ್ರಮಿತ್ರಾದಿಗಳು ಯಾರೂ ಬಾರರೊ ಸಂಗಡದಿ 6

ಭಜಿಸು ಬ್ರಹ್ಮಾದಿವಂದಿತಹರಿಯ ತ್ಯಜಿಸು ಕಾಮಾದಿದುರ್ವಿಷಯ
ಸುಜನವಂದಿತನಾದ ನರಹರಿಯ ಭಜಿಸು ಶ್ರೀಶಶ್ರೀರಘುಪತಿಯ 7

## 2

ಹರಿಯೇ ಇದು ಸರಿಯೇ ಪಲ್ಲವಿ
ಚರಣ ಸೇವಕನಲ್ಲಿ ಕರುಣ ಬಾರದ್ಯಾಕೆ ಅನುಪಲ್ಲವಿ

ಪತಿತನೆಂದು ಶ್ರೀಪತಿ ರಕ್ಷಿಸದಿರೆ
ವಿತತವಾಹುದೆ ನಿನ್ನ ಪತಿತಪಾವನ ಕೀರ್ತಿ 1

ಶಕ್ತ ನೀನಾಗಿದ್ದು ಭಕ್ತನುಪೇಕ್ಷಿಸೆ
ಭಕ್ತವತ್ಸಲನಾಮ ವ್ಯರ್ಥವಾಗದೆ 2

ದಿಗಿಲಿಲ್ಲದೆ ಒದ್ದ ಭೃಗುವ ಪಾಲಿಸಿದೆ
ನಗಧರ ಎನ್ನ ಬಿಡುವ ಬಗೆ ಏನಿದು 3

ಹೇಯ ಅಜಾಮಿಳನ ಕಾಯಲಿಲ್ಲೆ ಸ್ವ
ಕೀಯನೆ, ನಾ ಪರಕೀಯನೆ ನಿನಗೆ 4

ಉಂಟು ಹಿರಣ್ಯಕನ ಕಂಟಕ ಬಿಡಿಸಿದ್ದು
ನಂಟನೆ ನಿನಗೆ ಭಂಟ ನಾನಲ್ಲವೆ ? 5

ಕೆಟ್ಟ ಅಹಲ್ಯೆಯ ಧಿಟ್ಟ ಪಾಲಿಸಿದೆ
ಕೊಟ್ಟಳು ಅವಳೇನ ಬಿಟ್ಟದ್ದು ನಾನೇನ 6

ದೊರೆ ನಿನ್ನ ಮನಸಿಗೆ ಸರಿಬಂದಂತೆ ಮಾಡು
ಮೊರೆ ಹೊಕ್ಕೆನು ನಾ ನರಹರಿ ಪೂರ್ಣನೆ 7

## ಶ್ರೀಪಾದರಾಯ

### 1

ಸದ್ದು ಮಾಡಲು ಬೇಡವೊ ನಿನ್ನ ಕಾಲಿಗೆ
ಬಿದ್ದು ನಾ ಬೇಡಿಕೊಂಡೆ ಪಲ್ಲವಿ

ನಿದ್ದೆಗೆಯ್ಯುವರೆಲ್ಲ ಎದ್ದರೆ ನೀನು ಬಂ
ದಿದ್ದದ್ದು ಕಂಡರೇನೆಂಬುವರೊ ರಂಗ ಅನುಪಲ್ಲವಿ

ಬಳೆ ಘಲ್ಲುಕೆನ್ನದೇನೊ—ಕೈಯ ಪಿಡಿದು
ಎಳೆಯದಿರೊ ಸುಮ್ಮನೆ
ಮೊಲೆಗಳ ಮೇಲಿನ ಸೆರಗನೆಳೆಯಲು ಕೊ
ರಳ ಪದಕಂಗಳು ಧ್ವನಿಗೆಯ್ಯುವುವೊ ರಂಗ 1

ನಿರುಗೆಯ ಪಿಡಿಯದಿರೊ ಕಾಂಚಿಯ ದಾಮ
ಕಿರುಗಂಟೆ ಧ್ವನಿಗೆಯ್ಯದೆ
ಕಿರುದುಟಿಗಳ ನೀನು ಸವಿದು ಚಪ್ಪರಿಸಲು
ತರವಲ್ಲ ಗಂಡ ಮತ್ಸರವ ತಾಳುವನಲ್ಲ 2

ನಾಡ ಮಾತುಗಳೀತಕೊ—ಸಂಗೀತವ
ಪಾಡುವ ಸಮಯವೇನೊ
ಗಾಡಿಕಾರ ಶ್ರೀರಂಗವಿಠಲನೆ
ಪಾಡುಪಂಥಗಳೊಡಗೂಡುವ ಸಮಯದಿ 3

## 2

ಭೂಷಣಕೆ ಭೂಷಣ ಇದು ಭೂಷಣ
ಶೇಷಗಿರಿವಾಸ ಶ್ರೀವರ ವೆಂಕಟೇಶ ಪಲ್ಲವಿ

ನಾಲಿಗ್ಗೆ ಭೂಷಣ ನಾರಾಯಣನಾಮ
ಕಾಲಿಗೆ ಭೂಷಣ ಹರಿಯಾತ್ರೆಯು
ಆಲಯಕೆ ಭೂಷಣ ತುಲಸಿ ವೃಂದಾವನ ವಿ
ಶಾಲ ಕರ್ಣಕೆ ಭೂಷಣ ವಿಷ್ಣುಕಥೆಯು 1

ದಾನವೇ ಭೂಷಣ ಇರುವ ಹಸ್ತಂಗಳಿಗೆ
ಮಾನವೇ ಭೂಷಣ ಮಾನವರಿಗೆ
ಜ್ಞಾನವೇ ಭೂಷಣ ಮುನಿಯೋಗಿವರರಿಗೆ
ಮಾನಿನಿಗೆ ಭೂಷಣ ಪತಿಭಕ್ತಿಯು 2

ರಂಗನನು ನೋಡುವುದೇ ಕಂಗಳಿಗೆ ಭೂಷಣ
ಮಂಗಳಾಂಗಗೆ ಮಣಿವ ಶಿರ ಭೂಷಣ
ಶೃಂಗಾರ ತುಲಸಿಮಣಿ ಕೊರಳಿಗೆ ಭೂಷಣ
ರಂಗವಿಠಲ ನಿಮ್ಮ ನಾಮ ಅತಿ ಭೂಷಣ 3

## ವ್ಯಾಸರಾಯ

ದಾಸರೆಂದರೆ ಪುರಂದರದಾಸರಯ್ಯ ಪಲ್ಲವಿ
ವಾಸುದೇವ ಕೃಷ್ಣನ್ನ ಸೂಸಿ ಪೂಜಿಸುವ ಅನುಪಲ್ಲವಿ

ಗ್ರಾಸಕಿಲ್ಲದೆ ಪೋಗಿ ಪರರ ಮನೆಗಳ ಪೊಕ್ಕು
ದಾಸನೆಂದು ತುಳಸಿಮಾಲೆ ಧರಿಸಿ
ಬೇಸರಿಲ್ಲದೆ ಅವರ ಕಾಡಿ ಬೇಡಿ ಬಳಲಿಸುತ
ಕಾಸು ಗಳಿಸುವ ಪುರುಷ ಹರಿದಾಸನೇ 1

ಡಂಭಕದಿ ಹರಿಸ್ಮರಣೆ ಮಾಡಿ ಜನರ ಮುಂದೆ
ಸಂಭ್ರಮದಿ ತಾನುಂಬ ಊಟ ಬಯಸಿ
ಅಂಬುಜೋದ್ಭವಪಿತನ ಆಗಮಗಳರಿಯದೆ
ತಂಬೂರಿ ಮೀಟಲವ ಹರಿದಾಸನೇ 2

ಯಾಯಿವಾರವ ಮಾಡಿ ವಿಪ್ರರಿಗೆ ಮೃಷ್ಟಾನ್ನ
ಪ್ರೀಯದಲಿ ತಾನೊಂದು ಕೊಡದ ಲೋಭಿ
ಮಾಯ ಸಂಸಾರದಲಿ ಮಮತೆ ಹೆಚ್ಚಾಗಿಟ್ಟು
ಗಾಯನವ ಮಾಡಲವ ಹರಿದಾಸನೇ 3

ಪಾಠಕನ ತೆರನಂತೆ ಪದಗಳನು ತಾ ಬೊಗಳಿ
ಕೂಟಜನರನವ ಸಂತೋಷಪಡಿಸಿ
ಗೂಟನಾಮಗಳಿಟ್ಟು ಕೊಟ್ಟರಿಯೆ ತಾನೆನುತ
ಬೂಟಕವ ಮಾಡಲವ ಹರಿದಾಸನೇ 4

ನೀತಿಯೆಲ್ಲವನರಿತು ನಿಗಮವೇದ್ಯನ ನಿತ್ಯ
ವಾತಸುತನಲ್ಲಿಹನ ವರ್ಣಿಸುತಲಿ
ಗೀತನರ್ತನದಿಂದ ಕೃಷ್ಣನ್ನ ಪೂಜಿಸುವ
ಪೂತಾತ್ಮ ಪುರಂದರದಾಸರಿವರಯ್ಯ

## ವಾದಿರಾಜ

### 1

ಹರಿಯ ಭಜನೆಮಾಡೊ ನಿರಂತರ ಪಲ್ಲವಿ
ಪರಗತಿಗಿದು ನಿರ್ಧಾರ ನೋಡೊ ಅನುಪಲ್ಲವಿ

ಮೊದಲೆ ತೋರುತದೆ ಮಧುರ ವಿಷಯ ಸುಖ 1
ಕಡೆಯಲಿ ದುಃಖ ಅನೇಕ

ವೇದ ಶಾಸ್ತ್ರಗಳ ನೋಡಿದರೇನು 2
ಸಾಧನಕಿದು ನಿರ್ಧಾರ

ಸಾರವೊ ಬಹು ಸಂಸಾರ ವಿಮೋಚಕ 3
ಸೇರೋ ಹಯವದನನ್ನ

**2**

ಹಣವೇ ನಿನ್ನಯ ಗುಣವೆನಿತು ಬಣ್ಣಿಪೆನಯ್ಯ
ಹಣವಿಲ್ಲದವನೊಬ್ಬ ಹೆಣಕಿಂತ ಕಡೆಯ್ಯಯ ಪಲ್ಲವಿ

ಬೆಲೆಯಾಗದನೆಲ್ಲ ಬೆಲೆಯ ಮಾಡಿಸುವಿ
ಎಲ್ಲಾ ವಸ್ತುಗಳನ್ನಿದ್ದಲ್ಲೇ ತರಿಸುವಿ
ಕುಲಗೆಟ್ಟವರ ಸತ್ಕುಲಕೆ ಸೇರುಸುವಿ
ಹೊಲೆಯನಾದರು ತಂದು ಒಳಗೆ ಸೇರುಸುವಿ 1

ಅಂಗನೆಯರ ಸಂಗವನು ಮಾಡಿಸುವಿ
ಶೃಂಗಾರಾಭರಣಂಗಳ ತರಿಸುವಿ
ಮಂಗನಾದರು ಅನಂಗನೆಂದೆನಿಸುವಿ
ಕಂಗಳಿಲ್ಲದವಂಗೆ ಮಗಳ ಕೊಡಿಸುವಿ 2

ಹರಣಕ್ಕೆ ಬಂದಂಥ ದುರಿತವ ಬಿಡುಸುವಿ
ಸರುವರಿಗೆ ಶ್ರೇಷ್ಠ ನರನೆನಿಸುವಿ
ಅರಿಯದ ಶುಂಠನ ಅರಿತವನೆನಿಸುವಿ
ಸಿರಿಹಯವದನನ ಸ್ಮರಣ ಮರೆಯಿಸುವಿ 3

## 3

ಏನು ಸುಕೃತವ ಮಾಡಿದಳೊ ಯಶೋದೆ ಪಲ್ಲವಿ
ಶ್ರೀನಿಧಿಯಾದ ಕೃಷ್ಣನ್ನ ಕರೆದೆತ್ತಿ ಮುದ್ದಿಪಳಂತೆ ಅನುಪಲ್ಲವಿ

ಗಂಗಾಜನಕಗೆ ಗಡಿಗೆ ನೀರನೆರೆವಳಂತೆ
ಮಂಗಳಾಂಗಗೆ ಭಾಮೆ ಶೃಂಗರಿಪಳಂತೆ
ತುಂಗಭೂಧರನ ತೊಟ್ಟಿಲೊಳು ಮಲಗಿಪಳಂತೆ
ಕಂಗಳಿಗಗೋಚರನ ಎತ್ತಿ ಮುದ್ದಿಪಳಂತೆ 1

ಚತುರಾಸ್ಯನ ಪಿತನ ಸುತನೆಂದೆತ್ತುವಳಂತೆ
ಶ್ರುತಿವಿನುತಗೆ ಜೋಗುಳವ ಪಾಡುವಳಂತೆ
ಶತರವಿ ತೇಜಗಾರತಿಯನೆತ್ತುವಳಂತೆ
ಗತಭೀತನಿಗೆ ಭಾಮೆ ರಕ್ಷೆಯಿಕ್ಕುವಳಂತೆ 2

ಜಗವನೆತ್ತಿದವನ ಮಗುವೆಂದೆತ್ತುವಳಂತೆ
ನಿಗಮಗೋಚರನ ಈಕ್ಷಿಸುವಳಂತೆ
ಅಗಣಿತಸದ್ಗುಣನ ಹಗ್ಗದಿ ಕಟ್ಟುವಳಂತೆ
ಮಿಗೆ ನಿತ್ಯತೃಪ್ತನಿಗೆ ಪಾಲನೆರೆವಳಂತೆ 3

ಬಹುಮುಖನಿಗೆ ಭಾಮೆ ಮುದ್ದನೀಡುವಳಂತೆ
ಅಹಿತಲ್ಪನಿಗೆ ಹಾವತುಳಿದೀ ಎಂಬುವಳಂತೆ
ಬಹು ದೈತ್ಯಸಂಹರಗೆ ಭಯವ ತೋರುವಳಂತೆ
ಮಹಿಮ ನರಸಿಂಹಗೆ ಗುಮ್ಮನ ತೋರುವಳಂತೆ 4

ಕಡೆಗೋಲ ನೇಣನು ಕೈಯೊಳಗೆ ಪಿಡಿದು ಪಾ
ಲ್ಗಡಲೊಡೆಯ ದ್ವಾರಕಾನಿಲಯ
ಬಿಡದೆ ಸಲಹುವ ಹಯವದನನ ಮೋಹಮುದ್ದು
ಉಡುಪಿನ ಕೃಷ್ಣನ ಉಡಿಯೊಳೆತ್ತುವಳಂತೆ 5

## ಪುರಂದರದಾಸ

### 1

ಆದದ್ದೆಲ್ಲ ಒಳಿತೇ ಆಯಿತು, ನಮ್ಮ ಪಲ್ಲವಿ
ಶ್ರೀಧರನ ಸೇವೆ ಮಾಡಲು ಸಾಧನ ಸಂಪತ್ತಾಯಿತು ಅನುಪಲ್ಲವಿ

ದಂಡಿಗೆ ಬೆತ್ತ ಹಿಡಿಯುವುದಕ್ಕೆ
ಮಂಡೆ ಬಾಗಿ ನಾಚುತಲಿದ್ದೆ
ಹೆಂಡತಿ ಸಂತತಿ ಸಾವಿರವಾಗಲಿ
ದಂಡಿಗೆ ಬೆತ್ತ ಹಿಡಿಸಿದಳಯ್ಯ 1

ಗೋಪಾಳ ಬುಟ್ಟಿ ಹಿಡಿಯುವುದಕ್ಕೆ
ಭೂಪತಿಯೆಂದು ಗರ್ವಿಸುತ್ತಿದ್ದೆ
ಆ ಪತ್ನೀಕುಲ ಸಾವಿರವಾಗಲಿ
ಗೋಪಾಳ ಬುಟ್ಟಿ ಹಿಡಿಸಿದಳಯ್ಯ 2

ತುಳಸೀ ಮಾಲೆ ಹಾಕುವುದಕ್ಕೆ
ಅರಸನೆಂದು ತಿರುಗತಲಿದ್ದೆ
ಸರಸಿಜಾಕ್ಷ ಪುರಂದರವಿಠಲನು
ತುಳಸೀಮಾಲೆ ಹಾಕಿಸಿದನು 3

## 2

ಶರಣು ಸಿದ್ಧಿ ವಿನಾಯಕ
ಶರಣು ವಿದ್ಯಾಪ್ರದಾಯಕ ಪಲ್ಲವಿ

ಶರಣು ಪಾರ್ವತಿತನಯ ಮೂರುತಿ
ಶರಣು ಮೂಷಕವಾಹನ ಅನುಪಲ್ಲವಿ

ನಿಟಿಲನೇತ್ರನ ದೇವಿ ಸುತನೆ
ನಾಗಭೂಷಣ ಪ್ರಿಯನೆ
ಕಟಿಕಟಾಂಗದ ಕೋಮಲಾಂಗನೆ
ಕರ್ಣಕುಂಡಲಧಾರನೆ 1

ಬಟುವ ಮುತ್ತಿನಹಾರ ಪದಕನೆ
ಬಾಹು ಹಸ್ತ ಚತುಷ್ಕನೇ
ಇಟ್ಟತೊಡುಗೆಯು ಹೇಮಕಂಕಣ
ಪಾಶದಂಕುಶಧಾರನೆ 2

ಕುಕ್ಷಿ ಮಹಾಲಂಬೋದರನೆ
ಇಕ್ಷುಚಾಪನ ಗೆಲಿದನೆ
ಪಕ್ಷಿವಾಹನನಾದ ಪುರಂದರವಿಠಲನ ನಿಜದಾಸನೆ 3

## 3

ಭಾಗ್ಯದ ಲಕ್ಷ್ಮಿ ಬಾರಮ್ಮ ನಮ್ಮಮ್ಮ ನೀ
ಸೌಭಾಗ್ಯದ ಲಕ್ಷ್ಮಿ ಬಾರಮ್ಮ ಪಲ್ಲವಿ

ಹೆಜ್ಜೆಯ ಮೇಲೆ ಹೆಜ್ಜೆಯನಿಕ್ಕುತ
ಗೆಜ್ಜೆಯ ಕಾಲಿನ ನಾದವ ತೋರುತ
ಸಜ್ಜನ ಸಾಧು ಪೂಜೆಯ ವೇಳೆಗೆ
ಮಜ್ಜಿಗೆಯೊಳಗಿನ ಬೆಣ್ಣೆಯಂದದಿ 1

ಕನಕವೃಷ್ಟಿಯ ಕರೆಯುತ ಬಾರೆ
ಮನಕೆ ಮಾನವ ಸಿದ್ಧಿಯ ತೋರೆ
ದಿನಕರಕೋಟಿತೇಜದಿ ಪೊಳೆಯುವ
ಜನಕರಾಯನ ಕುಮಾರಿ ಬೇಗ 2

ಶಂಕೆಯಿಲ್ಲದೆ ಭಾಗ್ಯವ ಕೊಟ್ಟು
ಕಂಕಣ ಕೈಯ ತಿರುಹುತ ಬಾರೆ
ಕುಂಕುಮಾಂಕಿತೆ ಪಂಕಜಲೋಚನೆ
ವೆಂಕಟರಮಣನ ಬಿಂಕದ ರಾಣಿ 3

ಅತ್ತಿತ್ತಗಲದೆ ಭಕ್ತರ ಮನೆಯೊಳು
ನಿತ್ಯ ಮಹೋತ್ಸವ ನಿತ್ಯ ಸುಮಂಗಳ
ಸತ್ಯವ ತೋರುತ ಸಾಧು ಸಜ್ಜನರ
ಚಿತ್ತದಿ ಹೊಳೆಯುವ ಪುತ್ತಳಿಬೊಂಬೆ 4

ಸಕ್ಕರೆ ತುಪ್ಪ ಕಾಲುವೆ ಹರಿಸಿ
ಶುಕ್ರವಾರದ ಪೂಜೆಯ ವೇಳೆಗೆ
ಅಕ್ಕರೆಯುಳ್ಳ ಅಳಗಿರಿರಂಗನ 5
ಚೊಕ್ಕ ಪುರಂದರವಿಠಲನ ರಾಣಿ

4

ಆಚಾರವಿಲ್ಲದ ನಾಲಿಗೆ ನಿನ್ನ ಪಲ್ಲವಿ
ನೀಚ ಬುದ್ಧಿಯ ಬಿಡು ನಾಲಿಗೆ
ವಿಚಾರವಿಲ್ಲದೆ ಪರರ ದೂಷಿಪುದಕ್ಕೆ
ಚಾಚಿಕೊಂಡಿರುಪಂಥ ನಾಲಿಗೆ ಅನುಪಲ್ಲವಿ

ಪ್ರಾತಃಕಾಲದೊಳೆದ್ದು ನಾಲಿಗೆ
ಸಿರಿಪತಿಯೆನ್ನಬಾರದೆ ನಾಲಿಗೆ
ಪತಿತ ಪಾವನ ನಮ್ಮ ರತಿಪತಿ ಜನಕವ
ಸತತವು ನುಡಿ ಕಂಡ್ಯ ನಾಲಿಗೆ 1

ಚಾಡಿ ಹೇಳಲಿಬೇಡ ನಾಲಿಗೆ
ನಿನ್ನ ಬೇಡಿಕೊಂಬುವೆನು ನಾಲಿಗೆ
ರೂಢಿಗೊಡೆಯ ಶ್ರೀ ರಾಮನ ನಾಮವ
ಪಾಡುತಲಿರು ಕಂಡ್ಯ ನಾಲಿಗೆ 2

ಹರಿಯ ಸ್ಮರಣೆ ಮಾಡು ನಾಲಿಗೆ
ನರಹರಿಯ ಭಜಿಸು ಕಂಡ್ಯ ನಾಲಿಗೆ
ವರದ ಪುರಂದರವಿಠ್ಠಲರಾಯನ
ಚರಣ ಕಮಲವ ನೆನೆ ನಾಲಿಗೆ 3

**5**

ಎಚ್ಚರಿಕೆ ಭಾಗ್ಯ ಯಾರಿಗೂ ಸ್ಥಿರವಲ್ಲ
ನಿಶ್ಚಯವೆಚ್ಚರಿಕೆ ಪಲ್ಲವಿ

ಹೆಚ್ಚದೆ ಹಿಗ್ಗದೆ ಇದ್ದರೆ ಲೋಕಕ್ಕೆ ಅನುಪಲ್ಲವಿ
ಮೆಚ್ಚು ಕೇಳಚ್ಚರಿಕೆ

ಬಲ್ಲಿದ ನೀನೆಂದು ಬಡವರ ಬಾಯನು
ಬಡಿಯ ಬೇಡೆಚ್ಚರಿಕೆ

ಎಳ್ಳಷ್ಟು ತಪ್ಪಲು ಯಮನವರು ನರಕಕೆ
ಎಳೆದೊಯ್ಯುವರೆಚ್ಚರಿಕೆ 1

ಮಾಡು ದಾನ ಧರ್ಮ ಪರಉಪಕಾರವ
ಮರೆಯದಿರೆಚ್ಚರಿಕೆ

ನೋಡಿ ನಡೆಯುವಂಥ ಪುಣ್ಯವಂತರ ನೋಡು
ನಟನೆ ಬೇಡೆಚ್ಚರಿಕೆ 2

ಮೂಢರ ಒಡನಾಡಿ ಮುಂದುಗಾಣದೆ ನೀನು
ಮುನಿಯದಿರೆಚ್ಚರಿಕೆ

ಕೇಡನೆಣಿಸದಿರು ನಂಬಿದ ಠಾವಿಗೆ ಕೆಡುವೆ
ನೀನೆಚ್ಚರಿಕೆ 3

ಬಾಳುವಾಗ ಸಿರಿ ಸ್ಥಿರವಾಗಿ ಇಹುದೆಂದು
ಬೆಡಗು ಬೇಡೆಚ್ಚರಿಕೆ

ಹಾಳು ಬದುಕಿಗಾಗಿ ಹಲವರ ಕೂಡಣ
ಹಗೆಯು ಬೇಡೆಚ್ಚರಿಕೆ 4

ಕಾಲನವರು ಬಂದು ಯಾವಾಗ ಎಳೆವರೊ
ಕಾಣದು ಎಚ್ಚರಿಕೆ

ಶ್ರೀಲೋಲ ಪುರಂದರವಿಠಲನ ಸ್ಮರಣೆಯ
ಮರೆಯದಿರೆಚ್ಚರಿಕೆ 5

## 6

ಎನಗೂ ಆಣೆ ರಂಗ ನಿನಗೂ ಆಣೆ ಪಲ್ಲವಿ
ಎನಗೂ ನಿನಗೂ ಇಬ್ಬರಿಗೂ ಭಕ್ತರಾಣೆ ಅನುಪಲ್ಲವಿ

ನಿನ್ನ ಬಿಟ್ಟು ಅನ್ಯರ ಭಜಿಸಿದರೆನಗೆ ಆಣೆ, ರಂಗ
ಎನ್ನ ನೀ ಕೈ ಬಿಟ್ಟು ಪೋದರೆ ನಿನಗೆ ಆಣೆ 1

ತನುಮನಧನದಲ್ಲಿ ವಂಚಕನಾದರೆ ಎನಗೆ ಆಣೆ, ರಂಗ
ಮನಸು ನಿನ್ನಲಿ ನಿಲಿಸದಿದ್ದರೆ ನಿನಗೆ ಆಣೆ 2

ಕಾಕು ಮನುಜರ ಸಂಗವ ಮಾಡಿದರೆನಗೆ ಆಣೆ, ರಂಗ
ಲೌಕಿಕವ ಬಿಡಿಸದಿದ್ದರೆ ನಿನಗೆ ಆಣೆ 3

ಶಿಷ್ಟರ ಸಂಗವ ಮಾಡಿದಿದ್ದರೆ ಎನಗೆ ಆಣೆ, ರಂಗ
ದುಷ್ಟರ ಸಂಗವ ಬಿಡಿಸದಿದ್ದರೆ ನಿನಗೆ ಆಣೆ 4

ಹರಿ ನಿನ್ನಾಶ್ರಯ ಮಾಡದಿದ್ದರೆ ಎನಗೆ ಆಣೆ, ರಂಗ
ಪುರಂದರವಿಠಲ ನೀನೊಲಿಯದಿದ್ದರೆ ನಿನಗೆ ಆಣೆ 5

**7**

ಮಾನವಜನ್ಮ ದೊಡ್ಡದು, ಇದ
ಹಾನಿ ಮಾಡಲಿಬೇಡಿ ಹುಚ್ಚಪ್ಪಗಳಿರಾ ಪಲ್ಲವಿ

ಕಣ್ಣು ಕೈ ಕಾಲ್ ಕಿವಿ ನಾಲಿಗೆ ಇರಲಿಕ್ಕೆ
ಮಣ್ಣು ಮುಕ್ಕಿ ಮರುಳಾಗುವರೆ
ಹೆಣ್ಣು ಮಣ್ಣಿಗಾಗಿ ಹರಿಯ ನಾಮಾಮೃತ
ಉಣ್ಣದೆ ಉಪವಾಸ ಇರುವರೆ ಖೋಡಿ 1

ಕಾಲನ ದೂತರು ಕಾಲ್‌ಪಿಡಿದೆಳೆವಾಗ
ತಾಳು ತಾಳೆಂದರೆ ತಾಳುವರೆ
ದಾಳಿ ಬಾರದ ಮುನ್ನ ಧರ್ಮವ ಗಳಿಸಿರೊ
ಸುಳ್ಳಿನ ಸಂಸಾರ ಸುಳಿಗೆ ಸಿಕ್ಕಲುಬೇಡಿ 2

ಏನುಕಾರಣ ಯದುಪತಿಯನು ಮರೆತಿರಿ
ಧನಧಾನ್ಯ ಸತಿಸುತರು ಕಾಯುವರೆ
ಇನ್ನಾದರು ಏಕೋಭಾವದಿ ಭಜಿಸಿರೊ
ಚೆನ್ನ ಶ್ರೀಪುರಂದರವಿಠ್ಠಲರಾಯನ 3

## 8

ಶೃಂಗಾರವಾಗಿಹುದು ಶ್ರೀ ಹರಿಯ ಮಂಚ
ಅಂಗನೆ ಮಹಲಕುಮಿಯರಸ ಮಲಗುವ ಮಂಚ ಪಲ್ಲವಿ

ಬಡಗಿ ಮುಟ್ಟದ ಮಂಚ ಕಡಲೊಳಿಹ ಮಂಚ
ಮೃಡನ ತೋಳಲಿ ಅಡಗಿರುವ ಮಂಚ
ಹೆಡೆಯುಳ್ಳ ಹೊಸಮಂಚ ಪೊಡವಿ ಪೊತ್ತಿಹ ಮಂಚ
ಕಡಲಶಯದ ಶ್ರೀರಂಗನ ಸಿರಿಮಂಚ 1

ಕಾಲಿಲ್ಲದೋಡುವ ಮಂಚ ಗಾಳಿನುಂಗುವ ಮಂಚ
ತೋಳು ಬಿಳುಪಿನ ಮಂಚ ವಿಷಮಂಚ
ಕಾಳಗದೊಳರ್ಜುನನ ಮಕುಟ ಕೆಡಹಿದ ಮಂಚ
ಕೇಳು ಪರೀಕ್ಷಿತನ ಕೊಂದುದೀ ಮಂಚ 2

ಕಣ್ಣು ಕಿವಿಯಾದ ಮಂಚ ಬೆನ್ನು ಬಾಗಿದ ಮಂಚ
ಹುಣ್ಣಿಮೆಯ ಚಂದ್ರಮನ ಅಡ್ಡಗಟ್ಟುವ ಮಂಚ
ಬಣ್ಣ ಬಿಳುಪಿನ ಮಂಚ ಹೊನ್ನು ಕಾದಿಹ ಮಂಚ
ಕನ್ನೆ ಮಹಾಲಕ್ಷ್ಮಿಯರಸನ ಮಂಚ 3

ಹಕ್ಕಿಗೆ ಹಗೆಯಾದ ಮಂಚ ರೊಕ್ಕ ಮುಟ್ಟದ ಮಂಚ
ರಕ್ಕಸರೆದೆ ತಲ್ಲಣಗೊಳಿಸುವ ಮಂಚ
ಸೊಕ್ಕು ಪಿಡಿದ ಮಂಚ ಫಕ್ಕನೆ ನುಂಗುವ ಮಂಚ
ಲಕ್ಕುಮಿರಮಣ ಶ್ರೀಹರಿಯ ಮಂಚ 4

ಅಂಕುಡೊಂಕಿನ ಮಂಚ ಅಕಲಂಕಮಹಿಮ ಮಂಚ
ಸಂಕರುಷ್ಣನೆಂಬ ಸುಖದ ಮಂಚ
ಶಂಕರನ ಕೊರಳಿಗೆ ಪದಕವಾಗಿಹ ಮಂಚ
ವೆಂಕಟಪುರಂದರವಿಠಲರಾಯನ ಮಂಚ 5

**9**

ಊರಿಗೆ ಬಂದರೆ ದಾಸಯ್ಯ, ನಮ್ಮ
ಕೇರಿಗೆ ಬಾ ಕಂಡ್ಯ ದಾಸಯ್ಯ ಪಲ್ಲವಿ

ಕೇರಿಗೆ ಬಂದರೆ ದಾಸಯ್ಯ, ಗೊಲ್ಲ
ಕೇರಿಗೆ ಬಾ ಕಂಡ್ಯ ದಾಸಯ್ಯ ಅನುಪಲ್ಲವಿ

ಕೊರಳೊಳು ವನಮಾಲೆ ಧರಿಸಿದವನೆ, ಕಿರು
ಬೆರಳಲಿ ಬೆಟ್ಟವನ್ನೆತ್ತಿದನೆ
ಇರುಳು ಹಗಲು ನಿನ್ನ ಕಾಣದೆ ಇರಲಾರೆ
ಮರುಳು ಮಾಡಿದಂಥ ದಾಸಯ್ಯ 1

ಕಪ್ಪು ವರ್ಣದ ದಾಸಯ್ಯ, ಕಂ
ದರ್ಪನ ಪಿತನೆಂಬ ದಾಸಯ್ಯ
ಅಪ್ಪಿಕೊಂಡು ನಮ್ಮ ಮನಸಿಗೆ ಬಂದರೆ
ಅಪ್ಪವ ಕೊಡವೆನು ದಾಸಯ್ಯ 2

ಮುಂದೇನು ದಾರಿ ದಾಸಯ್ಯ, ಚೆಲ್ವ
ಪೊಂಗೊಳಲೂದುವ ದಾಸಯ್ಯ
ಹಾಂಗೇ ಪೋಗದಿರು ದಾಸಯ್ಯ ಹೊ
ನ್ನುಂಗುರ ಕೊಡುವೆನು ದಾಸಯ್ಯ 3

ಸಣ್ಣ ನಾಮದ ದಾಸಯ್ಯ, ನಮ್ಮ
ಸದನಕೆ ಬಾ ಕಂಡ್ಯ ದಾಸಯ್ಯ
ಸದನಕೆ ಬಂದರೆ ದಾಸಯ್ಯ, ಮಣಿ
ಸರವನು ಕೊಡುವೆನು ದಾಸಯ್ಯ 4

ಸಿಟ್ಟು ಮಾಡದಿರು ದಾಸಯ್ಯ, ಸಿರಿ
ಪುರಂದರವಿಠ್ಠಲ ದಾಸಯ್ಯ
ರಟ್ಟು ಮಾಡದಿರು ದಾಸಯ್ಯ ತಂ
ಬಿಟ್ಟು ಕೊಡುವೆನು ದಾಸಯ್ಯ 5

## 10

ತಾರಕ್ಕ ಬಿಂದಿಗೆ ನೀರಿಗೆ ಹೋಗುವ ತಾರೇ ಬಿಂದಿಗೆಯ ಪಲ್ಲವಿ

ಬಿಂದಿಗೆ ಒಡೆದರೆ ಒಂದೇ ಕಾಸು ತಾರೇ ಬಿಂದಿಗೆಯ ಅನುಪಲ್ಲವಿ

ರಾಮನಾಮವೆಂಬ ರಸವುಳ್ಳ ನೀರಿಗೆ ತಾರೇ ಬಿಂದಿಗೆಯ
ಕಾಮಿನಿಯರ ಕೂಡೆ ಏಕಾಂತವಾಡೇನು ತಾರೇ ಬಿಂದಿಗೆಯ 1

ಗೋವಿಂದಯೆಂಬುವ ಗುಣವುಳ್ಳ ನೀರಿಗೆ ತಾರೇ ಬಿಂದಿಗೆಯ
ಆವಾವ ಪರಿಯಲ್ಲ ಅಮೃತದ ನೀರಿಗೆ ತಾರೇ ಬಿಂದಿಗೆಯ 2

ಬಿಂದುಮಾಧವನ ಘಟ್ಟಕ್ಕೆ ಹೋಗುವೆ ತಾರೇ ಬಿಂದಿಗೆಯ
ಪುರಂದರವಿಠಲಗೆ ಅಭಿಷೇಕ ಮಾಡುವೆ ತಾರೇ ಬಿಂದಿಗೆಯ 3

## 11

ಗಿಳಿಯು ಪಂಜರದೊಳಿಲ್ಲ ಹರಿಹರಿಯೆ
ಬರಿ ಪಂಜರವಾಯಿತಲ್ಲ ಪಲ್ಲವಿ

ಅಕ್ಕ ಕೇಳೆ ಎನ್ನ ಮಾತು
ಚಿಕ್ಕದೊಂದು ಗಿಳಿಯ ಸಾಕಿದೆ
ಅಕ್ಕ ನಾನಿಲ್ಲದ ವೇಳೆ
ಬೆಕ್ಕು ಕೊಂಡು ಹೊಯಿತಯ್ಯೊ 1

ಅರ್ಥಿಲೊಂದು ಗಿಳಿಯ ಸಾಕಿ
ಮುತ್ತಿನ್ಹಾರವನ್ನು ಹಾಕಿದೆ
ಮುತ್ತಿನ್ಹಾರ ಕೊಂಡು ಗಿಳಿಯು
ಎತ್ತಲ್ಹಾರಿ ಹೋಯಿತಯ್ಯೊ 2

ಹಸುರು ಬಣ್ಣದ ಗಿಳಿಯು
ಕುಶಲ ಬುದ್ಧಿಯ ಗಿಳಿಯು
ಅಸುವು ಗುಂದಿ ಮರಿಯು ತಾನು
ಹಸನಗೆಡಿಸಿ ಹೋಯಿತಯ್ಯೊ 3

ರಾಮ ರಾಮ ಎಂಬ ಗಿಳಿ
ಕೋಮಲ ಕಾಯದ ಗಿಳಿ
ಸಾಮಜ ಪೋಷಕ ತನ್ನ
ಪ್ರೇಮದಿ ಸಾಕಿದ ಗಿಳಿ 4

ಒಂಬತ್ತು ಬಾಗಿಲ ಮನೆಯೊಳ್
ತುಂಬಿದ ಸಂದಣಿ ಇರಲು
ಕಂಭ ಮುರಿದು ಡಿಂಬ ಬಿದ್ದು
ಅಂಬರಕ್ಕೆ ಹಾರಿ ಹೋಯಿತು 5

ಮುಪ್ಪಾಗದ ಬೆಣ್ಣೆ ತಿಂದು
ತಪ್ಪದೆ ಹಾಕಿದ ಹಾಲು

ಒಪ್ಪದಿಂದ ಕುಡಿದು ಕೈ
ತಪ್ಪಿ ಹಾರಿಹೋಯಿತಯ್ಯೊ 6

ಅಂಗೈಲಾಡುವ ಗಿಳಿ
ಮುಂಗೈಮೇಲಣ ಗಿಳಿ
ರಂಗ ಪುರಂದರವಿಠಲನ್ನ
ಅಂಗಣದೊಳಾಡುವ ಗಿಳಿ 7

## 12

ಕದವ ಮುಚ್ಚಿದಳಿದೆಕೊ ಗಯ್ಯಾಳಿ ಮೂಳಿ ಪಲ್ಲವಿ

ಕದವ ಮುಚ್ಚಿದಳಿದೇಕೋ ಚಿಲುಕ ಅಲ್ಲಾಡುತಿದೆ
ಒಳಗಿದ್ದ ಪಾಪವು ಹೋದೀತು ಹೊರಗೆಂದು ಅನುಪಲ್ಲವಿ

ಭಾರತ ರಾಮಾಯಣ ಪುಣ್ಯಕಾವ್ಯಂಗಳ
ಸಾರತತ್ವದ ಬಿಂದು ಸೇರೀತು ಒಳಗೆಂದು 1

ಅಂದುಗೆ ಕಿರುಗೆಜ್ಜೆ ಮುಂಗಾಲಲಳವಟ್ಟ
ಧಿಂಧಿಮಿ ಧಿಮಿಕೆಂದು ಕುಣಿವ ದಾಸರ ಕಂಡು 2

ನಂದನಕಂದ ಗೋವಿಂದ ಮುಕುಂದನ
ಚೆಂದವಾದ ಧ್ವನಿ ಹೋದೀತು ಕರ್ಣಕೆಂದು 3

ಹರಿಶರಣರಪಾದ ಸರಸಿಜಯುಗಳದ
ಪರಮಪಾವನವಾದ ರಜವು ಬಿದ್ದೀತೆಂದು 4

ಮಂಗಳಮೂರುತಿ ಪುರಂದರವಿಠಲನ
ತುಂಗವಿಕ್ರಮಪದದಂಗುಳಿ ಸೋಕೀತೆಂದು 5

## 13

ಡೊಂಕು ಬಾಲದ ನಾಯಕರೆ ನೀವೇನೇನೂಟ ಮಾಡಿದರಿ ಪಲ್ಲವಿ

ಕಣಕ ಕುಟ್ಟೋ ಅಲ್ಲಿಗೆ ಹೋಗಿ
ಹಣಿಕಿ ಇಣಿಕಿ ನೋಡುವಿರಿ
ಕಣಕ ಕುಟ್ಟೋ ಒನಕೆಲಿ ಬಡಿದರೆ
ಕುಂಯಿ ಕುಂಯಿ ರಾಗವ ಹಾಡುವಿರಿ 1

ಹುಗ್ಗಿ ಮಾಡೋ ಅಲ್ಲಿಗೆ ಹೋಗಿ
ತಗ್ಗಿ ಬಗ್ಗಿ ನೋಡುವಿರಿ
ಹುಗ್ಗಿ ಮಾಡೋ ಸೌಟಲಿ ಬಡಿದರೆ
ಕುಂಯಿ ಕುಂಯಿ ರಾಗವ ಮಾಡುವಿರಿ 2

ಹಿರೇ ಬೀದಿಯಲಿ ಓಡುವಿರಿ
ಕರೇ ಬೂದಿಯಲಿ ಹೊರಳುವಿರಿ
ಪುರಂದರವಿಠ್ಠಲರಾಯನ ಈ ಪರಿ
ಮರೆತು ಸದಾ ನೀವ್ ಚರಿಸುವಿರಿ 3

## 14

ರಾಗಿ ತಂದೀರಾ ಭಿಕ್ಷಕೆ ರಾಗಿ ತಂದೀರಾ ಪಲ್ಲವಿ
ಯೋಗ್ಯರಾಗಿ, ಭೋಗ್ಯರಾಗಿ, ಭಾಗ್ಯವಂತರಾಗಿ ನೀವು ಅನುಪಲ್ಲವಿ

ಅನ್ನದಾನವ ಮಾಡುವರಾಗಿ
ಅನ್ನ ಛತ್ರವನ್ನಿಟ್ಟವರಾಗಿ
ಅನ್ಯ ವಾರ್ತೆಯ ಬಿಟ್ಟವರಾಗಿ
ಅನುದಿನ ಭಜನೆಯ ಮಾಡುವರಾಗಿ 1

ಮಾತಾಪಿತೃಗಳ ಸೇವಿಪರಾಗಿ
ಪಾಪಕಾರ್ಯವ ಬಿಟ್ಟವರಾಗಿ
ಜಾತಿಯಲಿ ಮಿಗಿಲಾದವರಾಗಿ
ನೀತಿಮಾರ್ಗದಲಿ ಖ್ಯಾತರಾಗಿ 2

ಗುರುಕಾರುಣ್ಯವ ಪಡೆದವರಾಗಿ
ಗುರುವಿನ ಮರ್ಮವ ತಿಳಿದವರಾಗಿ
ಗುರುವಿನ ಪಾದವ ಸ್ಮರಿಸುವರಾಗಿ
ಪರಮ ಪುಣ್ಯವ ಮಾಡುವರಾಗಿ 3

ಶ್ರೀನಿವಾಸನ ಸ್ಮರಿಸುವರಾಗಿ
ಪ್ರಾಣರಾಯನ ದಾಸರಾಗಿ
ದಾನಕೆಂದು ಬಲು ಹೆದರಿ ಇಂಥ
ದೀನವೃತ್ತಿಯಲಿ ಹೀನರಾಗಿ 4

ಪಕ್ಷಮಾಸವ್ರತ ಮಾಡುವರಾಗಿ
ಪಕ್ಷಿವಾಹನಗೆ ಪ್ರಿಯರಾಗಿ
ಕುಕ್ಷಿಲಿ ಕಲ್ಮಷ ಇಲ್ಲದವರಾಗಿ
ಭಿಕ್ಷುಕರು ಅತಿ ತುಚ್ಛರಾಗಿ 5

ವೇದ ಪುರಾಣವ ತಿಳಿದವರಾಗಿ
ಮೇದಿನಿಯಾಳುವಂಥವರಾಗಿ
ಸಾಧುಧರ್ಮವಾಚರಿಸುವರಾಗಿ
ಓದಿ ಗ್ರಂಥಗಳ ಪಂಡಿತರಾಗಿ 6

ಆರು ಮಾರ್ಗವ ಅರಿತವರಾಗಿ
ಮೂರು ಮಾರ್ಗವ ತಿಳಿದವರಾಗಿ
ಭೂರಿತತ್ವವ ಬೆರೆದವರಾಗಿ
ಕ್ರೂರರ ಸಂಗವ ಬಿಟ್ಟವರಾಗಿ 7

ಕಾಮಕ್ರೋಧವ ಅಳಿದವರಾಗಿ
ನೇಮನಿಷ್ಠೆಗಳ ಮಾಡುವರಾಗಿ
ಆ ಮಹಾಪದವಿಲಿ ಸುಖಿಸುವರಾಗಿ
ಪ್ರೇಮದಿ ಕುಣಿಕುಣಿದಾಡುವರಾಗಿ 8

ಸಿರಿರಮಣನ ಸದಾ ಸ್ಮರಿಸುವರಾಗಿ
ಗುರುತಿಗೆ ಬಾಹೋರಂಧವರಾಗಿ
ಕರೆಕರೆ ಸಂಸಾರ ನೀಗುವರಾಗಿ
ಪುರಂದರವಿಠಲನ ಸೇವಿಪರಾಗಿ 9

## 15

ಉದರ ವೈರಾಗ್ಯವಿದು, ನಮ್ಮ
ಪದುಮನಾಭನಲಿ ಲೇಶ ಭಕುತಿಯಿಲ್ಲ ಪಲ್ಲವಿ

ಉದಯ ಕಾಲದಲೆದ್ದು ಗಡಗಡ ನಡುಗುತ
ನದಿಯಲಿ ಮಿಂದನೆಂದು ಹಿಗ್ಗುತಲಿ
ಮದ ಮತ್ಸರ ಕ್ರೋಧ ಒಳಗೆ ತುಂಬಿಟ್ಟುಕೊಂಡು
ಬದಿಯಲ್ಲಿದ್ದವರಿಗಾಶ್ಚರ್ಯವ ತೋರುವುದು 1

ಕಂಚುಗಾರನ ಬಿಡಾರದಂದದಿ
ಕಂಚು ಹಿತ್ತಾಳಿ ಪ್ರತಿಮೆಗಳ ನೆರಹಿ
ಮಿಂಚಬೇಕೆಂದು ಬಲು ಜ್ಯೋತಿಗಳನು ಹಚ್ಚಿ
ವಂಚನೆಯಿಂದಲಿ ಪೂಜೆ ಮಾಡುವುದು 2

ಕರದಲಿ ಜಪಮಣಿ ಬಾಯಲಿ ಮಂತ್ರವು
ಅರಿವೆಯ ಮುಸುಕನು ಮೋರೆಗೆ ಹಾಕಿ
ಪರಸತಿಯರ ಗುಣ ಮನದಲಿ ಸ್ಮರಿಸುತ
ಪರಮ ವೈರಾಗ್ಯಶಾಲಿ ಎಂದೆನಿಸುವುದು 3

ಬೂಟಕ ತನದಲಿ ಬಹಳ ಭಕುತಿ ಮಾಡಿ
ದಿಟನೀತ ಸರಿಯಾರಿಲ್ಲೆನಿಸಿ
ನಾಟಕ ಸ್ತ್ರೀಯಂತೆ ಬಯಲ ಡಂಬವ ತೋರಿ
ಊಟದ ಮಾರ್ಗದ ಜ್ಞಾನವಿದಲ್ಲದೆ 4

ನಾನು ಎಂಬುದ ಬಿಟ್ಟು ಜ್ಞಾನಿಗಳೊಡನಾಡಿ
ಏನಾದರು ಹರಿ ಪ್ರೇರಣೆಯೆಂದು
ಧ್ಯಾನಿಸಿ ಮೌನದಿ ಪುರಂದರವಿಠಲನ
ಕಾಣದೆ ಮಾಡಿದ ಕಾರ್ಯಗಳೆಲ್ಲವು 5

## ಕನಕದಾಸ

### 1

ಕುಲ ಕುಲ ಕುಲವೆನ್ನುತಿಹರು ಪಲ್ಲವಿ

ಕುಲವ್ಯಾವುದು ಸತ್ಯ ಸುಖವುಳ್ಳ ಜನರಿಗೆ ಅನುಪಲ್ಲವಿ

ಕೆಸರೊಳು ತಾವರೆ ಪುಟ್ಟಲು ಅದ ತಂದು
ಬಿಸಜನಾಭನಿಗರ್ಪಿಸಲಿಲ್ಲವೆ
ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವು
ವಸುಧೆಯೊಳಗೆ ಭೂಸುರರುಣ್ಣಲಿಲ್ಲವೆ 1

ಮೃಗಗಳ ಮೈಯಲ್ಲಿ ಪುಟ್ಟಿದ ಕಸ್ತೂರಿ
ತೆಗೆದು ಪೂಸುವರು ಭೂಸುರರೆಲ್ಲರು
ಒಗೆಯಿಂದ ನಾರಾಯಣನ್ಯಾವ ಕುಲದವ
ಅಗಜವಲ್ಲಭನ್ಯಾತರ ಕುಲದವನು 2

ಆತ್ಮ ಯಾವ ಕುಲ ಜೀವ ಯಾವ ಕುಲ
ತತ್ತ್ವೇಂದ್ರಿಯಗಳ ಕುಲ ಪೇಳಿರಯ್ಯ
ಆತ್ಮಾಂತರಾತ್ಮ ನೆಲೆಯಾದಿಕೇಶವ
ಆತನೊಲಿದ ಮೇಲೆ ಯಾತರ ಕುಲವಯ್ಯ 3

## 2

ಅಡಿಗೆಯನ್ನು ಮಾಡಬೇಕಣ್ಣ ನಾನೀಗ ಜ್ಞಾನ
ದಡಿಗೆಯನ್ನು ಮಾಡಬೇಕಣ್ಣ ಪಲ್ಲವಿ

ಅಡಿಗೆಯನ್ನು ಮಾಡಬೇಕು ಮಡಿಸಬೇಕು ಮದಗಳನ್ನು
ಒಡೆಯನಾಜ್ಞೆಯಿಂದ ಒಳ್ಳೆ ಸಡಿಗರದಿ ಈ ಮನೆಯ ಸಾರಿಸಿ ಅನುಪಲ್ಲವಿ

ತನ್ನ ಗುರುವನ್ನು ನೆನೆಯಬೇಕಣ್ಣ ತನುಭಾವವೆಂಬ
ಭಿನ್ನಕಲ್ಮಶವಳಿಯಬೇಕಣ್ಣ
ಒನಕೆಯಿಂದ ಕುಟ್ಟಿ ಕೇರಿ ತನಗೆ ತಾನೆ ಅದ ಕೆಚ್ಚ
ನನುವರಿತು ಇಕ್ಕಬೇಕು ಅರಿವರ್ಗವೆಂಬ ತುಂಟರಚಿಸಿ 1

ತತ್ತ್ವಭಾಂಡವ ತೊಳೆಯಬೇಕಣ್ಣ ಸತ್ಯಾತ್ಮನಾಗಿ
ಅರ್ತಿ ಅಕ್ಕಿಯ ಮಥಿಸಬೇಕಣ್ಣ
ಕತ್ತರಿಮನವೆಂಬ ಹೊಟ್ಟನು ಎತ್ತಿ ಒಲೆಗೆ ಹಾಕಿ ಇನ್ನು
ಹೊತ್ತಿಕೊಂಡಿಹ ಮಮತೆಯನ್ನು ಎತ್ತಿ ಹೆಸರ ಹಿಂಗಿಸುತಲಿ 2

ಜನನ ಸೊಂಡಿಗೆ ಹುರಿಯಬೇಕಣ್ಣ ನಿಜವಾಗಿ ನಿಂತು
ತನುವು ತುಪ್ಪವ ಕಾಸಬೇಕಣ್ಣ
ಕನಕಗಿರಿ ನೆಲೆಯಾದಿಕೇಶವದಾಸ
ಕನಕನ ಕಟ್ಟಳೆಯೊಳು ನಿಂತು ಸುಖದ ಪಾಕವನು ಚಂದದಿಂ ಸವಿದುಣ್ಣಲಿಕ್ಕೆ 3

## 3

ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ತುತ್ತು ಹಿಟ್ಟಿಗಾಗಿ ಪಲ್ಲವಿ

ವೇದ ಶಾಸ್ತ್ರ ಪಂಚಾಂಗ ಓದಿಕೊಂಡು ಪರರಿಗೆ
ಬೋಧನೆಯ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ 1

ಚಂಡ ಭಟರಾಗಿ ನಡೆದು ಕತ್ತಿ ಢಾಲು ಕೈಲಿ ಹಿಡಿದು
ಖಂಡ ತುಂಡ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ 2

ಅಂಗಡಿಗಳನ್ನೆ ಹೂಡಿ ವ್ಯಂಗ್ಯ ಮಾತುಗಳಾಡಿ
ಭಂಗಬಿದ್ದು ಗಳಿಸುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ 3

ಕುಂಟೆ ತುದಿಗೆ ಕೊರಡು ಹಾಕಿ ಹೆಂಟೆ ಮಣ್ಣು ಸಮ ಮಾಡಿ
ರೆಂಟೆ ಹೊಡೆದು ಬೆಳೆಸುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ 4

ಬೆಲ್ಲದಂತೆ ಮಾತನಾಡಿ ಎಲ್ಲರನ್ನೂ ಮರಳುಮಾಡಿ
ಸುಳ್ಳು ಬೊಗಳಿ ತಿಂಬುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ 5

ಕೊಟ್ಟಣವ ಕುಟ್ಟಿಕೊಂಡು ಕಟ್ಟಿಗೆಯ ಹೊತ್ತುಕೊಂಡು
ಕಷ್ಟಮಾಡಿ ತಿಂಬುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ 6

ತಾಳ ದಂಡಿಗೆ ಶ್ರುತಿ ಮೇಳ ತಂಬೂರಿಗೊಂಡು
ಸೂಳೆಯಂತೆ ಕುಣಿಯುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ 7

ಸನ್ಯಾಸಿ ಜಂಗಮ ಜೋಗಿ ಜಟ್ಟಿ ಪುಂಡ ಬೈರಾಗಿ
ನಾನಾ ವೇಷಗಳೆಲ್ಲ ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ 8

ಹಳ್ಳದಲ್ಲಿ ಕುಳಿತುಕೊಂಡು ಕಲ್ಲು ದೊಣ್ಣೆ ಹಿಡಿದುಕೊಂಡು
ಕಳ್ಳತನವ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ 9

ಅಂದಣ ಪಲ್ಲಕ್ಕಿ ಏರಿ ಮಂದಿ ಮಾರ್ಬಲ ಕೂಡಿ
ಚಂದದಿಂದ ಮೆರೆಯುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ 10

ಉನ್ನಂತ ನೆಲೆಯಾದಿಕೇಶವನ ಧ್ಯಾನವನ್ನು
ಮನಮುಟ್ಟಿ ಮಾಡುವುದು ಮುಕ್ತಿಗಾಗಿ ಆನಂದಕಾಗಿ 11

## 4

ಆರು ಬದುಕಿದರಯ್ಯ ಹರಿ ನಿನ್ನ ನಂಬಿ ಪಲ್ಲವಿ

ತೋರು ಈ ಧರೆಯೊಳಗೆ ಒಬ್ಬರನು ಕಾಣೆ ಕೃಷ್ಣ ಅನುಪಲ್ಲವಿ

ಕಲಹ ಬಾರದ ಮುನ್ನ ಕರ್ಣನೊಬ್ಬನ ಕೊಂದೆ
ಸುಲಭದಲಿ ಕೌರವರ ಮನೆಯ ಮುರಿದೆ
ನೆಲನ ಬೇಡಲು ಹೋಗಿ ಬಲಿಯ ಭೂಮಿಗೆ ತುಳಿದೆ
ಮೊಲೆಯನುಣ್ಣಲು ಹೋಗಿ ಪೂತನಿಯ ಕೊಂದೆ 1

ಕರುಳೊಳಗೆ ಕತ್ತರಿಯನ್ನಿಟ್ಟು ಹಂಸಧ್ವಜನ
ಸರಸದಿಂ ಮಗಳ ಗಂಡನ ಕೊಲಿಸಿದೆ
ಮರುಳಿನಿಂದಲೆ ಹೋಗಿ ಭೃಗುಮುನಿಯ ಕಣ್ಣೊಡೆದೆ
ಅರಿತು ನರಕಾಸುರನ ಹೆಂಡತಿಯ ತಂದೆ 2

ತಿರಿದುಂಬ ದಾಸರ ಕೈಯ ಕಪ್ಪವ ಕಟ್ಟಿಸಿಕೊಂಡೆ
ತಿರುಮಲಾಚಾರ್ಯ ಶ್ರೀಗುರುವೆ ಬಲ್ಲ
ವರಕಾಗಿನೆಲೆಯಾದಿಕೇಶವನ ಭಜಿಸಿದರೆ
ತಿರಿವೆನೆಂದರೆ ತಿರುಪೆ ಕೂಳ್ಪುಟ್ಟದೈ ಕೃಷ್ಣ 3

## 5

ಒಂಬತ್ತು ಹೂವಿಗೆ ಒಂದೇ ನಾಳವು ಚಂದಮಾಮ ಪಲ್ಲವಿ
ತುಂಬಿ ನಾಳತುದಿ ತುಂಬಿ ಭಾನುಪ್ರಭೆ ಚಂದಮಾಮ ಅನುಪಲ್ಲವಿ

ಕದರುಗಾತರ ಕಂಬ ತೆಕ್ಕೆಗಾತರ ಹೂವು ಚಂದಮಾಮ
ಆನೆಗಾತರ ಕಾಯಿ ಒಂಟೆಗಾತರ ಹಣ್ಣು ಚಂದಮಾಮ 1

ಕಾಲಿಲ್ಲದಾತನು ಹತ್ತಿದನಾ ಮರ ಚಂದಮಾಮ
ಕೈಯಿಲ್ಲದಾತನು ಕೊಯ್ದನು ಆ ಹಣ್ಣು ಚಂದಮಾಮ 2

ನೆತ್ತಿಲ್ಲದಾತನು ಹೊತ್ತಾನು ಆ ಹಣ್ಣು ಚಂದಮಾಮ
ತಳವಿಲ್ಲದಾ ಗೊಡುಗಳಿಸಿದನಾ ಹಣ್ಣು ಚಂದಮಾಮ 3

ಮಾರ್ಗ ತಪ್ಪಿ ಮಾರ್ಗ ಹಿಡಿದು ನಡೆದರು ಚಂದಮಾಮ
ಸದ್ದಿಲ್ಲದಾ ಸಂತೇಲಿಳಿಸಿದರು ಹಣ್ಣ ಚಂದಮಾಮ 4

ರೊಕ್ಕವಿಲ್ಲದಾತ ಕೊಂಡಾನು ಆ ಹಣ್ಣ ಚಂದಮಾಮ
ಮೂಗಿಲ್ಲದಾತನು ಮೂಸಿದ ಆ ಹಣ್ಣ ಚಂದಮಾಮ 5

ಕಣ್ಣಿಲ್ಲದಾತನು ಕಂಡನಾ ಹಣ್ಣಂದ ಚಂದಮಾಮ
ಅಂಗವಿಲ್ಲದಾತನು ನುಂಗಿದನಾ ಹಣ್ಣ ಚಂದಮಾಮ 6

ಬಾಯಿಲ್ಲದವ ತಿಂದು ಬಸಿರಲ್ಲಿ ಇಂಬಿಟ್ಟ ಚಂದಮಾಮ
ಸುಲಭ ಪದವಿದು ನಳಿನಜಾಂಡದೊಳು ಚಂದಮಾಮ 7

ಗುರುವಿನ ಮಹಿಮೆಯ ಗುರುವೆ ತಾ ಬಲ್ಲನು ಚಂದಮಾಮ
ಮೂಢನಾದವನೇನು ಬಲ್ಲನು ಈ ಮಾತ ಚಂದಮಾಮ 8

ಕನಕನಾಡಿದ ಗುಟ್ಟ ಆದಿಕೇಶವ ಬಲ್ಲ ಚಂದಮಾಮ
ತಿಳಿದವರು ಪೇಳಿರೈ ಹಳೆಗನ್ನಡ ಚಂದಮಾಮ 9

**6**

ಮರವನು ನುಂಗುವ ಪಕ್ಷಿ ಮನೆಯೊಳಗೆ ಬಂದಿದೆ ಪಲ್ಲವಿ

ಒಂಟಿ ಕೊಂಬಿನ ಪಕ್ಷಿ ಒಡಲೊಳಗೆ ಕರುಳಿಲ್ಲ
ಗಂಟಲು ಮೂರುಂಟು ಮೂಗು ಇಲ್ಲ
ಕುಂಟು ಮನುಜನಂತೆ ಕುಳಿತಿಹುದು ಮನೆಯೊಳಗೆ
ಎಂಟು ಹತ್ತರ ಭಕ್ಷ್ಯ ಭಕ್ಷಿಸುವುದು 1

ನಡುವೆ ಕಲೆಯುಂಬುವುದು ನಡುನೆತ್ತಿಯಲಿ ಬಾಯಿ
ಕಡುಸ್ವರಗಳಿಂದ ಗಾನಮಾಡ್ವರು
ಅಡವಿಯಲ್ ಹುಟ್ಟುವುದು ಅಂಗಪೆರಡಾಗುವುದು
ಬಡತನ ಬಂದರೆ ಬಹಳ ರಕ್ಷಿಪುದು 2

ಕಂಜವದನೆಯರ ಕರದಲ್ಲಿ ನಲಿದಾಡುವುದು
ಎಂಜಲನುಣಿಸುವುದು ಮೂಜಗಕೆ
ರಂಜಿಪ ಶಿಖಾಮಣಿ ಸಿಂಹಾಸನದ ಮೇಲಿರ್ಪ
ಸಂಜೀವ ಪಿತ ಆದಿಶೇಶವನೆ ಬಲ್ಲ 3

## 7

ಕೇಶವನೊಲುಮೆಯು ಆಗುವ ತನಕ ಹರಿ
ದಾರರೊಳಿರುತಿರು ಹೇ ಮನುಜ ಪಲ್ಲವಿ

ಕ್ಲೇಶಪಾಶಂಗಳ ಹರಿದು ವಿಲಾಸದಿ
ಶ್ರೀಶನ ಸುತಿಗಳ ಪೊಗಳುತ ಮನದೊಳು ಅನುಪಲ್ಲವಿ

ಮೋಸದಿ ಜೀವರ ಘಾಸಿಮಾಡಿದ ಪಾಪ
ಕಾಶಿಗೆ ಹೋದರೆ ಹೋದೀತೆ
ಶ್ರೀಶನ ಭಕುತರ ದೂಷಿಸಿದಾ ಫಲ
ಕಾಸು ಕೊಟ್ಟರೆ ಬಿಟ್ಟೀತೆ
ಭಾಷೆಯ ಕೊಟ್ಟು ನಿರಾಶೆಮಾಡಿದಾ ಫಲ
ಕ್ಲೇಶವಗೊಳಿಸದೆ ಇದ್ದೀತೇ
ಭೂಸುರತ್ವವ ಹ್ರಾಸಮಾಡಿದ ಫಲ
ಏಸೇಸು ಜನುಮಕು ಬಿಟ್ಟೀತೆ 1

ಜೀನನ ವಶದೊಳು ನಾನಾ ದ್ರವ್ಯವಿರೆ
ದಾನಧರ್ಮಕೆ ಮನಸಾದೀತೆ
ಹೀನ ಮನುಜನಿಗೆ ಜ್ಞಾನವ ಬೋಧಿಸೆ
ಹೀನ ವಿಷಯವಳಿದ್ಹೋದೀತೆ
ಮಾನಿನಿ ಮನಸು ನಿಧಾನವಿರದಿರೆ
ಮಾನಾಭಿಮಾನಗಳುಳಿದೀತೆ
ಭಾನುಪ್ರಕಾಶನ ಭಜನೆಯ ಮಾಡದ
ಹೀನಗೆ ಮುಕುತಿಯು ದೊರಕೀತೆ 2

ಸತ್ಯಧರ್ಮಗಳ ನಿತ್ಯವು ಬೋಧಿಸೆ
ತೊತ್ತಿನ ಮನಸಿಗೆ ಸೊಗಸೀತೆ
ತತ್ತ್ವದ ಅರ್ಥ ವಿಚಿತ್ರದಿ ಪೇಳಲು
ಕತ್ತೆಯ ಚಿತ್ತಕೆ ಹತ್ತೀತೆ
ಪುತ್ಥಳಿ ಬೊಂಬೆಯ ಚಿತ್ರದಿ ಬರೆದರೆ
ಮುತ್ತನು ಕೊಟ್ಟರೆ ನುಡಿದೀತೆ

ಕತ್ತುರಿ ತಿಲಕವನ್ನೊತ್ತಿ ಫಣೆಯೊಳಿಡೆ
ಆರ್ತಿಯು ತೋರದೆ ಇದ್ದೀತೆ 3

ನ್ಯಾಯವ ಬಿಟ್ಟನ್ಯಾಯವ ಪೇಳುವ
ನಾಯಿಗೆ ನರಕವು ತಪ್ಪೀತೆ
ತಾಯಿತಂದೆಗಳ ಬಲು ನೋಯಿಸಿದ
ನ್ಯಾಯಿಗೆ ಮುಕುತಿಯು ದೊರಕೀತೆ
ಬಾಯಿ ಕೊಬ್ಬಿ ಬಯ್ಯುವ ಮನುಜಗೆ
ಘಾಯವು ಆಗದೆ ಬಿಟ್ಟೀತೆ
ಮಾಯವಾದಗಳ ಬೋಧಿಪ ಮನುಜಗೆ
ಹೇಯ ನರಕವು ತಪ್ಪೀತೆ 4

ಸಾಧು ಸಜ್ಜನರ ನೋಯಿಸಿದ ಮಾಯಾ
ವಾದಿಗೆ ನರಕವು ತಪ್ಪೀತೆ
ಬಾಧಿಸಿ ಬಡವರ ಅರ್ಥವನೊಯ್ವಗೆ
ವ್ಯಾಧಿಯು ಕಾಡದೆ ಬಿಟ್ಟೀತೆ
ಭೇದವೆಣಿಸಿ ಬಲು ಕ್ಷುದ್ರವ ಕಲಿತರೆ
ಮೋದವೆಂದಿಗು ಆದೀತೆ
ಕದ್ದು ಒಡಲ ಪೊರೆಯುವವನ ಮನೆಯೊಳ
ಗಿದ್ದದು ಹೋಗದೆ ಉಳಿದೀತೆ
ಮೇದಿನಿಯೊಳು ಬಹು ಕ್ಷುದ್ರವ ಕಲಿತರೆ
ಮೋದವೆಂದಿಗು ಆದೀತೆ 5

ಓದಿ ಕುತರ್ಕವ ವಾದಿಸಿ ಸಭೆಯಲಿ
ಮೋದಿಸುವಗೆ ಸುಖವಾದೀತೆ
ಅಂಗಜ ವಿಷಯಗಳನು ತೊರೆದಾತಗೆ
ಅಂಗನೆಯರ ಸುಖ ಸೊಗಸೀತೆ
ಸಂಗದುಃಖಗಳ ಹಿಂಗಿದ ಮನುಜಗೆ
ಶೃಂಗಾರದ ಬಗೆ ಸೊಗಸೀತೆ
ಇಂಗಿತವರಿತ ನಿಸ್ಸಂಗಿಗೆ ಶರೀರ ವ
ಜ್ರಾಂಗಿಯಾಗದೆ ತಾನಿದ್ದೀತೆ

ಮಂಗಳ ಮಹಿಮನ ಅಂಘ್ರಿಯ ಕಾಣದ
ಮಂಗಗೆ ಮುಕುತಿಯು ದೊರಕೀತೆ 6

ಕರುಣಾಮೃತದಾಭರಣವ ಧರಿಸಿದ
ಪರಮಗೆ ಸಿರಿಯು ತಪ್ಪೀತೆ
ಮರಣ ಪಾಶದುರವಣೆ ತೊರೆದಾತಗೆ
ಶರಣರ ಕರುಣವು ತಪ್ಪೀತೆ
ಅರಿತು ಶಾಸ್ತ್ರವನಾಚರಿಪ ಯೋಗ್ಯಗೆ
ಗುರು ಉಪದೇಶವು ತಪ್ಪೀತೆ
ವರ ವೇಲಾಪುರದಾದಿಕೇಶವನ
ಸ್ಮರಿಸುವನಿಗೆ ಮೋಕ್ಷವು ತಪ್ಪೀತೆ 7

## 8

ಸೂಚನೆ : ಧರೆಯ ಭೋಗವನ್ನು ನಂಬಿ
ಹರಿಯ ಮರೆದು ಕೆಡಲಿಬೇಡ
ಧರೆಯ ಭೋಗ ಕನಸಿನಂತೆ ಕೇಳು ಮಾನವ

ತಿರುಕನೋರ್ವನೂರ ಮುಂದೆ
ಮುರುಕು ಧರ್ಮಶಾಲೆಯಲ್ಲಿ
ಒರಗಿ ಇರಲು ಅಲ್ಲೆ ಒಂದು ಕನಸ ಕಂಡನು
ಪುರದ ಅರಸು ಸತ್ತನವಗೆ
ವರಕುಮಾರಿರಿಲ್ಲದಿರಲು
ಕರಿಯ ಕೈಲಿ ಕುಸುಮ ಮಾಲೆಯಿತ್ತು ಪುರದೊಳು 1

ಬಿಡಲದಾರ ಕೊರಳಿನಲ್ಲಿ
ತೊಡರಿಸಲ್ಕೆಯವರ ಪಟ್ಟ
ದೊಡೆಯರನ್ನು ಮಾಳ್ಪೆವೆಂದು ಬಿಟ್ಟರಲ್ಲಿಗೆ
ಒಡನೆ ತನ್ನ ಕೊರಳಿನಲ್ಲಿ
ತೊಡರಿಸುವುದ ಕಂಡು ತಿರುಕ
ಮೊಡವಿಯಾಣ್ಮನೆಂದು ಮನದಿ ಹಿಗ್ಗುತ್ತಿದ್ದನು 2

ಪಟ್ಟಗಟ್ಟಲಾಗ ನೃಪರು
ಕೊಟ್ಟರವಗೆ ಕಪ್ಪಗಳನು
ನೆಟ್ಟನವನು ರಾಜ್ಯವಾಳ್ದ ಕನಸಿನಲ್ಲಿಯೆ
ಪಟ್ಟದರಸಿಯೊಳಗೆ ಸುಖವ
ಪಟ್ಟು ಮನದಿ ಹರುಷ ಪಡಲು
ಪುಟ್ಟಿದವಗೆ ಹೆಣ್ಣು ಗಂಡು ಮಕ್ಕಳಾಗಲೆ 3
ಓಲಗದಲಿರುತ್ತ ತೊಡೆಯ
ಮೇಲೆ ಮಕ್ಕಳಾಡುತಿರಲು
ಲೀಲೆಯಿಂದ ಚಾತುರಂಗ ಬಲವ ನೋಡುತ
ಲೋಲನಾಗಿ ನೆನೆದು ಮನದಿ
ಪೇಳಿ ಮಂತ್ರಿಗಳಿಗೆ ಆಗ
ಬಾಲೆಯರನು ನೋಡಿ ಮದುವೆ ಮಾಳ್ಪೆನೆಂದನು 4

ನೋಡಿ ವರರನೆನುತ ಕಳುಹೆ
ನೋಡಿ ಬಂದೆವೆನಲು ಜೀಯ
ಮಾಡೆ ಮದುವೆ ಮಂಟಪವನು ರಚಿಸಿರೆಂದನು
ಗಾಢ ಸಂಭ್ರಮದಲಿ ಕೂಡಿ
ಮಾಡಿದನು ಮದುವೆಗಳನ್ನು
ರೂಢಿಪಾಲರೆಲ್ಲ ಕೇಳಿ ಮೆಚ್ಚುವಂದದಿ 5

ಧನದ ಮದವು ರಾಜ್ಯ ಮದವು
ವನಿತೆ ಮದವು ಸುತರ ಮದವು
ಕನಸಿನಲ್ಲಿ ಕಂಡು ತಿರುಕ ಹಿಗ್ಗುತಿದ್ದನು
ಅನಿತರೊಳಗೆ ನೃಪರ ದಂಡು
ಮನೆಯ ಮುತ್ತಿದಂತೆ ಇರಲು
ಕನಸಿನಲ್ಲಿ ಕಂಡು ಭಯದಿ ಕಣ್ಣು ತೆರೆದನು 6

ಮೆರೆವುತಿದ್ದ ಭಾಗ್ಯವೆಲ್ಲ
ಹರಿದು ಹೋಯಿತೆಂದು ತಿರುಕ
ತಿರಿಯುವುದಕೆ ನಾಚುತಿದ್ದ ಮರುಳನಂದದಿ
ಸಿರಿಯು ಕನಸಿನಂತೆ ಕೇಳು
ಅರಿತು ಆದಿಕೇಶವನ್ನ
ಹರುಷದಿಂದ ಭಜಿಸೆ ನಿತ್ಯ ಸುಖವನೀವನು 7

## 9

ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ ಪಲ್ಲವಿ
ಬಹು ಜನರು ನೆರೆ ತಿಳಿದು ಪೇಳಿ ಮತ್ತಿದನು ಅನುಪಲ್ಲವಿ

ದೇವರಿಲ್ಲದ ಗುಡಿಯು ಪಾಳುಬಿದ್ದಂಗಡಿಯು
ಭಾವವಿಲ್ಲದ ಭಕುತಿ ಅದು ಕುಹಕಯುಕುತಿ
ಹೇವವಿಲ್ಲದ ಹೆಣ್ಣು ಗಜುಗ ಬೆಳೆದಾ ಕಣ್ಣು
ಸೇವೆಯರಿಯದ ಧಣಿಯು ಕಲ್ಲಿನಾ ಕಣಿಯು 1

ಧರ್ಮವಿಲ್ಲದ ಅರಸು ಮುರಿದ ಕಾಲಿನ ಗೊರಸು
ನಿರ್ಮಲಿಲ್ಲದ ಮನಸು ತಾ ಕೊಳಚೆ ಹೊಲಸು
ಶರ್ಮವಿಲ್ಲದ ಗಂಡು ಕರಿಯ ಒನಕೆಯು ತುಂಡು
ಮರ್ಮವಿಲ್ಲದ ಮಾತು ಒಡಕುಮಡಕೆಯು ತೂತು 2

ಮಕ್ಕಳಿಲ್ಲದ ಸಿರಿಯು ಕೊಳಿತ ತೆಂಗಿನ ತುರಿಯು
ಸೌಖ್ಯವಿಲ್ಲದ ಊಟ ಅದು ಕಾಳಕೂಟ
ಒಕ್ಕಲಿಲ್ಲದ ಊರು ಕೊಳೆತು ನಾರುವ ನೀರು
ಸೊಕ್ಕಿ ನಡೆಯುವ ಭೃತ್ಯ ಅವ ಕ್ರೂರಕೃತ್ಯ 3

ಕಂಡು ಕರೆಯದ ನೆಂಟ ಮೊಸೆಯು ಕಟ್ಟಿಹ ಕಂಟ
ಉಂಡು ನಗದಿಹ ಮೋರೆ ಅದು ಕಹಿಯ ಸೋರೆ
ದಂಡಿಗಂಜುವ ಬಂಟ ಒಡಕು ಹರವಿಯು ಕಂಠ
ಗಂಡಗಂಜದ ನಾರಿ ತಾನವಳೆ ಹೆಮ್ಮಾರಿ 4

ಬಿಟ್ಟು ನಡೆಯುವ ಗೆಣೆಯು ಹರಕು ತೊಗಲಿನ ಮಿಣಿಯು
ಕೊಟ್ಟು ಪೇಳುವ ದಾತ ಅವ ಹೀನಜಾತ
ಸೃಷ್ಟಿಯೊಳು ಕಾಗಿನೆಲೆಯಾದಿಕೇಶವನಂಘ್ರಿ
ಮುಟ್ಟಿ ಭಜಿಸದ ನರನು ಅವನೆ ವಾನರನು 5

## 10

ಸತ್ಯವಂತರ ಸಂಗವಿರಲು ತೀರ್ಥವ್ಯಾತಕೆ
ನಿತ್ಯ ಜ್ಞಾನಿಯಾದ ಮೇಲೆ ಚಿಂತೆಯಾತಕೆ ಪಲ್ಲವಿ

ತಾನು ಉಣ್ಣದೆ ಪರರಿಗಿಕ್ಕದ ಧನವಿದ್ಯಾತಕೆ
ಮಾನಹೀನನಾಗಿ ಬಾಳ್ವ ಮನುಜನ್ಯಾತಕೆ
ಜ್ಞಾನವಿಲ್ಲದೆ ನೂರುಕಾಲ ಬದುಕಲ್ಯಾತಕೆ
ಮಾನಿನೀಯು ತೊರೆದ ಮೇಲೆ ಭೋಗವ್ಯಾತಕೆ 1

ಮಾತು ಕೇಳದೆ ಮರೆತು ನಡೆವ ಮಕ್ಕಳ್ಯಾತಕೆ
ಪ್ರೀತಿಯಿಲ್ಲದೆ ಎಡೆಯಲಿಕ್ಕಿದ ಅನ್ನವ್ಯಾತಕೆ
ನೀತಿಯರಿತು ನಡೆಯದಿರುವ ಬಂಟನ್ಯಾತಕೆ
ಸೋತು ಹೆಣ್ಣಿಗೆ ಹೆದರಿ ನಡೆವ ಪುರುಷನ್ಯಾತಕೆ 2

ಸನ್ನೆಯರಿತು ನಡೆಯದಿರುವ ಸತಿಯು ಯಾತಕೆ
ಮನ್ನಣೆಂದ ನಡೆಸದಿರುಪ ದೊರೆಯು ಯಾತಕೆ
ಮುನ್ನ ಕೊಟ್ಟು ಪಡೆಯದಿನ್ನು ಬಯಸಲ್ಯಾತಕೆ
ಚೆನ್ನ ಆದಿಕೇಶವನಲ್ಲದ ದೈವವ್ಯಾತಕೆ 3

## 11

ತನು ನಿನ್ನದು ಜೀವನ ನಿನ್ನದೊ ಪಲ್ಲವಿ
ಅನುದಿನದಲಿ ಬಾಹೊ ಸುಖದುಃಖ ನಿನ್ನದಯ್ಯ ಅನುಪಲ್ಲವಿ

ಸವಿನುಡಿ ವೇದ ಪುರಾಣ ಶಾಸ್ತ್ರಗಳ
ಕಿವಿಗೊಟ್ಟು ಕೇಳುವ ಕಥೆ (ಸ್ಥಿತಿ) ನಿನ್ನದು
ನವ ಮೋಹನಾಂಗಿಯರ ರೂಪವ ಕಣ್ಣಲಿ
ಎವೆಯಿಕ್ಕದೆ ನೋಡುವ ನೋಟ ನಿನ್ನದಯ್ಯ 1

ಒಡಗೂಡಿ ಗಂಧ ಕಸ್ತೂರಿ ಪರಿಮಳಂಗಳ
ಬಿಡದೆ ಲೇಪಿಸಿಕೊಂಬುವದು ನಿನ್ನದು
ಷಡುರಸದನ್ನಕ್ಕೆ ನಲಿದಾಡುವ ಜಿಹ್ವೆ
ಕಡುರುಚಿಗೊಂಡರೆ ಆ ರುಚಿ ನಿನ್ನದಯ್ಯ 2

ಮಾಯಾ ಪಾಶದ ಬಲೆಯೊಳಗೆ ಸಿಲುಕಿರುವಂಥ
ಕಾಯ ಪಂಚೇಂದ್ರಿಯಂಗಳು ನಿನ್ನವು
ಕಾಯಜಪಿತ ಕಾಗಿನೆಲೆಯಾದಿಕೇಶವನ
ರಾಯ ನೀನಲ್ಲದೆ ನರರ ಸ್ವತಂತ್ರವೆ 3

## 12

ಏನು ಇಲ್ಲದ ಎರಡು ದಿನದ ಸಂಸಾರ ಪಲ್ಲವಿ
ಜ್ಞಾನದಲ್ಲಿ ದಾನಧರ್ಮವ ಮಾಡಿರಯ್ಯಾ ಅನುಪಲ್ಲವಿ

ಹಸಿದು ಬಂದವರಿಗೆ ಅಶನವೀಯಲು ಬೇಕು
ಶಿಶುವಿಗೆ ಪಾಲ್ಬೆಣ್ಣೆಯುಣಿಸಬೇಕು
ಹಸನಾದ ಭೂಮಿಯನು ಧಾರೆಯೆರೆಯಲು ಬೇಕು
ಪುಸಿಯಾಡದಲೆ ಭಾಷೆ ನಡೆಸಲೇ ಬೇಕು 1

ಕಳ್ಳತನಗಳ ಮಾಡಿ ಒಡಲು ಹೊರೆಯಲು ಬೇಡ
ಕುಳ್ಳಿರ್ದ ಸ್ಥಳದಿ ಕುತ್ಸಿತವು ಬೇಡ
ಒಳ್ಳೆಯವ ನಾನೆಂದು ಬಲು ಹೆಮ್ಮೆ ಬೇಡ
ಬಾಳ್ವೆ ಸ್ಥಿರವೆಂದು ನೀ ನಂಬಿ ಕೆಡಬೇಡ 2

ದೊರೆತನವು ಬಂದಾಗ ಕೆಟ್ಟು ನುಡಿಯಬೇಡ
ಸಿರಿ ಬಂದ ಕಾಲಕ್ಕೆ ಬಲು ಮೆರೆಯಬೇಡ
ಸಿರಿವಂತನಾದರೆ ನೆಲೆಯಾದಿ ಕೇಶವನ
ಚರಣ ಕಮಲವ ಸೇರಿ ಸುಖಿಯಾಗು ಮನುಜ 3

## 13

ಕೂಸನು ಕಂಡೀರ್‍ಯಾ ಸುಪ್ರ
ಹ್ಲಾದನ ಕಂಡೀರ್‍ಯಾ ನಮ್ಮ
ಕೂಸನು ಕಂಡೀರ್‍ಯಾ ಪಲ್ಲವಿ

ರಾಕ್ಷಸ ಕುಲದಲಿ ಜನಿಸಿತು ಕೂಸು
ರಾಧಾಕೃಷ್ಣರ ಭಜಿಸಿತು ಕೂಸು
ರಾಗದ್ವೇಷಗಳ ಬಿಟ್ಟಿತು ಕೂಸು
ರಾಮುಪಾದವ ನೆನೆಯುವ ಕೂಸು 1

ಘನ ಹರಿ ಕಂಬದಿ ತೋರಿತು ಕೂಸು
ಗಳಿಸಿತು ಕೃಷ್ಣನ ಪ್ರೇಮದ ಕೂಸು
ಘನ ಮಂತ್ರಾಲಯ ವಾಸಿಪ ಕೂಸು
ವೇಣುಗೋಪಾಲನಾ ಪ್ರೀತಿಯ ಕೂಸು 2

ಪ್ರಸಿದ್ಧ ವ್ಯಾಸರಾಯರೆಂಬ ಕೂಸು
ಪ್ರವೀಣವಿದ್ಯೆಯೊಳ ಎನಿಸಿದ ಕೂಸು
ಪ್ರಹ್ಲಾದನೆಂಬ ಆಹ್ಲಾದ ಕೂಸು
ಪ್ರಸನ್ನ ಕಾಗಿನೆಲೆಯಾಗಿದಿಕೇಶವನ 3

## ವಿಜಯದಾಸ

### 1

ಕೈಲಾಸ ವಾಸ ಗೌರೀಶ ಈಶ ಪಲ್ಲವಿ

ತೈಲ ಧಾರೆಯಂತೆ ಮನಸುಕೊಡು ಹರಿಯಲ್ಲಿ ಶಂಭೋ ಅನುಪಲ್ಲವಿ

ಅಹೋರಾತ್ರಿಯಲಿ ನಾನು ಅನುಚರಾಗ್ರಣಿಯಾಗಿ
ಮಹಿಯೊಳಗೆ ಚರಿಸಿದೆನೊ ಮಹದೇವನೆ
ಅಹಿಭೂಷಣನೆ ಎನ್ನವಗುಣಗಳೆಣಿಸದಲೆ
ವಿಹಿತ ಧರ್ಮದಿ ಕೊಡು ವಿಷ್ಣುಭಕುತಿಯ ಶಂಭೋ 1

ಮನಸು ಕಾರಣವಲ್ಲ ಪಾಪ ಪುಣ್ಯಕ್ಕೆಲ್ಲ
ಅನಲಾಕ್ಷ ನಿನ್ನ ಪ್ರೇರಣೆಯಲ್ಲದೆ
ದನುಜ ಗಜ ಹರಿಯೆ ದಂಡ ಪ್ರಣಾಮವ ಮಾಳ್ಪೆ
ಮಣಿಸು ಈ ಮನವ ಸಜ್ಜನರ ಚರಣದಿ ಶಂಭೋ 2

ಭಾಗೀರಥೀಧರನೆ ಭಯವ ಪರಿಹರಿಸಯ್ಯ ಲೇ
ಸಾಗಿ ಒಲಿದು ಸಂತತ ಶರ್ವದೇವ
ಭಾಗವತ ಜನಪ್ರಿಯ ವಿಜಯ ವಿಠ್ಠಲನಂಘ್ರಿ
ಜಾಗುಮಾಡದೆ ಭಜಿಪ ಭಾಗ್ಯವನು ಕೊಡು ಶಂಭೋ 3

## 2

ಅಂತರಂಗದ ಕದವು ತೆರೆಯಿತೆಂದು ಪಲ್ಲವಿ

ಎಂತು ಪುಣ್ಯದ ಫಲವು ಪ್ರಾಪ್ತಿದೊರಕಿತೊ ಎನಗೆ ಅನುಪಲ್ಲವಿ

ಏಸುದಿನವಾಯಿತೊ ಬೀಗಮುದ್ರೆಯ ಮಾಡಿ
ವಾಸವಾಗಿದ್ದರೊ ದುರುಳರಲ್ಲಿ
ಮೋಸವಾಯಿತು ಇಂದಿನ ತನಕ ತಮಸಿನ
ರಾಸಿಯೊಳಗೆ ಹೂಳಿ ಕಾಣಿಸುತ್ತಿರಲಿಲ್ಲ 1

ಹರಿ ಕರುಣವೆಂಬಂಥ ಕೀಲಿ ಕೈದೊರಕಿತು
ಗುರು ಕರುಣವೆಂಬಂಥ ಶಕ್ತಿಯಿಂದ
ಪರಮ ಭಾಗವತರ ಸಹವಾಸದಲಿ ಪೋಗಿ
ಹರಿ ಸ್ಮರಣೆಯಿಂದಲ್ಲಿ ಬೀಗ ಮುದ್ರೆಯ ತೆಗೆದೆ 2

ಸುತ್ತಲಿದ್ದವರೆಲ್ಲ ಪಲಾಯನವಾದರು
ಭಕ್ತಿ ಕಕ್ಕಡವೆಂಬ ಜ್ಞಾನದೀಪ
ಜತ್ತಾಗಿ ಹಿಡಕೊಂಡು ದ್ವಾರದೊಳಗೆ ಪೊಕ್ಕೆ
ಎತ್ತನೋಡಿದರತ್ತ ಶೃಂಗಾರ ಸದನ 3

ಹೊರಗೆ ದ್ವಾರವು ನಾಲ್ಕು ಒಳಗೈದು ದ್ವಾರಗಳು
ಪರದಾರಿಗೆ ಪ್ರಾಣ ಜಯವಿಜಯರು
ಮಿರುಗುವಾ ಮಧ್ಯಮಂಟಪ ಕೋಟಿರವಿಯಂತೆ
ಸರಸಿಜನಾಭನ ಅರಮನೆಯ ಸೊಬಗು 4

ಸ್ವಮೂರ್ತಿಗಣ ಮಧ್ಯ ಸಚ್ಚಿದಾನಂದೈಕ
ರಮೆಧರೆಯರಿಂದ ಲಾಲಿಂಗಿತ್ವದಿ
ಕಮಲಜಾದಿಗಳಿಂದ ತುಳಿಸಿಕೊಳ್ಳುತ ಹೃದಯ
ಕಮಲದೊಳಗಿರುವ ಶ್ರೀ ವಿಜಯವಿಠಲನ ಕಂಡೆ 5

## 3

ಈ ಸೊಬಗ ಇನ್ಯಾವ ಕ್ಷೇತ್ರದಲಿ ಕಾಣೆ ಪಲ್ಲವಿ
ವಾಸುದೇವ ಮುನಿಯಿಂದ ಕಾರಣವು ಇಲ್ಲುಂಟು ಅನುಪಲ್ಲವಿ

ರಾಜಧಾನಿಯ ನೋಡೆ ಇಂದ್ರ ಭವನಕೆ ಮಿಗಿಲು
ತೇಜದಲಿ ಚಂದ್ರಸೂರ್ಯರಿಗೆ ಸೋಲು
ಪೂಜೆಯಲ್ಲಿ ನೋಡೆ ಸರ್ವಧರಣೆಗೆ ಮೇಲು
ಭೋಜನದಲಿ ನೋಡೆ ಅಮೃತ ಪೋಲು 1

ಉತ್ಸಾಹದಲಿ ನೋಡೆ ನಹಿಪ್ರತಿ ನಹಿಪ್ರತಿ
ಸತ್ಸಂಗದಲಿ ನೋಡೆ ಬುಧಸಂಗತಿ
ಸಚ್ಚರಿತೆಯಲಿ ನೋಡೆ ಶುದ್ಧ ಸತ್ವ ನೀತಿ
ಮತ್ಸರ ಮರೆತು ನೋಡೆ ಇಲ್ಲೆ ಮುಕುತಿ 2

ಓಲಗದಲಿ ನೋಡೆ ಸತ್ಯ ಲೋಕಕೆ ಸಮ
ಪೇಳ್ವ ಕೀರ್ತನೆ ನೋಡೆ ದೇವಧಾಮ
ಬಾಲಉಡುಪಿಯ ಕೃಷ್ಣ ವಿಜಯವಿಠ್ಠಲನ್ನ
ಆಳಾದ ಮನುಜಂಗೆ ಫಲವು ನಿಷ್ಕಾಮ

## 4

ಸಾಧನಕೆ ಬಗೆಗಾಣೆನೆನ್ನ ಬಹುದೆ ಪಲ್ಲವಿ
ಸಾದರದಿ ಗುರುಕರುಣ ತಾ ಪಡೆದ ಬಳಿಕ ಅನುಪಲ್ಲವಿ

ಕಂಡ ಕಂಡದ್ದೆಲ್ಲ ಕಮಲನಾಭನ ಮೂರ್ತಿ
ಉಂಡುಉಟ್ಟದ್ದೆಲ್ಲ ವಿಷ್ಣು ಪೂಜೆ
ತಂಡತಂಡದವಾರ್ತೆ ವಾರಿಜಾಕ್ಷನ ಕೀರ್ತಿ
ಹಿಂಡು ಮಾತುಗಳೆಲ್ಲ ಹರಿಯನಾಮ 1

ವಾಗತ್ಯ ಪಡುವುದೆ ವಿಧಿನಿಷೇಧಾರಣೆ
ರೋಗಾನುಭವವೆಲ್ಲ ಉಗ್ರ ತಪವು
ಆಗದವರಾಡಿಕೊಂಬುದೆ ಆಶೀರ್ವಾದ
ಬೀಗರುಪಚಾರವೇ ಭೂತದಯವು 2

ಮೈಮರೆತು ಮಲಗುವುದೆ ಧರಣಿಗೆ ನಮಸ್ಕಾರ
ಕೈಮಾರಿ ಹೋದದ್ದೆ ಕೃಷ್ಣಾರ್ಪಣ
ಮೈಮನೋವೃತ್ತಿಗಳೆ ವಿಷಯದಲಿ ವೈರಾಗ್ಯ
ಹೊಯ್ಮಾಲಿತನವೆಲ್ಲ ಹರಿಯ ವಿಹಾರ 3

ಹಿಡಿದ ಹಟ ಪೂರೈಸಲದು ಹರಿಯ ಸಂಕಲ್ಪ
ನಡೆದಾಡುವೋದೆಲ್ಲ ತೀರ್ಥಯಾತ್ರೆ
ಬಡತನವು ಬರಲದೇ ಭಗವದ್ಭಜನೆ ಯೋಗ
ಸಡಗರದಲಿಪ್ಪುದೆ ಶ್ರೀಶನಾಜ್ಞೆ 4

ಬುದ್ಧಿ ಸಾಲದೆ ಸುಮ್ಮನಿರುವುದೇ ಸಮ್ಮತವು
ಯದೃಚ್ಛಾಲಾಭವೇ ಸುಖವುಯೆನಲು
ಮಧ್ವಾಂತರ್ಗತ ಶ್ರೀ ವಿಜಯ ವಿಠ್ಠಲರೇಯ
ಹೃದ್ಗತಾರ್ಥವ ತಿಳಿದು ಒಪ್ಪಿಸಿಕೊಳನೆ 5

## ಗೋಪಾಲದಾಸ

ಏನ ಬೇಡಲೊ ನಿನ್ನ ಬಳಿಗೆ ಬಂದು ಪಲ್ಲವಿ
ನೀನಿತ್ತ ಸೌಭಾಗ್ಯ ನಿಬಿಡವಾಗಿದೆ ಎನಗೆ ಅನುಪಲ್ಲವಿ

ಜನನಿಯ ಕೊಡುಯೆಂದು ಜಗದೀಶ ಬೇಡುವೆನೆ
ಜನನಿಯೇನಿತ್ತಳಾ ಧ್ರುವರಾಯಗೆ
ಜನಕನ ಕೊಡುಯೆಂದು ಜಯವಂತ ಬೇಡುವೆನೆ
ಜನಕನೇನಿತ್ತ ನಾ ಪ್ರಹ್ಲಾದಗೆ 1

ಅನುಜನನು ಕೊಡುಯೆಂದು ಅತಿಶಯದಿ ಬೇಡುವೆನೆ
ಅನುಜನೇನಿತ್ತನೈ ಆ ವಾಲಿಗೆ
ಧನವನೇ ಕೊಡುಯೆಂದು ದೈನ್ಯದಲಿ ಬೇಡುವೆನೆ
ಧನಗಳಿಸಿದ ಸುಯೋಧನನೇನಾದ ಕೊನೆಗೆ 2

ಸತಿಯಳ ಕೊಡುಯೆಂದು ಮತಿವಂತ ಬೇಡುವೆನೆ
ಸತಿಯಿಂದ ದ್ಯುನಾಮ ವಸು ಏನಕಂಡ
ಸುತರನೇ ಕೊಡುಯೆಂದು ಸುಖದಿನಾ ಬೇಡುವೆನೆ
ಸುತರಿಂದ ಧೃತರಾಷ್ಟ್ರಗತಿಯೇನು ಕಂಡ 3

ಬಂಧುಗಳ ಕೊಡುಯೆಂದು ಚಂದದಲಿ ಬೇಡುವೆನೆ
ಬಂಧುಗಳೇನಿತ್ತರಾ ಗಜರಾಜಗೆ
ಅಂದಣವ ಏರುವ ಭಾಗ್ಯವ ಬೇಡುವೆನೆ
ಅಂದಣೇರಿದ ನಹುಷ ಏನಾದ ಕೊನೆಗೆ 4

ಬೇಡುವೆನೊ ನಾನೊಂದು ಬೇಡತಕ್ಕುದ ದೇವ
ನೀಡಲೆಂಬುದು ನಿನ್ನ ಮನದೊಳಿತ್ತೆ
ಮೂಡಲಾದ್ರೀಶ ಗೋಪಾಲ ವಿಠ್ಠಲರೇಯ
ಬೇಡದಂದದಿ ಪಾರುಮಾಡಯ್ಯ ಧೊರೆಯೆ 5

## ಜಗ್ನಥದಾಸ

ವಂದಿಪೆನಮ್ಮ ಮುದ್ದುಶಾರದೆ ಶರ
ಚಂದಿರವದನೆ ಶಾರದೆ ಪಲ್ಲವಿ

ಇಂದೀವರಾಕ್ಷಿ ಶತಾನಂದನ ಪ್ರಿಯೆ ದೇವಿ
ಕುಂದುನೋಡದೆ ಶ್ರುತಿವಂದ್ಯೆ ಜ್ಞಾನವನೀಡೆ ಅನುಪಲ್ಲವಿ

ಸಿತಾಬ್ಜಾಸನೆ ಸುಖದಾಯಕೀ, ಸುರ
ನಾಥಾರಾಧಿತೆ ವಿಶ್ವನಾಯಕೀ
ವೀತದುರಿತೆ ಶಿವಮಾತೆ ಸದ್ಗುಣಮಣಿ
ವ್ರಾತೆ ವೇದೋಪನಿಷದ್ಗೀತೆ ವಾಗ್ದೇವಿ ಮಾತೆ 1

ಕೋಕಿಲವಾಣಿ ಕವಿಸೇವಿತೆ ಎನ್ನ
ವಾಕು ಲಾಲಿಸೆ ಮುನಿವಂದಿತೆ
ಪೋಕನೆಂದು ಸುವಿವೇಕ ಬುದ್ಧಿಯನಿತ್ತು
ಸಾಕು ಸಜ್ಜನರನ್ನು ಮನ್ನಿಸುವಾಕುತಾಯೆ 2

ಪಾತಕಿಗಳೊಡನಾಡಿ ನಾ ನಿನ್ನ
ಪೂತಾಬ್ಜಪದ ಭಜಿಸದ್ಹೋದೆನಾ
ಪಾತಕವೆಣಿಸದೆ ಸೀತಾರಮಣ ಜಗ
ನ್ನಾಥವಿಠ್ಠಲನಂಘ್ರಿ ಗೀತಾಮೃತವನುಣಿಸು 3

# ಕವಿ ಕಾವ್ಯ ಪರಂಪರೆ ಮಾಲೆಯಲ್ಲಿ ಪ್ರಕಟವಾಗಿರುವ ಗ್ರಂಥಗಳು

| | |
|---|---|
| ಕವಿರಾಜಮಾರ್ಗ | ಒಂದನೆಯ ನಾಗವರ್ಮ |
| ಎರಡನೆಯ ನಾಗವರ್ಮ | ಹರಿಹರದೇವ |
| ರನ್ನ* | ಕುಮಾರವ್ಯಾಸ* |
| ಜನ್ನ* | ಪಂಪ* |
| ವಡ್ಡಾರಾಧನೆ* | ನಾಗಚಂದ್ರ* |
| ಮುದ್ದಣ | ವ್ಯಾಕರಣಗಳು* |
| ಜನಪದ ಸಾಹಿತ್ಯ | ಲಕ್ಷ್ಮೀಶ |
| ಯಕ್ಷಗಾನ* | ರಾಘವಾಂಕ* |
| ತಿರುಮಲಾರ್ಯ | ನೇಮಿಚಂದ್ರ |

ರತ್ನಾಕರವರ್ಣಿ

* ಪ್ರತಿಗಳು ಮುಗಿದಿವೆ.

## ಬರಲಿರುವ ಗ್ರಂಥಗಳು

| | |
|---|---|
| ಬಸವೇಶ್ವರ (ಅಚ್ಚಿನಲ್ಲಿ) | ಚಾಮರಸ (ಅಚ್ಚಿನಲ್ಲಿ) |
| ಪುರಂದರದಾಸರು | ಕನಕದಾಸರು |
| ಸರ್ವಜ್ಞ | ಷಡಕ್ಷರದೇವ |
| ವಚನ ಸಾಹಿತ್ಯ | ಶಾಸನ ಸಾಹಿತ್ಯ |